ಸೃಜನಶೀಲ ಕಲಿಕೆ

# ತೊತ್ತೊ-ಚಾನ್

## ಕಿಟಕಿಯ ಬಳಿ ನಿಂತ ಪುಟ್ಟ ಹುಡುಗಿ



ತೆತ್ಸುಕೊ ಕುರೊಯಾನಾಗಿ

ಚಿತ್ರ:

ಚಿಹಿರೊ ಇವಾಸಾಕಿ

ಅನುವಾದ:

ವಿ. ಗಾಯತ್ರಿ



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

ISBN 81-237-3103-5

ಮೊದಲ ಮುದ್ರಣ: 2000 (ಶಕ 1921)

Totto-Chan *(Kannada)*

**ರೂ. 40.00**

ನಿರ್ದೇಶಕರು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ
ಎ-5, ಗ್ರೀನ್ ಪಾರ್ಕ್, ಹೊಸದೆಹಲಿ - 110 016 ಇವರಿಂದ ಪ್ರಕಟಿತ.

ಸೊಸಾಕು ಕೊಬಾಯಾಶಿ
ಅವರ ನೆನಪಿಗೆ
ಸಮರ್ಪಿತ



# ಪರಿವಿಡಿ

# ಲೇಖಕಿಯ ಮಾತು

ತೊಮೊಯೆ ಎನ್ನುವ ಶಾಲೆ ಮತ್ತು ಅದನ್ನು ಸ್ಥಾಪಿಸಿ ನಡೆಸಿದ ಸೊಸಾಕು ಕೊಬಾಯಾಶಿ ಅವರ ಬಗ್ಗೆ ಬರೆಯಬೇಕೆನ್ನುವುದು ನನ್ನ ಬಹುದಿನಗಳ ತೀವ್ರ ಬಯಕೆಯಾಗಿತ್ತು.

ಈ ಪುಸ್ತಕದಲ್ಲಿನ ಯಾವ ಘಟನಾವಳಿಗಳೂ ನನ್ನ ಕಲ್ಪನೆಯಿಂದ ಮೂಡಿಬಂದುವಲ್ಲ. ಅವೆಲ್ಲ ನಿಜವಾಗಿ ನಡೆದಂಥವು ಮತ್ತು ಅದೃಷ್ಟವಶಾತ್ ಅವುಗಳಲ್ಲಿ ಅನೇಕ ಘಟನೆಗಳು ನನ್ನ ನೆನಪಿನಲ್ಲಿ ಇನ್ನೂ ಉಳಿದಿವೆ. ಇದನ್ನು ಬರೆಯುವುದರ ಜತೆಗೇ ನಾನು ನಡೆಸಿಕೊಡಲಾರದೇ ಹೋದ ವಾಗ್ದಾನವೊಂದನ್ನು ಈಡೇರಿಸುವ ಬಗ್ಗೆ ಕೂಡ ತವಕಗೊಂಡಿದ್ದೇನೆ.ಈ ಪುಸ್ತಕದ ಒಂದು ಅಧ್ಯಾಯದಲ್ಲಿ ಹೇಳಿರುವ ಹಾಗೆ, ನಾನು ಶಾಲೆಯಲ್ಲಿ ಮಗುವಾಗಿದ್ದಾಗ, ಕೊಬಾಯಾಶಿ ಅವರಿಗೆ ದೊಡ್ಡವಳಾದ ಮೇಲೆ ತೊಮೊಯೆದಲ್ಲಿ ಕಲಿಸುವುದಾಗಿ ಮಾತು ಕೊಟ್ಟಿದ್ದೆ. ಅದನ್ನು ಏನೇ ಆದರೂ ನಾನು ನಡೆಸಿಕೊಡಲಾಗಿರಲಿಲ್ಲ. ಬದಲಾಗಿ, ಕೊಬಾಯಾಶಿ ಎಂತಹ ವ್ಯಕ್ತಿಯಾಗಿದ್ದರು, ಮಕ್ಕಳ ಬಗ್ಗೆ ಅವರ ಪ್ರೇಮ ಮತ್ತು ಅವರು ಪಾಠ ಹೇಳುತ್ತಿದ್ದ ರೀತಿ ಇವೆಲ್ಲವನ್ನು ನನ್ನಿಂದ ಎಷ್ಟು ಸಾಧ್ಯವೋ ಅಷ್ಟು ಜನರಿಗೆ ಹೇಳಿದ್ದೆ.

ಕೊಬಾಯಾಶಿ ಅವರು 1963ರಲ್ಲಿ ತೀರಿಕೊಂಡರು. ಅವರಿಂದು ಬದುಕಿದ್ದಿದ್ದರೆ ಇನ್ನೂ ಎಷ್ಟೋ ವಿಚಾರಗಳನ್ನು ನನಗೆ ಹೇಳಿರುತ್ತಿದ್ದರು. ಕೇವಲ ಬಾಲ್ಯದ ಸುಂದರ ಘಟನೆಗಳಂತೆ ತೋರುವ ಇಲ್ಲಿನ ಎಷ್ಟೋ ಸಂಗತಿಗಳು ವಾಸ್ತವದಲ್ಲಿ ಕೆಲ ನಿರ್ದಿಷ್ಟ ಉದ್ದೇಶಗಳನ್ನು ಮನದಲ್ಲಿರಿಸಿ ಅದನ್ನು ಕಾರ್ಯರೂಪಕ್ಕಿಳಿಸಲು ಮಾಡಿದ ಪ್ರಾಮಾಣಿಕ ಪ್ರಯತ್ನದ ವಿಚಾರಗಳಾಗಿವೆ ಎನ್ನುವುದು ಇದನ್ನು ಬರೆಯುವಾಗ ನನಗೆ ಮನದಟ್ಟಾಗಿದೆ. "ಕೊಬಾಯಾಶಿ ಅವರ ಮನದಲ್ಲಿ ಹೀಗೇ ಇದ್ದಿತೇನೋ" ಎಂದು ನಾನು ಯೋಚಿಸುತ್ತಲೇ ಇರುತ್ತೇನೆ. ಅಥವಾ "ಇದು ಇವರಿಗೆ ಹೇಗೆ ಹೊಳೆದಿರಬಹುದು" ಎಂದುಕೊಳ್ಳುತ್ತೇನೆ. ಪ್ರತಿಯೊಂದು ಅನ್ವೇಷಣೆಯ ಬಗೆಯೂ ಚಕಿತಗೊಂಡಿದ್ದೇನೆ, ಭಾವುಕಳಾಗಿದ್ದೇನೆ. ಹಾಗೂ ಅವರ ಬಗ್ಗೆ ಕೃತಜ್ಞತೆಯ ಭಾವ ಮೂಡಿಬರುತ್ತದೆ.

ನನ್ನ ವಿಚಾರವನ್ನೇ ತೆಗೆದುಕೊಂಡರೆ, ಅವರು ನನಗೆ ಪದೇ ಪದೇ "ನೀನು ನಿಜವಾಗಿಯೂ ಒಳ್ಳೆಯ ಹುಡುಗಿ!" ಎಂದು ಹೇಳುತ್ತಿದ್ದುದು ಮುಂದೆ ನನಗೆ ಬಹಳಷ್ಟು ಸಹಾಯವಾಯಿತು. ನಾನು ತೊಮೊಯೆ ಸೇರಿಕೊಳ್ಳದೆ ಹೋಗಿದ್ದರೆ, ಕೊಬಾಯಾಶಿಯವರನ್ನು ಭೇಟಿಯಾಗದೇ ಇದ್ದಿದ್ದರೆ ನನಗೆ 'ಕೆಟ್ಟ ಹುಡುಗಿ' ಎಂಬ

ಹಣೆಪಟ್ಟಿ ದೊರೆಯುತ್ತಿತ್ತೋ ಏನೋ. ಮುಂದೆಯೂ ಅದೇ ಕೀಳರಿಮೆ ಮತ್ತು ಗೊಂದಲದಿಂದ ಕೂಡಿರುತ್ತಿದ್ದೆ.

1945ರಲ್ಲಿ ಟೋಕಿಯೋ ಮೇಲಿನ ಬಾಂಬ್ ದಾಳಿಯಲ್ಲಿ ತೊಮೊಯೆ ನಾಶಗೊಂಡಿತು. ಕೊಬಾಯಾಶಿಯವರು ತಮ್ಮದೇ ಹಣದಿಂದ ಅದನ್ನು ಪ್ರಾರಂಭಿಸಿದ್ದರಿಂದ ಅದನ್ನು ಮರುಸ್ಥಾಪಿಸಲು ಸಮಯ ಹಿಡಿಯಿತು. ಯುದ್ಧಾನಂತರ ಅವರು ಅದೇ ಹಳೆಯ ಜಾಗದಲ್ಲಿಯೇ ಶಿಶುಕೇಂದ್ರವೊಂದನ್ನು ಪ್ರಾರಂಭಿಸಿದರು. ಜೊತೆಗೆ ಈಗಿನ ಕುನಿತಾಚಿ ಸಂಗೀತ ಶಿಕ್ಷಣ ಕಾಲೇಜಿನ ಮಕ್ಕಳ ಶಿಕ್ಷಣ ವಿಭಾಗವನ್ನು ಸ್ಥಾಪಿಸುವಲ್ಲಿ ಸಹಾಯ ಮಾಡಿದರು. ಅಲ್ಲಿ ಅವರು ಸಂಗೀತವ್ಯಾಯಾಮವನ್ನು ಕಲಿಸಿದರು ಮತ್ತು ಕುನಿತಾಚಿ ಪ್ರಾಥಮಿಕ ಶಾಲೆಯನ್ನು ಸ್ಥಾಪಿಸುವಲ್ಲಿ ಸಹಾಯಕರಾಗಿ ದುಡಿದರು. ತಮ್ಮ ಆದರ್ಶದ ಶಾಲೆಯನ್ನು ಮತ್ತೊಮ್ಮೆ ಸ್ಥಾಪಿಸುವ ಮುನ್ನವೇ ಅವರು 69ನೇ ವಯಸ್ಸಿನಲ್ಲಿ ತೀರಿಕೊಂಡರು.

ತೊಮೊಯೆ ಗಾಕುಯೆನ್ ಟೋಕಿಯೋದ ನೈರುತ್ಯ ಭಾಗದಲ್ಲಿತ್ತು. ಅದು ತೊಯಾಕೊ ರೈಲ್ವೆ ಮಾರ್ಗದಲ್ಲಿತ್ತು. ಅಲ್ಲಿಗೆ ಜಿಯುಗಾವೋಕ ರೈಲ್ವೆ ನಿಲ್ದಾಣದಿಂದ ಮೂರು ನಿಮಿಷದ ನಡಿಗೆ. ಈಗ ಈ ಸ್ಥಳವನ್ನು ಸಂಪೂರ್ಣವಾಗಿ ಪೀಕಾಕ್ ಸೂಪರ್ ಮಾರ್ಕೆಟ್ ಮತ್ತು ವಾಹನಗಳನ್ನು ನಿಲ್ಲಿಸುವ ಜಾಗಗಳು ಆವರಿಸಿಕೊಂಡಿವೆ. ಹಳೆಯ ನೆನಪುಗಳನ್ನು ಹೊತ್ತು ನಾನು ಕೆಲದಿನಗಳ ಹಿಂದೆ ಅಲ್ಲಿಗೆ ಹೋಗಿದ್ದೆ. ಅಲ್ಲಿ ಶಾಲೆ ಅಥವಾ ಅದರ ಮೈದಾನಗಳೊಂದೂ ಉಳಿದಿಲ್ಲವೆಂದು ನನಗೆ ಗೊತ್ತಿತ್ತು. ರೈಲುಬಂಡಿ ತರಗತಿಗಳು ಮತ್ತು ಆಟದ ಮೈದಾನ ಇದ್ದೆಡೆಯಲ್ಲೆಲ್ಲಾ ನಿಧಾನಕ್ಕೆ ಕಾರು ಬಿಟ್ಟುಕೊಂಡು ತಿರುಗಿದೆ. ವಾಹನ ನಿಲ್ಲಿಸುವ ಜಾಗದ ಉಸ್ತುವಾರಿ ನೋಡಿಕೊಳ್ಳುತ್ತಿದ್ದ ಮನುಷ್ಯ ನನ್ನತ್ತ ಕೂಗಿ ಕೂಗಿ ಹೇಳಿದ: "ಒಳಗೆ ಬರಬೇಡಿ, ಒಳಗೆ ಬರಬೇಡಿ, ಜಾಗ ಇಲ್ಲ!"

"ನಾನು ಕಾರು ನಿಲ್ಲಿಸೋದಿಲ್ಲ" ಎಂದು ಹೇಳಬೇಕೆಂದುಕೊಂಡೆ.

"ಸುಮ್ಮನೆ ನೆನಪುಗಳನ್ನು ಮೆಲುಕು ಹಾಕುತ್ತಿದ್ದೇನೆ" ಎಂಬುದು ಅವನಿಗೇನೂ ಅರ್ಥವಾಗುವಂತಿರಲಿಲ್ಲ. ಆದ್ದರಿಂದ ಸುಮ್ಮನೇ ಹೋದೆ. ಆದರೆ ತಡೆಯಲಾರದ ದುಃಖ ಉಮ್ಮಳಿಸಿ ಬಂದು ಕಣ್ಣೀರು ಕೆನ್ನೆಯಿಂದುರುಳಿತು.

ಪ್ರಪಂಚದಾದ್ಯಂತವೂ ಆದರ್ಶ ಶಾಲೆಗಳನ್ನು ಸ್ಥಾಪಿಸುವ ಕನಸು ಹೊತ್ತ, ಉದಾತ್ತ ಕಲ್ಪನೆಗಳುಳ್ಳ, ಮಕ್ಕಳ ಬಗ್ಗೆ ಅಪಾರ ಪ್ರೇಮವುಳ್ಳ ಅತ್ಯುತ್ತಮ ಶಿಕ್ಷಣ ತಜ್ಞರು ಇರುವರೆನ್ನುವುದರಲ್ಲಿ ನನಗೆ ಅನುಮಾನವೇ ಇಲ್ಲ. ಈ ಕನಸುಗಳನ್ನು ನನಸಾಗಿಸುವುದು ಎಂತಹ ಕಷ್ಟದ ಕೆಲಸ ಎನ್ನುವುದೂ ನನಗೆ ಗೊತ್ತು. 1937ರಲ್ಲಿ ತೊಮೊಯೆ ಪ್ರಾರಂಭಿಸುವ ಮುನ್ನ ಕೊಬಾಯಾಶಿಯವರು ಅನೇಕಾನೇಕ ವರ್ಷಗಳ ಅಧ್ಯಯನ ನಡೆಸಿದ್ದರು. ಅದು 1945ರಲ್ಲಿ ಸುಟ್ಟುಹೋಯಿತು. ಹೀಗಾಗಿ ಅದರ ಕಾಲಾವಧಿ ತುಂಬಾ ಸಂಕ್ಷಿಪ್ತವಾಗಿತ್ತು.

ನಾನು ತೊಮೊಯೆದಲ್ಲಿದ್ದ ಆ ಸಮಯದಲ್ಲಿ ಕೊಬಾಯಾಶಿಯವರು ಅತ್ಯುತ್ಸಾಹದ ಸ್ಥಿತಿಯಲ್ಲಿದ್ದರು ಹಾಗೂ ಅವರ ಯೋಜನೆಗಳು ಅತ್ಯುತ್ತಮ

ರೀತಿಯಲ್ಲಿ ಕಾರ್ಯರೂಪಕ್ಕೆ ಇಳಿಯುತ್ತಿದ್ದವು. ಯುದ್ಧ ನಡೆಯದೇ ಹೋಗಿದ್ದರೆ ಎಷ್ಟೊಂದು ಮಕ್ಕಳು ಅದರ ಲಾಭ ಪಡೆಯುತ್ತಿದ್ದರು ಎಂದು ಯೋಚಿಸಿದಾಗ ತುಂಬಾ ದುಃಖವಾಗುತ್ತದೆ.

ನಾನು ಈ ಪುಸ್ತಕದಲ್ಲಿ ಕೊಬಾಯಾಶಿಯವರ ಶಿಕ್ಷಣ ವಿಧಾನಗಳನ್ನು ವಿವರಿಸಲು ಪ್ರಯತ್ನಿಸಿದ್ದೇನೆ. ಎಲ್ಲ ಮಕ್ಕಳಲ್ಲೂ ಜನ್ಮತಃ ಒಳ್ಳೆಯ ಸ್ವಭಾವವಿರುತ್ತದೆ. ಆದರೆ ಅವರ ಪರಿಸರ ಮತ್ತು ದೊಡ್ಡವರ ಸಲ್ಲದ ಪ್ರಭಾವದಿಂದಾಗಿ ಅದು ಬಲುಬೇಗ ನಾಶಗೊಳ್ಳುತ್ತದೆ ಎಂದು ಅವರು ನಂಬಿದ್ದರು. ಮಕ್ಕಳ ಈ ಒಳ್ಳೆಯ ಸ್ವಭಾವವನ್ನು ಅನಾವರಣಗೊಳಿಸಿ ಬೆಳೆಸುವುದರ ಮೂಲಕ ಅವರು ಸ್ವಂತಿಕೆಯುಳ್ಳ ವಯಸ್ಕರಾಗಿ ಬೆಳೆಯಲು ಸಹಾಯ ಮಾಡುವುದು ಅವರ ಗುರಿಯಾಗಿತ್ತು.

ಕೊಬಾಯಾಶಿಯವರು ಸಹಜತೆಗೆ ತುಂಬಾ ಬೆಲೆ ಕೊಡುತ್ತಿದ್ದರು. ಮಕ್ಕಳ ಸ್ವಭಾವಗಳು ಎಷ್ಟು ಸಹಜವಾಗಿ ಬೆಳೆಯಲು ಸಾಧ್ಯವೋ ಅಷ್ಟೂ ಬೆಳೆಯಲಿ ಎಂದು ಆಶಿಸುತ್ತಿದ್ದರು. ಅವರು ಪ್ರಕೃತಿಯನ್ನು ಪ್ರೀತಿಸುತ್ತಿದ್ದರು. ಅವರ ಕೊನೆಯ ಮಗಳು ಮಿಯೋ-ಚಾನ್ ತಾನು ಸಣ್ಣವಳಿದ್ದಾಗ ತಂದೆ ತನ್ನನ್ನು ವಾಯುವಿಹಾರಕ್ಕೆ ಕರೆದೊಯ್ಯುತ್ತಿದ್ದುದಾಗಿಯೂ, "ಹೋಗಿ ಪ್ರಕೃತಿಯಲ್ಲಿನ ತಾಳ-ಲಯಗಳನ್ನು ಗುರುತಿಸೋಣ" ಎನ್ನುತ್ತಿದ್ದುದಾಗಿಯೂ ನನಗೆ ಹೇಳುತ್ತಿದ್ದಳು.

ಅವರು ಅವಳನ್ನು ಒಂದು ದೊಡ್ಡ ಮರದ ಬಳಿ ಕರೆದುಕೊಂಡು ಹೋಗಿ ಹೇಗೆ ಅದರ ಕೊಂಬೆ-ಎಲೆಗಳು ತಂಗಾಳಿಯಲ್ಲಿ ತುಯ್ದಾಡುತ್ತವೆ ಎಂದು ತೋರಿಸುತ್ತಿದ್ದರು. ಎಲೆಗಳು, ರೆಂಬೆಕೊಂಬೆಗಳು ಮತ್ತು ಕಾಂಡಗಳ ನಡುವಿನ ಸಂಬಂಧವನ್ನು ವಿವರಿಸುತ್ತಿದ್ದರು. ಹಾಗೆಯೇ ಗಾಳಿಯ ಬಿರುಸಿಗೆ ತಕ್ಕಂತೆ ಎಲೆಗಳ ತುಯ್ದಾಟ ಹೇಗೆ ಭಿನ್ನವಾಗಿರುತ್ತದೆಂದು ವಿವರಿಸುತ್ತಿದ್ದರು. ಇದನ್ನೆಲ್ಲಾ ಗಮನಿಸುತ್ತಾ ಅವರು ಅವಾಕ್ಕಾಗಿ ನಿಲ್ಲುತ್ತಿದ್ದರು. ಗಾಳಿ ಇಲ್ಲದಿದ್ದಾಗ ಒಂದು ಸಣ್ಣ ಸುಳಿಗಾಳಿ ಸುಯ್‌ಗುಡುವವರೆಗೂ ಅಪಾರ ತಾಳ್ಮೆಯಿಂದ ಕಾಯುತ್ತಿದ್ದರು. ಅವರು ಗಾಳಿಯನ್ನು ಮಾತ್ರವಲ್ಲ, ನದಿಗಳನ್ನೂ ಗಮನಿಸುತ್ತಿದ್ದರು. ಹತ್ತಿರದ ಟಾಮ ನದಿಗೆ ಹೋಗಿ ನೀರು ಹರಿಯುವುದನ್ನು ನೋಡುತ್ತಿದ್ದರು. ಇದನ್ನೆಲ್ಲಾ ಮಾಡುವಾಗ ತಮಗೆ ದಣಿವೆಂಬುದೇ ಇರುತ್ತಿರಲಿಲ್ಲವೆಂದು ಅವಳು ನನಗೆ ಹೇಳುತ್ತಿದ್ದಳು.

ಶಿಕ್ಷಣ ವ್ಯವಸ್ಥೆಯ ಮೇಲೆ ಕಟ್ಟುನಿಟ್ಟಿನ ಹಿಡಿತವಿದ್ದ ಆ ಯುದ್ಧಕಾಲದಲ್ಲಿ ಇಷ್ಟೊಂದು ಅನೌಪಚಾರಿಕ ಸ್ವಚ್ಛಂದ ವಾತಾವರಣದಲ್ಲಿ ಪ್ರಾಥಮಿಕ ಶಾಲೆ ನಡೆಸಲು ಅಧಿಕಾರಶಾಹಿ ಬಿಟ್ಟಿದ್ದಾದರೂ ಹೇಗೆ ಎಂದು ಓದುಗರಿಗೆ ಆಶ್ಚರ್ಯವಾಗಬಹುದು. ಕೊಬಾಯಾಶಿಯವರು ಪ್ರಚಾರವನ್ನು ದ್ವೇಷಿಸುತ್ತಿದ್ದರು. ಯುದ್ಧಕ್ಕೆ ಮುಂಚೆ ಕೂಡ ಅವರು ಶಾಲೆಯ ಛಾಯಾಚಿತ್ರವನ್ನು ತೆಗೆಯಲು ಬಿಡುತ್ತಿರಲಿಲ್ಲ ಅಥವಾ ಅದರ ಅನೌಪಚಾರಿಕತೆಯ ಬಗ್ಗೆ ಬೇರೆ ಯಾವುದೇ ರೀತಿಯ ಪ್ರಚಾರಕ್ಕೆ ಅವಕಾಶ ಕೊಡುತ್ತಿರಲಿಲ್ಲ. ಬಹುಶಃ ಈ ಕಾರಣದಿಂದಲೇ 50ಕ್ಕೂ ಕಡಿಮೆ ಮಕ್ಕಳಿದ್ದ ಈ ಸಣ್ಣ ಶಾಲೆ ಯಾರ ಗಮನಕ್ಕೂ ಬಾರದೆ ಮುಂದುವರೆಯಲು ಸಾಧ್ಯವಾಯಿತು. ಇನ್ನೊಂದು ವಿಷಯವೆಂದರೆ, ಶಿಕ್ಷಣ ಸಚಿವಾಲಯದಲ್ಲಿ ಕೊಬಾಯಾಶಿಯವರಿಗೆ

ಮಕ್ಕಳ ಶಿಕ್ಷಣ ತಜ್ಞರಾಗಿ ತುಂಬಾ ಘನತೆ ಗೌರವಗಳಿದ್ದವು.

ಪ್ರತಿವರ್ಷ ನವಂಬರ್ ಮೂರರಂದು ಆ ಅದ್ಭುತ ಕ್ರೀಡಾದಿನದ ನೆನಪಿನಲ್ಲಿ ತೊಮೊಯೆದ ವಿದ್ಯಾರ್ಥಿಗಳೆಲ್ಲರೂ, ಅವರು ಯಾವ ವರ್ಷದಲ್ಲಿ ಪದವಿ ಪಡೆದು ಹೋದವರೇ ಆಗಿರಲಿ, ಕುಹೊನ್‌ಬುತ್ಸು ದೇವಸ್ಥಾನದ ಕೋಣೆಯೊಂದರಲ್ಲಿ ಸಂತೋಷ ಕೂಟದಲ್ಲಿ ಸೇರುತ್ತಾರೆ. ನಾವೆಲ್ಲ ಈಗ ನಮ್ಮ ನಲವತ್ತರ ವಯಸ್ಸಿನಲ್ಲಿದ್ದರೂ - ಇನ್ನು ಕೆಲವರು ಐವತ್ತು ಸಮೀಪಿಸುತ್ತಿದ್ದರೂ, ನಮಗೆಲ್ಲಾ ಬೆಳೆದ ಮಕ್ಕಳುಗಳಿದ್ದರೂ, ಆ ದಿನಗಳಲ್ಲಿ ಕರೆಯುತ್ತಿದ್ದಂತೆಯೇ ಒಬ್ಬರನ್ನೊಬ್ಬರು ಮುದ್ದು ಹೆಸರಿನಿಂದ ಕರೆದುಕೊಳ್ಳುತ್ತೇವೆ. ಈ ಕೂಟಗಳು ಕೊಬಾಯಾಶಿಯವರು ನಮಗೆ ಬಿಟ್ಟುಹೋದ ಬಹಳಷ್ಟು ಸಂತೋಷದ ಸಂಗತಿಗಳಲ್ಲಿ ಒಂದು.

ನನ್ನನ್ನು ನನ್ನ ಮೊದಲ ಪ್ರಾಥಮಿಕ ಶಾಲೆಯಿಂದ ಹೊರಹಾಕಿದ್ದರೆಂಬುದು ನಿಜ. ನನಗೆ ಆ ಶಾಲೆಯ ಬಗ್ಗೆ ಅಷ್ಟಾಗಿ ನೆನಪಿಲ್ಲ. ನನ್ನ ತಾಯಿ ನನಗೆ ಬೀದಿ ಸಂಗೀತಗಾರರ ಮತ್ತು ಡೆಸ್ಕಿನ ಪ್ರಕರಣಗಳ ಬಗ್ಗೆ ಹೇಳಿದರು. ನನ್ನನ್ನು ಶಾಲೆಯಿಂದ ಹೊರಹಾಕಿದ್ದರೆಂದು ನಂಬುವುದು ನನಗೆ ಕಷ್ಟವಾಯಿತು. ನಾನು ನಿಜವಾಗಿಯೂ ಅಷ್ಟೊಂದು ತುಂಟಿಯಾಗಿದ್ದೆನಾ ? ಅದೇನೇಯಾದರೂ ಐದು ವರ್ಷಗಳ ಹಿಂದೆ ನಾನು ಭಾಗವಹಿಸಿದ್ದ ಟೆಲಿವಿಷನ್ ಕಾರ್ಯಕ್ರಮವೊಂದರಲ್ಲಿ ನನ್ನನ್ನು ಒಬ್ಬರಿಗೆ ಪರಿಚಯಿಸಲಾಯಿತು. ಅವರು ನನ್ನ ಆ ಹಳೆಯ ಶಾಲೆಯ ನನ್ನ ಪಕ್ಕದ ತರಗತಿಯ ಉಪಾಧ್ಯಾಯಿನಿಯಾಗಿದ್ದರಂತೆ. ಆಕೆ ಹೇಳಿದ್ದನ್ನು ಕೇಳಿ ನಾನು ದಂಗಾದೆ.

"ನೀನು ನನ್ನ ಪಕ್ಕದ ತರಗತಿಯಲ್ಲಿದ್ದೆ" ಆಕೆ ಹೇಳಿದಳು. "ನಾನು ಬೋಧನೆಯ ಕೋಣೆಗೆ ಹೋಗುವಾಗಲೆಲ್ಲ ನೀನು ಏಕೋ ಕಾರಿಡಾರಿನಲ್ಲಿ ನಿಂತಿರುವುದನ್ನು ನೋಡುತ್ತಿದ್ದೆ. ನಾನು ಹೊರಗೆ ಹೋಗುವಾಗ ನೀನು ನನ್ನನ್ನು ತಡೆದು, 'ನನ್ನನ್ನೇಕೆ ಹೀಗೆ ಹೊರಗಡೆ ನಿಲ್ಲಿಸಿದ್ದಾರೆ ?' ಎಂದು ಕೇಳುತ್ತಿದ್ದೆ. 'ಬೀದಿ ಸಂಗೀತಗಾರರೆಂದರೆ ನಿಮಗೆ ಇಷ್ಟವಿಲ್ಲವಾ ?' ಎಂದು ಒಮ್ಮೆ ನೀನು ಕೇಳಿದೆ. ನಿನ್ನನ್ನು ಏನು ಮಾಡಬೇಕೆಂದು ನಮಗೆ ತಿಳಿಯುತ್ತಿರಲಿಲ್ಲ. ಹೀಗಾಗಿ ನಾನು ಬೋಧನೆಯ ಕೋಣೆಗೆ ಹೋಗುವ ಮುನ್ನ ಹೊರಗೆ ಇಣುಕಿ ನೋಡುತ್ತಿದ್ದೆ. ನೀನು ಕಾರಿಡಾರಿನಲ್ಲಿ ನಿಂತಿದ್ದರೆ ನಾನು ಹೋಗುತ್ತಲೇ ಇರಲಿಲ್ಲ. ನಿನ್ನ ತರಗತಿಯ ಅಧ್ಯಾಪಕಿ ಅನೇಕ ಸಲ ನನ್ನ ಬಳಿ ನಿನ್ನ ಬಗ್ಗೆ ಮಾತನಾಡುತ್ತಿದ್ದರು. 'ಅವಳೇಕೆ ಹಾಗೆ ಎಂಬುದೇ ನನಗೆ ಅರ್ಥವಾಗುವುದಿಲ್ಲ' ಎನ್ನುತ್ತಿದ್ದರಾಕೆ. ಆದ್ದರಿಂದಲೇ ನಂತರದ ವರ್ಷಗಳಲ್ಲಿ ನೀನು ಟೆಲಿವಿಷನ್‌ನಲ್ಲಿ ಕಾಣಿಸಿಕೊಳ್ಳತೊಡಗಿದಾಗ ನಾನು ನಿನ್ನ ಹೆಸರನ್ನು ತಕ್ಷಣ ಗುರುತಿಸಿದೆ. ಎಷ್ಟೋ ವರ್ಷಗಳಾಗಿದ್ದರೂ ಒಂದನೇ ತರಗತಿಯಲ್ಲಿದ್ದ ನೀನು ಸ್ಪಷ್ಟವಾಗಿ ನನ್ನ ನೆನಪಲ್ಲಿದ್ದೆ."

ನನ್ನನ್ನು ಹೊರಗಡೆ ಕಾರಿಡಾರಿನಲ್ಲಿ ನಿಲ್ಲಿಸುತ್ತಿದ್ದರೇ ? ನನಗೆ ನೆನಪಿರಲಿಲ್ಲ. ನನಗೆ ಆಶ್ಚರ್ಯವಾಗಿತ್ತು. ಬೆಳಗಿನ ಟೆಲಿವಿಷನ್ ಕಾರ್ಯಕ್ರಮಕ್ಕೆ ಬರುವ ಬಿಳೀಕೂದಲಿನ ಯುವತಿಯಂತೆ ಕಾಣುವ, ಪ್ರೇಮಮಯಿ ಅಧ್ಯಾಪಕಿಯೇ ನನ್ನನ್ನು ಶಾಲೆಯಿಂದ ಹೊರಹಾಕಿದ್ದರೆಂಬುದನ್ನು ತಿಳಿಸಿದ್ದರು.

ನನ್ನ ಇಪ್ಪತ್ತನೇ ಹುಟ್ಟುಹಬ್ಬದವರೆಗೂ ಇದನ್ನು ನನ್ನ ಹತ್ತಿರ ಬಾಯಿಬಿಡದೇ ಹೋದ ನನ್ನ ಅಮ್ಮನಿಗೆ ಹೃದಯಪೂರ್ವಕ ಕೃತಜ್ಞತೆಗಳನ್ನು ನಾನಿಲ್ಲಿ ಸಲ್ಲಿಸಬಯಸುತ್ತೇನೆ. "ನೀನು ಪ್ರಾಥಮಿಕ ಶಾಲೆಯನ್ನೇಕೆ ಬದಲಾಯಿಸಿದೆಯೆಂದು ನಿನಗೆ ಗೊತ್ತಾ?" ಎಂದು ಅಮ್ಮ ಒಂದು ದಿನ ನನ್ನನ್ನು ಕೇಳಿದಳು. ನಾನು ಗೊತ್ತಿಲ್ಲವೆಂದ ಮೇಲೆ, "ಯಾಕೆಂದರೆ ನಿನ್ನನ್ನು ಹೊರಗೆ ಹಾಕಿದ್ದರು" ಎಂದು ಶಾಂತವಾಗಿ ಹೇಳಿದ್ದಳು.

ಆ ಸಮಯದಲ್ಲಿ ಅವಳು "ನಿನಗೇನಾಗುತ್ತೋ ಗೊತ್ತಿಲ್ಲ! ನಿನ್ನನ್ನು ಈಗಾಗಲೇ ಒಂದು ಶಾಲೆಯಿಂದ ಹೊರಹಾಕಿದ್ದಾರೆ. ಈ ಶಾಲೆಯಿಂದಲೂ ಹೊರಹಾಕಿದರೆ ಎಲ್ಲಿ ಹೋಗುತ್ತಿ?" ಹೀಗೇನಾದರೂ ಹೇಳಿದ್ದರೆ, ಮೊದಲ ದಿನ ತೊಮೊಯೆ ಗಾಕುಯೆನ್‌ನ ಗೇಟನ್ನು ಪ್ರವೇಶಿಸುವಾಗ ನನಗೆಷ್ಟು ಭಯವಾಗುತ್ತಿತ್ತು! ನಾನೊಂದು ದರಿದ್ರ ಎಂಬ ಭಾವನೆ ನನಗೆ ಬರುತ್ತಿತ್ತು. ಮರದ ಕಂಬಗಳಿದ್ದ ಗೇಟು ಮತ್ತು ರೈಲುಗಾಡಿ ತರಗತಿಗಳು ಅಷ್ಟೊಂದು ಆಪ್ಯಾಯವಾಗಿ ಕಾಣಲು ಸಾಧ್ಯವೇ ಆಗುತ್ತಿರಲಿಲ್ಲ. ಇಂಥ ಅಮ್ಮನನ್ನು ಪಡೆದ ನಾನೆಷ್ಟು ಅದೃಷ್ಟಶಾಲಿ!

ಯುದ್ಧ ಪ್ರಾರಂಭವಾದ ನಂತರ ತೊಮೊಯೆದ ಕೆಲವು ಛಾಯಾಚಿತ್ರಗಳನ್ನು ತೆಗೆಯಲಾಗಿತ್ತು. ಅವುಗಳಲ್ಲಿ ಪದವಿ ತರಗತಿಯ ಛಾಯಾಚಿತ್ರಗಳು ಅತ್ಯುತ್ತಮವಾಗಿದ್ದವು. ಪದವಿ ಪಡೆದು ಹೋಗುವ ತರಗತಿಯವರು ಸಾಮಾನ್ಯವಾಗಿ ಅಸೆಂಬ್ಲಿ ಹಾಲಿನ ಮೆಟ್ಟಿಲ ಮೇಲೆ ಕುಳಿತು ಫೋಟೋ ತೆಗೆಸಿಕೊಳ್ಳುತ್ತಿದ್ದರು. ಆದರೆ ಪದವಿ ವಿದ್ಯಾರ್ಥಿಗಳು ಇತರರನ್ನೂ "ಬನ್ನಿ, ಸೇರಿಕೊಳ್ಳಿ" ಎಂದು ಕೂಗುತ್ತಾ ಎಲ್ಲರೂ ಸೇರಿಕೊಳ್ಳುತ್ತಿದ್ದರಿಂದ ಯಾರು ಪದವಿ ತರಗತಿಯ ವಿದ್ಯಾರ್ಥಿಗಳು ಎಂದು ಗುರುತಿಸಲು ಸಾಧ್ಯವಾಗುತ್ತಿರಲಿಲ್ಲ. ಇದರ ಬಗ್ಗೆ ನಾವು ನಮ್ಮ ಮರುಸಮಾಗಮ ಕೂಟದಲ್ಲಿ ಚರ್ಚಿಸಿದ್ದೆವು. ಕೊಬಾಯಾಶಿಯವರು ಈ ಫೋಟೋ ತೆಗೆಯಬೇಕಾದ ಸಂದರ್ಭದ ಬಗ್ಗೆ ಏನೂ ಹೇಳುತ್ತಲೇ ಇರಲಿಲ್ಲ. ಔಪಚಾರಿಕವಾದ ಪದವೀಧರರ ಚಿತ್ರಗಳಿಗಿಂತ ಶಾಲೆಯಲ್ಲಿ ಎಲ್ಲ ಮಕ್ಕಳ ಜೀವಂತ ಚಿತ್ರಗಳನ್ನು ತೆಗೆಯುವುದೇ ಉತ್ತಮ ಎಂದವರು ಭಾವಿಸಿರಬೇಕು. ಅವುಗಳನ್ನೀಗ ನೋಡಿದರೆ ತೊಮೊಯೆದ ಪ್ರಾತಿನಿಧಿಕ ಫೋಟೋಗಳಂತೆ ಕಾಣುತ್ತವೆ.

ನಾನು ತೊಮೊಯೆದ ಬಗ್ಗೆ ಇನ್ನೂ ಹೆಚ್ಚು ಬರೆಯಬಹುದಿತ್ತು. ಆದರೆ ತೊತ್ತೊ-ಚಾನ್‌ಳಂತಹ ಸಣ್ಣ ಹುಡುಗಿ ಹಿರಿಯರ ಉತ್ತಮ ಪ್ರಭಾವದಿಂದ ಎಲ್ಲರೊಂದಿಗೆ ಹೊಂದಿಕೊಂಡು ಹೋಗಬಲ್ಲ ವ್ಯಕ್ತಿಯಾಗಿ ಹೇಗೆ ಬೆಳೆಯಬಲ್ಲಳು ಎಂಬುದನ್ನು ಎಲ್ಲರಿಗೆ ಮನವರಿಕೆ ಮಾಡಿಸಿದರೆ ಈ ನನ್ನ ಶ್ರಮ ಸಾರ್ಥಕವಾಗುತ್ತದೆ.

ಈಗ ತೊಮೊಯೆದಂತಹ ಶಾಲೆಗಳಿದ್ದಿದ್ದರೆ ಇಂದು ಕಂಡುಬರುತ್ತಿರುವ ಕ್ರೌರ್ಯ ಎಷ್ಟೋ ಕಡಿಮೆಯಾಗುತ್ತಿತ್ತು ಮತ್ತು ಮಕ್ಕಳು ಶಾಲೆ ಬಿಡುವುದೂ ಕಮ್ಮಿಯಾಗುತ್ತಿತ್ತು ಎನ್ನುವುದರಲ್ಲಿ ಅನುಮಾನವೇ ಇಲ್ಲ. ತೊಮೊಯೆದಲ್ಲಿ ಶಾಲೆ ಮುಗಿದ ನಂತರ ಯಾರಿಗೂ ಮನೆಗೆ ಹೋಗಲು ಮನಸ್ಸೇ ಬರುತ್ತಿರಲಿಲ್ಲ. ಮತ್ತೆ

ಬೆಳಿಗ್ಗೆ ಓಡೋಡಿ ಬರುತ್ತಿದ್ದೆವು. ಅದು ಅಂತಹ ಶಾಲೆಯಾಗಿತ್ತು.

ಈ ಅದ್ಭುತ ಶಾಲೆಯ ಸ್ಫೂರ್ತಿ ಮತ್ತು ಕರ್ತೃತ್ವ ಶಕ್ತಿಯಾದ ಸೊಸಾಕು ಕೊಬಾಯಾಶಿಯವರು ಹುಟ್ಟಿದ್ದು 1893ರ ಜೂನ್ 18ರಂದು, ಟೋಕಿಯೋದ ವಾಯುವ್ಯ ಭಾಗದ ಹಳ್ಳಿಯಲ್ಲಿ. ಪ್ರಕೃತಿ ಒಡನಾಟ ಮತ್ತು ಸಂಗೀತದ ಗೀಳು ಅವರಿಗೆ. ಬಾಲಕನಾಗಿದ್ದಾಗ ಅವರು ಹರಿವ ನದಿಯ ದಂಡೆಯಲ್ಲಿ ನಿಲ್ಲುತ್ತಿದ್ದರು. ಹರೂನ ಬೆಟ್ಟ ದೂರದಲ್ಲಿ ಕಾಣಿಸುತ್ತಿತ್ತು. ನದಿಯ ಕಲರವ ಅವರಿಗೆ ವಾದ್ಯಗೋಷ್ಠಿಯಂತೆ ಕೇಳಿಸುತ್ತಿತ್ತು; ಅವರ ಕಲ್ಪನೆಯಲ್ಲಿ ಮೂಡಿಬರುತ್ತಿತ್ತು.

ಅವರು ಬಡರೈತ ಕುಟುಂಬದ ಆರು ಮಕ್ಕಳಲ್ಲಿ ಕೊನೆಯವರು. ತಮ್ಮ ಪ್ರಾಥಮಿಕ ಶಿಕ್ಷಣದ ನಂತರ ಅವರು ಶಾಲೆಯಲ್ಲಿ ಸಹಶಿಕ್ಷಕರಾಗಿ ಸೇರಿಕೊಳ್ಳಬೇಕಾಯಿತು. ಅದಕ್ಕೆ ಬೇಕಾಗಿದ್ದ ಸರ್ಟಿಫಿಕೇಟನ್ನು ಅಷ್ಟು ಸಣ್ಣ ವಯಸ್ಸಿನಲ್ಲೇ ಪಡೆದದ್ದು ಅವರ ಅಸಾಧಾರಣ ಪ್ರತಿಭೆಯನ್ನು ತೋರಿಸುತ್ತದೆ. ಬಹುಬೇಗ ಅವರು ಟೋಕಿಯೋದ ಪ್ರಾಥಮಿಕ ಶಾಲೆಯಲ್ಲಿ ಒಂದು ಒಳ್ಳೆಯ ಸ್ಥಾನ ಗಳಿಸಿಕೊಂಡರು. ಅಲ್ಲವರು ಪಾಠದ ಜತೆ ಸಂಗೀತದ ಅಧ್ಯಯನವನ್ನೂ ಬೆರೆಸಿದರು. ಇದು ಅವರ ಕೊನೆಯವರೆಗಿನ ಮಹತ್ವಾಕಾಂಕ್ಷೆಯನ್ನು ಈಡೇರಿಸಿಕೊಳ್ಳಲು ನೆರವಾಯಿತು. ಅವರು ಜಪಾನಿನ ಹೆಸರಾಂತ ಸಂಗೀತ ಶಿಕ್ಷಣ ವಿಭಾಗವನ್ನು ಸೇರಿಕೊಂಡರು. ಈಗ, ಅದನ್ನು 'ಟೋಕಿಯೋ ಯೂನಿವರ್ಸಿಟಿ ಆಫ್ ಫೈನ್ ಆರ್ಟ್ಸ್ ಅಂಡ್ ಮ್ಯೂಸಿಕ್' ಎಂದು ಕರೆಯಲಾಗುತ್ತದೆ. ಪದವಿ ಪಡೆದ ನಂತರ ಅವರು ಸೈಕೈ ಪ್ರಾಥಮಿಕ ಶಾಲೆಯಲ್ಲಿ ಸಂಗೀತ ಶಿಕ್ಷಕರಾಗಿ ಸೇರಿಕೊಂಡರು. ಈ ಶಾಲೆಯನ್ನು ಸ್ಥಾಪಿಸಿದ ಹಾರುಜಿ ನಾಕಾಮುರ ಎಂಬುವವರು ಮಕ್ಕಳಿಗೆ ಪ್ರಾಥಮಿಕ ಶಿಕ್ಷಣ ಅತ್ಯಂತ ಮುಖ್ಯವಾದುದು ಎಂದು ನಂಬಿದ್ದ ವ್ಯಕ್ತಿ. ಅವರ ತರಗತಿಗಳು ಚಿಕ್ಕದಾಗಿರುತ್ತಿದ್ದುವು. ಅವರು ಮಗುವಿನಲ್ಲಿನ ತನ್ನತನವನ್ನು ಹೊರತಂದು ಆತ್ಮಾಭಿಮಾನವನ್ನು ಉತ್ತೇಜಿಸಲು ಸಾಧ್ಯವಾಗುವಂತಹ ಮುಕ್ತ ಪಠ್ಯಕ್ರಮವನ್ನು ಪಾಲಿಸುತ್ತಿದ್ದರು. ಬೆಳಗಿನ ಹೊತ್ತು ಮಾತ್ರ ಪಾಠಗಳಿರುತ್ತಿದ್ದವು. ಮಧ್ಯಾಹ್ನದ ಸಮಯಗಳನ್ನು ವಾಯುವಿಹಾರ, ಸಸ್ಯ ಸಂಗ್ರಹಣೆ, ಚಿತ್ರ ಬರೆಯುವುದು, ಹಾಡುವುದು ಮತ್ತು ಮುಖ್ಯೋಪಾಧ್ಯಾಯರ ಉಪನ್ಯಾಸಗಳನ್ನು ಕೇಳುವುದು ಇವುಗಳಿಗೆ ಮೀಸಲಾಗಿಡಲಾಗುತ್ತಿತ್ತು. ಕೊಬಾಯಾಶಿಯವರು ಅವರ ವಿಧಾನಗಳಿಂದ ಬಹಳಷ್ಟು ಪ್ರಭಾವಿತರಾಗಿದ್ದರು. ಬಳಿಕ ತೊಮೊಯೆದಲ್ಲೂ ಅವರು ಇಂತಹ ಪಠ್ಯಕ್ರಮವನ್ನು ಪಾಲಿಸಿದರು.

ಅಲ್ಲಿ ಸಂಗೀತ ಶಿಕ್ಷಕರಾಗಿದ್ದ ಸಮಯದಲ್ಲಿ ಕೊಬಾಯಾಶಿಯವರು ಮಕ್ಕಳಿಗೆ ಪ್ರದರ್ಶಿಸಲು ಸಾಧ್ಯವಾಗುವಂತಹ ಸಂಗೀತ ನಾಟಕವೊಂದನ್ನು ಬರೆದರು. ಈ ಸಂಗೀತ ನಾಟಕವು ಪ್ರಸಿದ್ಧ ಕೈಗಾರಿಕೋದ್ಯಮಿ ಬರೋನ್ ಇವಾಸಾಕಿಯವರಿಗೆ ಮೆಚ್ಚುಗೆಯಾಯಿತು. ಇವರ ಕುಟುಂಬವೇ ಬೃಹತ್ ಉದ್ಯಮವಾದ ಮಿತ್‌ಸುಬಿಷಿಯನ್ನು ಸ್ಥಾಪಿಸಿದ್ದು. ಬರೋನ್ ಇವಾಸಾಕಿಯವರು ಕಲೆಯ ಆರಾಧಕರು. ಕಲಾ ಶಾಲೆಗಳಿಗೆ ಆರ್ಥಿಕ ಸಹಾಯ ನೀಡುವವರು. ಇವರು

ಕೊಬಾಯಾಶಿಯವರನ್ನು ಬೇರೆ ಬೇರೆ ಶಿಕ್ಷಣ ಪದ್ಧತಿಗಳನ್ನು ಅಧ್ಯಯನ ಮಾಡಲು ಯೂರೋಪಿಗೆ ಕಳಿಸಿದರು.

ಕೊಬಾಯಾಶಿಯವರು 1922ರಿಂದ 1924ರವರೆಗೆ ಯುರೋಪಿನಲ್ಲಿ ಇದ್ದರು. ಬೇರೆ ಬೇರೆ ಶಾಲೆಗಳಿಗೆ ಭೇಟಿ ನೀಡಿದರು. ಪ್ಯಾರಿಸ್‌ನಲ್ಲಿ ಎಮಿಲಿ ಜಾಕ್ವೆಸ್ ಡಾಲ್‌ಕ್ರೋಸ್ ಜತೆ ಸಂಗೀತವ್ಯಾಯಾಮವನ್ನು ಕಲಿತರು. ಅಲ್ಲಿಂದ ವಾಪಸ್ಸಾದ ನಂತರ ಮತ್ತೊಬ್ಬರ ಜತೆಗೂಡಿ ಸೀಜೋ ಶಿಶುವಿಹಾರವನ್ನು ಪ್ರಾರಂಭಿಸಿದರು. ಮಕ್ಕಳನ್ನು ಪೂರ್ವಸಿದ್ಧ ಚೌಕಟ್ಟಿಗೆ ಒಳಪಡಿಸಲು ಪ್ರಯತ್ನಿಸಬೇಡಿ ಎಂದವರು ಶಿಶುವಿಹಾರಗಳ ಶಿಕ್ಷಕರಿಗೆ ಹೇಳುತ್ತಿದ್ದರು. "ಅವರನ್ನು ನಿಸರ್ಗದ ಮಡಿಲಿಗೆ ಬಿಟ್ಟುಬಿಡಿ, ಅವರ ಆಕಾಂಕ್ಷೆಗಳನ್ನು ಹತ್ತಿಕ್ಕಬೇಡಿ. ಅವರ ಕನಸುಗಳು ನಿಮ್ಮದಕ್ಕಿಂತ ದೊಡ್ಡವು" ಎನ್ನುತ್ತಿದ್ದರು. ಅಂತಹ ಶಿಶುವಿಹಾರ ಜಪಾನಿನಲ್ಲಿ ಮತ್ತೊಂದಿರಲಿಲ್ಲ.

1930ರಲ್ಲಿ ಕೊಬಾಯಾಶಿಯವರು ಡಾಲ್‌ಕ್ರೋಸ್ ಅವರೊಂದಿಗೆ ಮತ್ತೊಂದು ವರ್ಷ ಕಲಿಯಲು ಯುರೋಪಿಗೆ ಹೋದರು. ಬೇರೆಬೇರೆ ಕಡೆ ಪಯಣಿಸುತ್ತಾ, ವಿಷಯ ಗ್ರಹಿಕೆ ಮಾಡುತ್ತಾ ಕೊನೆಗೆ ಜಪಾನಿಗೆ ಮರಳಿ ತಮ್ಮದೇ ಶಾಲೆಯನ್ನು ಪ್ರಾರಂಭಿಸಲು ನಿಶ್ಚಯಿಸಿದರು.

1937ರಲ್ಲಿ ತೊಮೊಯೆವನ್ನು ಪ್ರಾರಂಭಿಸುವುದರ ಜತೆಗೆ ಅವರು ಜಪಾನ್ ಸಂಗೀತವ್ಯಾಯಾಮ ಸಂಘವನ್ನು ಸ್ಥಾಪಿಸಿದರು. ಈಗಲೂ ಜನ ಅವರನ್ನು ಜಪಾನಿಗೆ ಸಂಗೀತವ್ಯಾಯಾಮವನ್ನು ಪರಿಚಯಿಸಿದ ವ್ಯಕ್ತಿ ಎಂದು ನೆನೆಯುತ್ತಾರಲ್ಲದೆ ಯುದ್ಧಾನಂತರ ಕುನಿತಾಚಿ ಕಾಲೇಜ್ ಆಫ್ ಮ್ಯೂಸಿಕ್ ಸಂಸ್ಥೆಗೆ ಅವರು ಸಲ್ಲಿಸಿದ ಸೇವೆಯನ್ನು ನೆನೆಯುತ್ತಾರೆ. ಅವರ ಶಿಕ್ಷಣ ವಿಧಾನಗಳ ಪ್ರತ್ಯಕ್ಷ ಅನುಭವ ನಮ್ಮಂಥ ಕೆಲವರಿಗಷ್ಟೇ ಲಭ್ಯವಾಗಿದೆ. ಅವರು ತೊಮೊಯೆದಂತಹ ಮತ್ತೊಂದು ಶಾಲೆಯನ್ನು ಪ್ರಾರಂಭಿಸುವ ಮುನ್ನವೇ ತೀರಿಕೊಂಡದ್ದು ನಿಜಕ್ಕೂ ದುರಂತವೇ ಸರಿ. ಅದು ಉರಿದು ಬೀಳುತ್ತಿರುವಾಗಲೇ ಆತ ಮತ್ತೂ ಉತ್ತಮ ಶಾಲೆಯನ್ನು ಮನದಲ್ಲಿ ರೂಪಿಸಿಕೊಳ್ಳುತ್ತಿದ್ದರು. "ಮುಂದೆ ನಾವೆಂತಹ ಶಾಲೆಯನ್ನು ಕಟ್ಟೋಣ" ಎಂದು ಸುತ್ತಲಿನ ಕೋಲಾಹಲಕ್ಕೂ ಎದೆಗುಂದದೆ ಆತ ಕೇಳಿದ್ದರು.

ನಾನು ಈ ಪುಸ್ತಕವನ್ನು ಬರೆಯಲು ಪ್ರಾರಂಭಿಸಿದಾಗ ನನ್ನ ಜೊತೆಯೇ ಹತ್ತಾರು ವರ್ಷಗಳಿಂದ ಕೆಲಸ ಮಾಡುತ್ತಿದ್ದ ಹಾಗೂ ನನ್ನ ದಿನನಿತ್ಯದ ಟೆಲಿವಿಷನ್ ಸಂದರ್ಶನ ಕಾರ್ಯಕ್ರಮ 'ತೆತ್ಸುಕೋಸ್ ರೂಮ್'ನ ನಿರ್ಮಾಪಕರು ಕೊಬಾಯಾಶಿಯವರ ಬಗ್ಗೆ ದಶಕದಿಂದಲೂ ಸಂಶೋಧನೆ ಮಾಡುತ್ತಿರುವುದನ್ನು ತಿಳಿದು ಚಕಿತಗೊಂಡೆ. ಅವರು ಕೊಬಾಯಾಶಿಯನ್ನು ಎಂದೂ ಭೇಟಿ ಮಾಡಿರಲಿಲ್ಲ. ಆದರೆ ಅವರಿಗೆ ಒಬ್ಬ ಮಹಿಳೆಯ ಮೂಲಕ ಕೊಬಾಯಾಶಿಯವರತ್ತ ಆಸಕ್ತಿ ಹುಟ್ಟಿತ್ತು. ಆ ಮಹಿಳೆ ಮಕ್ಕಳ ಸಂಗೀತವ್ಯಾಯಾಮ ತರಗತಿಯಲ್ಲಿ ಪಿಯಾನೊ ನುಡಿಸುತ್ತಿದ್ದಳು. ಆಗ ಆ ಮಹಿಳೆಗೆ "ಮಕ್ಕಳು ಹಾಗೆ ನಡೆಯುವುದಿಲ್ಲ ನೋಡಿ" ಎಂದು ಆಕೆಯ ವೇಗವನ್ನು ಸರಿಪಡಿಸುತ್ತಾ ಕೊಬಾಯಾಶಿಯವರು ಹೇಳಿದ್ದರು. ಮಕ್ಕಳ ಬಗ್ಗೆ ಅವರು ಎಷ್ಟೊಂದು ಸಂವೇದನಶೀಲರಾಗಿದ್ದರೆಂದರೆ ಅವರಿಗೆ ಅವರ ಉಸಿರಾಟ,

ಚಲನ-ವಲನಗಳು ಚಿರಪರಿಚಿತವಾಗಿದ್ದವು. ನನ್ನ ನಿರ್ಮಾಪಕರಾದ ಕಸುಹಿಕೋ ಸೋನೋ ಅವರು ತಮ್ಮ ಪುಸ್ತಕವನ್ನು ಬೇಗ ಹೊರತಂದು ಈ ಅಸಾಧಾರಣ ವ್ಯಕ್ತಿಯ ಬಗ್ಗೆ ಪ್ರಪಂಚಕ್ಕೆ ಇನ್ನೂ ಹೆಚ್ಚು ತಿಳಿಸುವರೆಂದು ನಂಬುತ್ತೇನೆ.

ಇಪ್ಪತ್ತು ವರ್ಷಗಳ ಹಿಂದೆ ಕೊಡನ್‌ಷಾದ ಒಬ್ಬ ಯುವ ಸಂಪಾದಕರು ನಾನು ತೊಮೆಯ ಬಗ್ಗೆ ಮಹಿಳಾ ಪತ್ರಿಕೆಯೊಂದರಲ್ಲಿ ಬರೆದಿದ್ದ ಲೇಖನವನ್ನು ಗಮನಿಸಿದ್ದರು. ಆತ ಬಿಳಿ ಹಾಳೆಗಳ ಮೂಟೆಯನ್ನೇ ಹೊತ್ತು ನನ್ನನ್ನು ಕಾಣಲು ಬಂದರು. ಆ ಲೇಖನವನ್ನೇ ಪುಸ್ತಕವಾಗಿ ವಿಸ್ತರಿಸಿ ಬರೆಯಬೇಕೆಂದು ಕೇಳಿಕೊಂಡರು. ಆತನ ಕಲ್ಪನೆ ಸಾಕಾರಗೊಳ್ಳುವಷ್ಟರಲ್ಲಿ ಆ ಯುವಕ ಡೈರೆಕ್ಟರರಾಗಿಬಿಟ್ಟರು. ಆ ವ್ಯಕ್ತಿಯೇ ಕೆಟ್‌ಸುಹಿಸಾ ಕಾಟೋ. ಆ ವ್ಯಕ್ತಿಯಿಂದಲೇ ನನಗಿದನ್ನು ಬರೆಯುವ ಕಲ್ಪನೆ ಮತ್ತು ಆತ್ಮವಿಶ್ವಾಸ ದೊರೆತದ್ದು. ಅಷ್ಟಾಗಿ ಏನನ್ನೂ ಬರೆಯದೇ ಇದ್ದ ನನಗೆ ಆಗ ಪುಸ್ತಕವನ್ನು ಬರೆಯುವುದು ಒಂದು ರೀತಿಯ ಹೆದರಿಕೆ ಹುಟ್ಟಿಸಿತ್ತು. ಕೊನೆಗೆ ನಾನು ಕೊಡನ್‌ಷಾದ 'ಯಂಗ್ ವುಮನ್' ಪತ್ರಿಕೆಯ ಪ್ರತಿ ಸಂಚಿಕೆಗೂ ಒಂದು ಅಧ್ಯಾಯದಂತೆ ಧಾರವಾಹಿ ಲೇಖನ ಬರೆಯಲು ಒಪ್ಪಿಕೊಂಡೆ. ಅದರಂತೆ ಫೆಬ್ರವರಿ 1979ರಿಂದ ಡಿಸೆಂಬರ್ 1980ರ ವರೆಗೆ ಲೇಖನಗಳನ್ನು ಬರೆದೆ.

ಪ್ರತಿ ತಿಂಗಳೂ ನಾನು ಟೋಕಿಯೋದ ಷಿಮೋ-ಷಾಕೂಜಿಯಲ್ಲಿರುವ ಚಿಹಿರೋ ಇವಾಸಾಕಿ ಸಚಿತ್ರ ಪುಸ್ತಕಗಳ ಮ್ಯೂಸಿಯಮ್ಮಿಗೆ ಹೋಗುತ್ತಿದ್ದೆ. ಚಿತ್ರಗಳನ್ನು ಸಂಗ್ರಹಿಸುತ್ತಿದ್ದೆ. ಚಿಹಿರೋ ಇವಾಸಾಕಿಯವರ ಮಕ್ಕಳ ಚಿತ್ರಗಳು ಅಸಾಧಾರಣವಾದವು. ಆಕೆಯಷ್ಟು ಜೀವಂತವಾಗಿ ಮಕ್ಕಳನ್ನು ಚಿತ್ರಿಸುವ ಕಲಾವಿದರು ಪ್ರಪಂಚದಲ್ಲಿ ಇದ್ದಾರೆಯೇ ಎಂಬುದೇ ನನಗೆ ಅನುಮಾನ. ಆಕೆ ಮಕ್ಕಳ ಮನೋಭಾವ ಮತ್ತು ಸ್ವಭಾವಗಳನ್ನು ತನ್ನ ಚಿತ್ರಗಳನ್ನು ಎಷ್ಟರಮಟ್ಟಿಗೆ ಹಿಡಿದಿಡುತ್ತಿದ್ದರೆಂದರೆ ಆರು ತಿಂಗಳ ಮಗುವಾವುದು, ಒಂಬತ್ತು ತಿಂಗಳ ಮಗುವಾವುದು ಎನ್ನುವುದನ್ನು ಕೂಡ ಚಿತ್ರಗಳಲ್ಲಿ ಪತ್ತೆ ಹಚ್ಚಬಹುದಾಗಿತ್ತು. ಆಕೆಯ ಚಿತ್ರಗಳನ್ನು ನನ್ನ ಪುಸ್ತಕಕ್ಕೆ ಬಳಸಲು ಸಾಧ್ಯವಾದದ್ದು ಅತೀ ಸಂತಸದ ಸಂಗತಿ. ನನ್ನ ನಿರೂಪಣೆಗೆ ಅವು ಸರಿಯಾಗಿ ಹೊಂದಿಕೊಂಡಿವೆ. ಆಕೆ 1974ರಲ್ಲಿಯೇ ತೀರಿಕೊಂಡಳು. ಆದರೆ ನಾನು ನನ್ನ ಪುಸ್ತಕವನ್ನು ಆಕೆ ಬದುಕಿದ್ದಾಗಲೇ ಬರೆಯಲು ಪ್ರಾರಂಭಿಸಿದ್ದೇನೆ ಎಂದು ಅನೇಕರು ಕೇಳಿದ್ದಾರೆ. ಆಕೆ ತನ್ನ ಚಿತ್ರಗಳಲ್ಲಿ ಬದುಕಿಗೆ ಎಷ್ಟೊಂದು ಹತ್ತಿರವಾಗಿರುತ್ತಿದ್ದರು ಮತ್ತು ಮಕ್ಕಳನ್ನು ಅದೆಷ್ಟು ಬಗೆಯಲ್ಲಿ ಚಿತ್ರಿಸಬಲ್ಲವರಾಗಿದ್ದರು ಎಂಬುದು ಇಲ್ಲಿ ಸಾಬೀತಾಗಿದೆ.

ಚಿಹಿರೋ ಇವಾಸಾಕಿ ಸುಮಾರು ಏಳುಸಾವಿರ ಚಿತ್ರಗಳನ್ನು ಬಿಟ್ಟು ಹೋಗಿದ್ದಾರೆ. ಮ್ಯೂಸಿಯಮ್ಮಿನ ಅಸಿಸ್ಟೆಂಟ್ ಕ್ಯುರೇಟರ್ ಆಗಿರುವ ಆಕೆಯ ಮಗ ಮತ್ತು ಆತನ ಹೆಂಡತಿಯ ಸೌಜನ್ಯದಿಂದಾಗಿ ಆಕೆಯ ಮೂಲಕೃತಿಗಳನ್ನು ನೋಡುವ ಸದವಕಾಶ ನನಗೆ ದೊರಕಿತು. ಆಕೆಯ ಕೃತಿಯನ್ನು ಮರುಮುದ್ರಿಸಲು ಅನುಮತಿಸಿದ ಆಕೆಯ ಪತಿಗೆ ನಾನು ಕೃತಜ್ಞಳಾಗಿದ್ದೇನೆ. ಹಾಗೆಯೇ ನಾನೀಗ ಒಬ್ಬ ಟ್ರಸ್ಟೀಯಾಗಿರುವ ಆ ಮ್ಯೂಸಿಯಮ್ಮಿನ ಕ್ಯುರೇಟರಾದ ನಾಟಕಕಾರ ತಾದಾಸು ಇಸಾವ ಅವರಿಗೂ ನನ್ನ

ಕೃತಜ್ಞತೆಗಳು. ಪುಸ್ತಕದ ಬರವಣಿಗೆಯನ್ನು ಮುಂದೂಡುತ್ತಾ ಹೋದಾಗಲೆಲ್ಲ ಆಕೆ ಅದನ್ನು ಬೇಗ ಬರೆದು ಮುಗಿಸುವಂತೆ ನನ್ನನ್ನು ಒತ್ತಾಯಿಸುತ್ತಿದ್ದರು.

ಮಿಯೋ-ಚಾನ್ ಮತ್ತು ತೊಮೊಯೆದ ನನ್ನ ಸ್ನೇಹಿತರೆಲ್ಲ ನನಗೆ ಬಹಳಷ್ಟು ಸಹಾಯ ಮಾಡಿದ್ದಾರೆ. ನನ್ನ ಪುಸ್ತಕದ ಜಪಾನೀ ಆವೃತ್ತಿಯ ಸಂಪಾದಕರಾದ ಕೆಯಿಕೋ ಇವಾಮೊತೋ ಅವರು ಯಾವಾಗಲೂ, "ನಾನಿದನ್ನು ಅತ್ಯುತ್ತಮ ಪುಸ್ತಕವಾಗಿಸಬೇಕು !" ಎಂದು ನನ್ನನ್ನು ಹುರಿದುಂಬಿಸುತ್ತಿದ್ದರು. ಅವರಿಗೆ ನಾನು ಹೃದಯಪೂರ್ವಕವಾಗಿ ವಂದಿಸುವೆ.

ಜಪಾನೀ ಶೀರ್ಷಿಕೆಯ ಕಲ್ಪನೆ ನನಗೆ ಬಂದದ್ದು ಕೆಲವರ್ಷಗಳ ಹಿಂದೆ, ಕೆಲ ಜನರನ್ನು ಕುರಿತು ಹೇಳುವ ತುಂಬಾ ಜನಪ್ರಿಯ "ಓವರ್ ಬೈ ದ ವಿಂಡೋ" ಎಂಬ ಮಾತಿನಿಂದ. ಇದರರ್ಥ, "ಅಂಚಿನಲ್ಲಿರುವವರು ಅಥವಾ ಹೊರಗೆ ಚಳಿಯಲ್ಲಿ ಇರುವವರು" ಎಂದಾಗುತ್ತದೆ. ನಾನು ಸ್ವಯಂಇಚ್ಛೆಯಿಂದ ಕಿಟಕಿಯ ಬಳಿ ಬೀದಿ ಸಂಗೀತಗಾರರನ್ನು ನೋಡಲು ನಿಲ್ಲುತ್ತಿದ್ದರೂ ಆ ಮೊದಲ ಶಾಲೆಯಲ್ಲಿ ನನಗೆ ನಿಜವಾಗಿಯೂ ನಾನು "ಓವರ್ ಬೈ ದ ವಿಂಡೋ" ಆಗಿದ್ದೆ ಅನಿಸುತ್ತಿತ್ತು. ಒಂದು ಬಗೆಯ ಪರಕೀಯತೆ ಮತ್ತು ನಿಜವಾಗಿಯೂ ಹೊರಗೆ ಚಳಿಯಲ್ಲಿ ಇದ್ದಂತೆ. ಪುಸ್ತಕದ ಶೀರ್ಷಿಕೆ ಈ ಎಲ್ಲ ಹಿನ್ನೆಲೆಯನ್ನು ಹೊಂದಿದೆ. ಹಾಗೆಯೇ ತೊಮೊಯೆ ನನಗೆ ತೆರೆಯಲ್ಪಟ್ಟ ಸಂತೋಷದ ಕಿಟಕಿ ಕೂಡ ಇದಾಗಿದೆ.

ತೊಮೊಯೆ ಇನ್ನಿಲ್ಲ. ಈ ಪುಸ್ತಕವನ್ನು ಓದುತ್ತಿದ್ದ ಹಾಗೆ ಅದು ನಿಮ್ಮ ಕಲ್ಪನೆಯಲ್ಲಿ ಕೊಂಚ ಕಾಲವಾದರೂ ಜೀವಂತಗೊಂಡರೆ ನನಗೆ ಅದಕ್ಕಿಂತ ಹೆಚ್ಚಿನ ಸಂತೋಷ ಬೇರೊಂದಿಲ್ಲ.

*ಟೋಕಿಯೋ, 1982*

*

ಈ ಪುಸ್ತಕ ಪ್ರಕಟಗೊಂಡ ಕೇವಲ ಮೂರು ವರ್ಷಗಳಲ್ಲಿ ಆಶ್ಚರ್ಯವೂ, ಆನಂದವೂ ಎನಿಸುವಂಥ ಅನೇಕ ಸಂಗತಿಗಳು ನಡೆದಿವೆ. ನನ್ನ ಪ್ರೀತಿಯ ಮುಖ್ಯೋಪಾಧ್ಯಾಯರು ಮತ್ತು ತೊಮೊಯೆದಲ್ಲಿನ ಅವಿಸ್ಮರಣೀಯ ದಿನಗಳ ಬಗ್ಗೆ ಬರೆಯುತ್ತಿರುವಾಗ ಈ ಪುಸ್ತಕ ಅತ್ಯಂತ ಜನಪ್ರಿಯ ಪುಸ್ತಕವಾಗಬಹುದೆಂಬ ಕಲ್ಪನೆಯೂ ನನಗಿರಲಿಲ್ಲ. ಮೊದಲ ವರ್ಷದಲ್ಲಿಯೇ ನಲವತ್ತೈದು ಲಕ್ಷ ಪ್ರತಿಗಳು ಮಾರಾಟಗೊಂಡವು. ಈಗ ಅರವತ್ತು ಲಕ್ಷ ಪ್ರತಿಗಳು ಮಾರಾಟವಾದ ಸುದ್ದಿಯಿದೆ. "ಇದು ಜಪಾನಿನ ಪ್ರಕಾಶನ ಇತಿಹಾಸದಲ್ಲೇ ದಾಖಲೆ !" ಎಂದು ಹೇಳಲಾಗಿದೆ. ಆದರೆ ಜಪಾನಿನ ಮೂಲೆಮೂಲೆಗಳಿಂದ ಓದುಗರ ಪತ್ರಗಳು ದಿನನಿತ್ಯವೂ ಬರಲಾರಂಭಿಸಿದಾಗಲೇ ನನಗಿದರ ಅರಿವಾದದ್ದು. ಅಸಂಖ್ಯಾತ ಜನ ಪುಸ್ತಕ ಓದಿ ಬರೆಯತೊಡಗಿದ್ದರು.

ಐದು ವರ್ಷದಿಂದ ಹಿಡಿದು 103ವರ್ಷದವರೆಗಿನ ಎಲ್ಲ ವಯೋವರ್ಗದವರಿಂದ

ನನಗೆ ಪತ್ರಗಳು ಬಂದಿವೆ. ಪ್ರತಿಯೊಂದೂ ಮನಮುಟ್ಟುವಂತಹ ಪತ್ರಗಳೇ. ಅದರಲ್ಲೂ ಪ್ರಾಥಮಿಕ ಶಾಲಾ ಮಕ್ಕಳಿಂದ ಎಷ್ಟೊಂದು ಪತ್ರಗಳು ಬಂದಿವೆಯೆಂದರೆ ನಂಬುವುದೇ ಕಷ್ಟ. ಅರ್ಥ ಮಾಡಿಕೊಳ್ಳಲು ಕಷ್ಟವೆನಿಸುವ ಚೀನೀ ವಿವರಣೆಗಳಿಗೆ ಸರಳವಾದ ಅರ್ಥಗಳನ್ನು ನಾನು ನನ್ನ ಪುಸ್ತಕದಲ್ಲಿ ನೀಡಿದ್ದೆನಾದರೂ ಇಷ್ಟು ಸಣ್ಣ ಮಕ್ಕಳು ಓದುತ್ತಾರೆಂದು ನಾನೆಣಿಸಿರಲಿಲ್ಲ. ಮಕ್ಕಳು 'ಬರೆದಿಟ್ಟ' ಪುಸ್ತಕಗಳನ್ನು ಓದಲಾರರು ಎಂಬ ಸ್ಥಿತಿ ತಲುಪಿರುವಾಗ ಅವರು ಇಲ್ಲಿನ ಕಷ್ಟದ ಪದಗಳಿಗೆ ನಿಘಂಟಿನ ಸಹಾಯದಿಂದ ಅರ್ಥ ಹುಡುಕಿಕೊಳ್ಳುತ್ತಾ ಓದುತ್ತಿರುವುದೆಂಥಾ ಸೋಜಿಗ! ಒಬ್ಬಳು ಎರಡನೇ ತರಗತಿಯ ಹುಡುಗಿ ತಾನು ಅಂಗವಿಕಲ ಮಗುವೊಂದನ್ನು ನೋಡಿದಾಗಲೆಲ್ಲ "ಓಹೋ, ಇದು ಯಾಸುಕೀ-ಚಾನ್" ಎಂದೋ ಅಥವಾ "ಅದು ತೊಮೊಯೆದ ಮಗುವೇ ಇರಬೇಕು" ಎಂದೋ ಅಂದುಕೊಳ್ಳುತ್ತಿದ್ದಳೆಂದೂ ಮತ್ತು ಓಡಿಹೋಗಿ "ಹಲೋ" ಎನ್ನುತ್ತಿದ್ದಳೆಂದೂ ಬರೆದಿದ್ದಳು. ಅವರು ಹಿಂದಿರುಗಿ "ಹಲೋ" ಎಂದಾಗ ಅವಳಿಗೆ ಅತೀವ ಸಂತೋಷವಾಗುತ್ತಿತ್ತಂತೆ. ಇದೆಲ್ಲ ತೊಮೊಯೆ ನಾಶವಾಗಿ ನಲವತ್ತು ವರ್ಷದ ನಂತರ ನಡೆಯುತ್ತಿರುವುದು! ಮಕ್ಕಳು ನಿಜಕ್ಕೂ ಬೆರಗುಗೊಳಿಸುವರಲ್ಲವೇ?

ತೊಮೊಯೆ ಸುಟ್ಟುಹೋದ ಬಗ್ಗೆ ಓದುವಾಗ ಯುದ್ಧವೆಂಬುದು ನಿಜಕ್ಕೂ ಅನಿಷ್ಟ ಎಂಬುದು ತಮಗರಿವಾದುದಾಗಿ ಅನೇಕ ಮಕ್ಕಳು ಬರೆದು ಕೇವಲ ಆ ಕಾರಣಕ್ಕಾಗಿಯೇ ಪುಸ್ತಕ ಸಾರ್ಥಕವಾಗಿದೆಯೆಂದು ಹೇಳಿದ್ದಾರೆ. ಅದೇನೇ ಆದರೂ, ಪುಸ್ತಕವನ್ನು ಬರೆಯುತ್ತಿದ್ದಾಗ; ಶಾಲಾ ಶಿಕ್ಷಕರು ಮತ್ತು ಯುವ ತಾಯಂದಿರು ಕೊಬಾಯಾಶಿಯವರ ಬಗ್ಗೆ ಓದಿ, "ಅಬ್ಬಾ, ಮಕ್ಕಳನ್ನು ನಿಜವಾಗಿಯೂ ಪ್ರೀತಿಸುತ್ತಿದ್ದ, ಅವರಲ್ಲಿ ಅಪಾರ ನಂಬಿಕೆಯಿರಿಸಿದ್ದ ಒಬ್ಬ ಸಮರ್ಪಣಾಭಾವದ ವ್ಯಕ್ತಿ ಇಲ್ಲಿದ್ದಾರೆ" ಅಂದುಕೊಂಡರೆ ಎಷ್ಟು ಚೆನ್ನ ಎಂದಷ್ಟೇ ನಾನು ಅಂದುಕೊಳ್ಳುತ್ತಿದ್ದದ್ದು. ಆದರೂ ಶಿಕ್ಷಕರು ಕೊಬಾಯಾಶಿಯವರ ಆಲೋಚನೆಗಳನ್ನು ಅತೀ 'ಆದರ್ಶಪ್ರಾಯ' ಎಂದು ತಳ್ಳಿಹಾಕುವರೆಂಬ ಆತಂಕ ನನ್ನಲ್ಲಿತ್ತು.

ಪುಸ್ತಕ ಹೊರಬಂದ ನಂತರ ಅನೇಕ ಪ್ರಾಥಮಿಕ ಶಾಲಾ ಶಿಕ್ಷಕರು, ಊಟದ ಬಿಡುವಿನ ವೇಳೆ ಪುಸ್ತಕವನ್ನು ಮಕ್ಕಳಿಗೆ ಗಟ್ಟಿಯಾಗಿ ಓದಿ ಹೇಳುವುದಾಗಿ ಬರೆದಿದ್ದರು. ಇನ್ನು ಪ್ರಾಥಮಿಕ ಕಲಾ ಶಿಕ್ಷಕರು *ತೊತ್ತೊ-ಚಾನ್*‌ದ ಭಾಗಗಳನ್ನು ತಮ್ಮ ತರಗತಿಯಲ್ಲಿ ಮಕ್ಕಳಿಗೆ ಓದಿ ಹೇಳಿ ತಮ್ಮ ಮನಸ್ಸಿಗೆ ಹಿಡಿಸಿದಂತೆ ಚಿತ್ರಗಳನ್ನು ಬರೆಯಲು ಹೇಳುವೆವೆಂದು ಬರೆದಿದ್ದಾರೆ. ಕೆಲವು ಹೈಸ್ಕೂಲ್ ಉಪಾಧ್ಯಾಯರಂತೂ ಇಂದಿನ ಶಿಕ್ಷಣ ಪದ್ಧತಿಯಿಂದ ಸಂಪೂರ್ಣ ಬೇಸತ್ತು ಶಿಕ್ಷಕ ವೃತ್ತಿಯನ್ನೇ ತ್ಯಜಿಸಬೇಕೆಂದಿದ್ದಾಗ ಕೊಬಾಯಾಶಿಯವರ ಆಲೋಚನೆಗಳಿಂದ ಸ್ಫೂರ್ತಿಗೊಂಡು ಮತ್ತೊಮ್ಮೆ ಪ್ರಯತ್ನಿಸಲು ನಿರ್ಧರಿಸಿರುವುದಾಗಿ ಬರೆದರು. ಇಂತಹ ಎಷ್ಟೋ ಮನ ಕಲಕುವ ಚಿತ್ರಗಳು ನನ್ನಲ್ಲಿ ಕಣ್ಣೀರು ತರಿಸಿವೆ. ಕೊಬಾಯಾಶಿಯವರಂತೆ ಯೋಚಿಸುವ ಇನ್ನೂ ಅನೇಕರಿದ್ದಾರೆಂಬ ಅರಿವಾಗಿದೆ ನನಗೆ.

ಜಪಾನಿನ ಶಾಲಾ ಶಿಕ್ಷಕರು ಅನೇಕ ರೀತಿಯಲ್ಲಿ ನನ್ನ ಪುಸ್ತಕವನ್ನು ಬಳಸುತ್ತಿದ್ದರು.

ಕಳೆದ ವರ್ಷದ 'ಬೇಸಾಯದ ಮಾಸ್ತರು' ಅಧ್ಯಾಯ ಪ್ರಾಥಮಿಕ ಶಾಲೆಯ ಜಪಾನೀ ಭಾಷೆಯ ಮೂರನೇ ತರಗತಿಯ ಪಠ್ಯಕ್ಕೂ ಮತ್ತು 'ಹರುಕು-ಮುರುಕು ಶಾಲೆ' ಅಧ್ಯಾಯ ನಾಲ್ಕನೇ ತರಗತಿಯ ನೀತಿ-ನಡತೆ ತರಗತಿಯ ಅಧಿಕೃತ ಪಠ್ಯವಾಗಿದ್ದುವು. ಅಲ್ಲದೆ ಕೆಲವು ಕಳವಳವೆನಿಸುವ ಪತ್ರಗಳು ಬಂದದ್ದೂ ಉಂಟು. ಬಾಲಾಪರಾಧಿಯಾಗಿ ಬಂಧೀಖಾನೆಯಲ್ಲಿದ್ದು ಹೈಸ್ಕೂಲ್ ಕಲಿಯುತ್ತಿರುವ ವಿದ್ಯಾರ್ಥಿನಿಯೊಬ್ಬಳು, "ತೊತ್ತೊ-ಚಾನ್‌ಗಿದ್ದಂಥ ತಾಯಿ ಮತ್ತು ಕೊಬಾಯಾಶಿಯಂತಹ ಉಪಾಧ್ಯಾಯರು ನನಗಿದ್ದಿದ್ದರೆ ನಾನಿಂದು ಇಲ್ಲಿರುತ್ತಿರಲಿಲ್ಲ" ಎಂದು ಬರೆದಿದ್ದಳು.

**ತೊತ್ತೊ-ಚಾನ್** ಇಷ್ಟೊಂದು ಜನಪ್ರಿಯ ಪುಸ್ತಕ ಹೇಗಾಯಿತು? ಈ ಬಗ್ಗೆ ಸಮೂಹ ಮಾಧ್ಯಮದಲ್ಲಿ ಚರ್ಚೆ ನಡೆಯಿತು. 'ಅಸಾಹಿ' ದಿನಪತ್ರಿಕೆಯಲ್ಲಿ ಇದರ ವಿವಿಧ ಆಯಾಮಗಳನ್ನು ಚರ್ಚಿಸುವ ಲೇಖನಗಳ ಸರಣಿಯೇ ಪ್ರಕಟಗೊಂಡಿತು. ಆಶ್ಚರ್ಯವೆಂದರೆ ಈ ವಿಷಯವನ್ನಾಧರಿಸಿದ ಒಂದು ಪ್ರತ್ಯೇಕ ಪುಸ್ತಕವೇ ಪ್ರಕಟಗೊಂಡು ಬಿಟ್ಟಿತು. **ತೊತ್ತೊ-ಚಾನ್** ಎಂಬ ಜನಪ್ರಿಯ ಪುಸ್ತಕದ ಕತೆ ಎಂಬ ಹೆಸರಿನ ಈ ಪುಸ್ತಕವನ್ನು ಬೇರೊಬ್ಬ ಪ್ರಕಾಶಕರು ಹೊರತಂದರು. ಪುಸ್ತಕವೇಕೆ ಇಷ್ಟೊಂದು ದೊಡ್ಡ ಪ್ರಮಾಣದಲ್ಲಿ ಮಾರಾಟಗೊಂಡಿತೆಂಬುದನ್ನು ಇದು ಕೂಲಂಕಷವಾಗಿ ಚರ್ಚಿಸುತ್ತದೆ. ಜಪಾನಿನ ಶಿಕ್ಷಣ ಸಮಸ್ಯೆ ಒಂದು ನಿರ್ಣಾಯಕ ಘಟ್ಟವನ್ನು ತಲುಪಿಬಿಟ್ಟಿದ್ದು ಅದರ ಬಗ್ಗೆ ಎಲ್ಲರೂ ತಲೆಕೆಡಿಸಿಕೊಳ್ಳುತ್ತಿದ್ದಂತಹ ಸಮಯದಲ್ಲಿ ಈ ಪುಸ್ತಕ ಹೊರಬಂದದ್ದೇ ಬಹುಶಃ ಅದರ ಅಪಾರ ಮನಸ್ಸಿಗೆ ಕಾರಣವಿರಬಹುದು. ಬಹುತೇಕ ಜನ ಅದನ್ನು ಸಮಸ್ಯೆಗೆ ಪರಿಹಾರವೆಂಬಂತೆ ಕಂಡಿರಲೂ ಬಹುದು. ಜತೆಗೆ ಎಲ್ಲ ವಯಸ್ಸಿನವರಿಗೂ ಇಷ್ಟವಾಗುವಂತಹ ಪುಸ್ತಕ ಇದಾದದ್ದು ಕೂಡ ಅದರ ದಾಖಲೆಯ ಮಾರಾಟಕ್ಕೆ ಕಾರಣವಿರಬಹುದು.

ಜಪಾನಿನಲ್ಲಿ ಒಬ್ಬ ಮಹಿಳಾ ಲೇಖಕಿಯ ಅತ್ಯಂತ ಜನಪ್ರಿಯ ಮೊಟ್ಟಮೊದಲ ಪುಸ್ತಕ ಕೂಡ ಇದಾಗಿದೆ. ಪುರುಷರ ಪ್ರತಿಕ್ರಿಯೆ ಪ್ರಾರಂಭಕ್ಕಂತೂ ಸಾಕಷ್ಟು ನಕಾರಾತ್ಮಕವಾಗಿತ್ತು. ಕ್ರಮೇಣ ಹಿಂಜರಿಯುತ್ತಲೇ ಓದತೊಡಗಿದರು. "ಮುಖಪುಟದಲ್ಲಿ ಹುಡುಗಿಯ ಚಿತ್ರ ನನ್ನ ಮನಸ್ಸಿಗೆ ಬರಲಿಲ್ಲ"; "ಒಬ್ಬ ಜನಪ್ರಿಯ ನಟಿಯ ಜನಪ್ರಿಯ ಪುಸ್ತಕ ಎಂದು ಅಸಡ್ಡೆ ತೋರಿದೆ"; "ನಾನು ಆ ಪುಸ್ತಕವನ್ನು ಓದುತ್ತಿರಲಿಲ್ಲ. ಆದರೆ ನನ್ನ ಮನೆಯವರ ಒತ್ತಾಯಕ್ಕೆ ಓದಬೇಕಾಯಿತು" ಇವೆಲ್ಲ ಅವರ ಕೆಲವು ಪ್ರತಿಕ್ರಿಯೆಗಳು. **ತೊತ್ತೊ-ಚಾನ್** ಓದುವಂತೆ ಒತ್ತಾಯಿಸಿದ ಆ ಮನೆಯವರಿಗೆಲ್ಲ ತುಂಬಾ ವಂದನೆಗಳು!

ಪುಸ್ತಕ ಪ್ರಕಟಗೊಳ್ಳುವ ಮುನ್ನವೇ ಅದರ ಹಣದಿಂದ ಜಪಾನಿನಲ್ಲಿ ಮೊಟ್ಟಮೊದಲ ಕಿವುಡರ ವೃತ್ತಿ ರಂಗಭೂಮಿ ಸ್ಥಾಪಿಸಲು ನಾನು ನಿರ್ಧರಿಸಿದ್ದೆ. ಇದನ್ನು ಸಮಾಜ ಕಲ್ಯಾಣ ಸಂಸ್ಥೆ ಮಾನ್ಯ ಮಾಡಬೇಕೆಂದು ಕೋರಿ ಸರ್ಕಾರಕ್ಕೆ ಮನವಿ ಸಲ್ಲಿಸಿದೆ. ನನ್ನ ಸಾವಿನ ನಂತರವೂ, ಇಲ್ಲವೇ ಮುಪ್ಪಿನಲ್ಲಿ ನನಗೆ ಕೆಲಸ ಮಾಡಲು ಸಾಧ್ಯವಿಲ್ಲದಾಗಲೂ ಇದು ಮುಂದುವರೆಯಬೇಕೆಂಬುದು ನನ್ನ

ಆಶಯವಾಗಿತ್ತು. ಸರ್ಕಾರವು ನನ್ನ ಇಪ್ಪತ್ತೈದು ವರ್ಷಕ್ಕೂ ಹೆಚ್ಚಿನ ಕಲ್ಯಾಣ ಕಾರ್ಯವನ್ನು ಪರಿಗಣಿಸಿ ಇದಕ್ಕೆ ಒಪ್ಪಿಗೆ ನೀಡಿತು. ಹೀಗೆ 'ತೊತ್ತೊ ಫೌಂಡೇಷನ್' ಎಂಬ ಸಮಾಜ ಕಲ್ಯಾಣ ಸಂಸ್ಥೆ ಅಸ್ತಿತ್ವಕ್ಕೆ ಬಂತು. ಇದು ನಿರೀಕ್ಷೆಗೂ ಮೀರಿದ ಯಶಸ್ಸು ಕಂಡಿತು. ಇದರ ಮೂಲಕವೇ ಜಪಾನಿನ ಕಿವುಡರ ರಂಗಭೂಮಿ ಅಸ್ತಿತ್ವ ಪಡೆಯಿತು. ಸದ್ಯದಲ್ಲಿ ಸುಮಾರು ಇಪ್ಪತ್ತು ಕಿವುಡ ಕಲಾವಿದರು ತೊತ್ತೊ ಫೌಂಡೇಷನ್ ತರಬೇತಿ ಕೇಂದ್ರದಲ್ಲಿ ತರಬೇತಿ ಪಡೆಯುತ್ತಿದ್ದಾರೆ. ಇಲ್ಲಿ ಸಂಜ್ಞಾ ತರಗತಿಯೊಂದು ಕೂಡ ನಡೆಯುತ್ತಿದೆ. ನಾವು ಬಹುದಿನಗಳಿಂದ ಕನಸು ಕಾಣುತ್ತಿದ್ದಂತೆ ಕಳೆದ ವರ್ಷ ಇಟಲಿಯ ಪಲೆರಮೋದ ಅಂತರಾಷ್ಟ್ರಿಯ ಕಿವುಡ ಮತ್ತು ಮೂಗ ಕಾಂಗ್ರೆಸ್ಸಿನ ನಾಟಕೋತ್ಸವದಲ್ಲಿ ಕೆಯೋಗೆನ್ ನಾಟಕವಾಡಿದೆವು. ಜಪಾನಿನ ಕಿವುಡ ಕಲಾವಿದರು ಹೊರದೇಶದಲ್ಲಿ ಪ್ರದರ್ಶನ ನೀಡಿದ್ದು ಇದೇ ಮೊದಲು. ನಿಮ್ಮಂಥ ಹಲವಾರು ಮಂದಿ **ತೊತ್ತೊ-ಚಾನ್** ಓದಿದ್ದರಿಂದ ಮಾತ್ರ ಇದು ಸಾಧ್ಯವಾಯಿತು.

**ತೊತ್ತೊ-ಚಾನ್** ಅತ್ಯಂತ ಜನಪ್ರಿಯ ಪುಸ್ತಕವಾದುದರಿಂದ ಮತ್ತು ತೊತ್ತೊ-ಫೌಂಡೇಷನ್‌ನ ಕೆಲಸದ ಕಾರಣದಿಂದಾಗಿ ಎರಡು ವರ್ಷಗಳ ಹಿಂದೆ ಚಕ್ರವರ್ತಿಗಳ ವಾರ್ಷಿಕ ಸ್ಪ್ರಿಂಗ್ ಗಾರ್ಡನ್ ಪಾರ್ಟಿಗೆ ನನಗೆ ಆಹ್ವಾನ ದೊರಕಿತ್ತು. ನೊಬೆಲ್ ಪ್ರಶಸ್ತಿ ವಿಜೇತ ಕೆನಿಚಿ ಫುಕುಯಿಯಂತಹವರು ಅಲ್ಲಿ ಭಾಗವಹಿಸಿದ್ದರು. "ನಿಮ್ಮ ಪುಸ್ತಕ ಅಷ್ಟೊಂದು ಜನಪ್ರಿಯವಾದದ್ದು ತುಂಬಾ ಸಂತೋಷ" ಎಂಬ ಚಕ್ರವರ್ತಿಗಳ ಪ್ರಶಂಸೆಗೆ ನಾನು ಪುಳಕಿತಳಾದೆ.

1981 ಅನ್ನು ಅಂತರರಾಷ್ಟ್ರೀಯ ಅಂಗವಿಕಲರ ವರ್ಷವಾಗಿ ಘೋಷಿಸಲಾಗಿತ್ತು. ಆ ವರ್ಷದ ಡಿಸೆಂಬರ್ 9 ರಂದು (ಈ ದಿನವನ್ನು ಈಗ ಅಂಗವಿಕಲರ ದಿನವಾಗಿ ಜಪಾನಿನಲ್ಲಿ ಆಚರಿಸಲಾಗುತ್ತದೆ) ಪ್ರಧಾನಮಂತ್ರಿ ಸುಸುಕಿಯವರು ನನಗೆ ಪ್ರಶಸ್ತಿ ನೀಡಿದರು. ಇಂತಹ ಅನೇಕ ಪ್ರಶಸ್ತಿಗಳು ನನಗೆ ದೊರೆತಿದ್ದು, ಮಕ್ಕಳ ಪುಸ್ತಕಗಳ ಲೇಖಕರಾದ ಯೂಸೋ ಯಾಮಾಮೊತೋ ಸ್ಮಾರಕ ಸಾಹಿತ್ಯ ಪ್ರಶಸ್ತಿ 'ವೆಸ್ಟ್ಯಾಡ್ ಸ್ಟೋನ್' ಕೂಡ ಇದರಲ್ಲಿ ಸೇರುತ್ತದೆ.

ಪುಸ್ತಕ ಪ್ರಕಟವಾದ ನಂತರ ಸಿನೆಮಾ, ಟೆಲಿವಿಷನ್, ರಂಗಭೂಮಿ ಮತ್ತು ಅನಿಮೇಷನ್ ಫಿಲಂ ಕಂಪನಿಗಳಿಂದ ನನ್ನ ಕತೆಯನ್ನು ತಂತಮ್ಮ ಮಾಧ್ಯಮಗಳಲ್ಲಿ ತಯಾರಿಸಲು ಬೇಡಿಕೆಗಳ ಸುರಿಮಳೆಯೇ ಬಂದಿತು. ಆದರೆ ಅಸಂಖ್ಯಾತ ಓದುಗರು ಪುಸ್ತಕವನ್ನು ಓದಿ ತಮ್ಮದೇ ಮಾನಸಿಕ ಲೋಕಗಳನ್ನು ಸೃಷ್ಟಿಸಿಕೊಂಡಿರುವಾಗ ಅದನ್ನು ಮೀರಿಸುವ ಪ್ರಯತ್ನ ಅಸಾಧ್ಯವೆಂದೇ ನನಗನಿಸಿದ್ದರಿಂದ ನಾನವರನ್ನೆಲ್ಲ ನಿರಾಸೆಗೊಳಿಸಬೇಕಾಯಿತು. ಹಾಗೆಯೇ ಚಿಹಿರೋ ಇವಾಸಾಕಿಯವರ ಅಸಾಧಾರಣ ರೇಖಾಚಿತ್ರಗಳು ಕೂಡ. ಆದರೆ ನಾನು ನನ್ನ ಕತೆಯನ್ನು ಸಿಂಫೋನೀ ಗೀತ ಚಿತ್ರವಾಗಿಸುವ ಶಿನ್‌ಸೆಯಿ ನಿಹೈನ್ ಸಿಂಫೋನಿ ಆರ್ಕೆಸ್ಟ್ರಾದ ಬೇಡಿಕೆಯನ್ನು ಮಾತ್ರ ಮನ್ನಿಸಿದೆ. ಅಕಿಹಿರೋ ಕೊಮೊರಿಯವರ ಸಂಗೀತ ನನ್ನ ಪದಗಳಿಗಿಂತಲೂ ಹೆಚ್ಚು ಮನೋಜ್ಞ. ಇದರ ನಿರೂಪಣೆಯ ಹೊಣೆಯನ್ನು ನಾನೇ ಹೊತ್ತೆ. ಶಿನ್‌ಸೆಯಿ

ನಿಹ್ಹೈನ್ ಸಿಂಫೋನಿ ಜಪಾನಿನಾದ್ಯಂತ ಅನೇಕ ಪ್ರದರ್ಶನಗಳನ್ನು ಕೊಡುತ್ತಾ ಬಂದಿದೆ. ಇದೊಂದು ದಾಖಲೆಯ ಪ್ರದರ್ಶನ ಕಂಡ ಗೀತಚಿತ್ರ.

1982ರಲ್ಲಿ **ತೊತ್ತೊ-ಚಾನ್** ಜಪಾನ್ ಭಾಷೆಯಲ್ಲಿ ಹೊರಬಂದ ಮರುವರ್ಷವೇ ಡೊರೊತಿ ಬ್ರಿಟೊನ್ ಅವರ ಇಂಗ್ಲಿಷ್ ಅನುವಾದವೂ ಸಿದ್ಧಗೊಂಡಿತು. ಸಂಗೀತಗಾರಳೂ ಮತ್ತು ಕವಯತ್ರಿಯೂ ಆಗಿರುವ ಈಕೆ ಮೂಲ ಕೃತಿಯ ಲಯ ಮತ್ತು ಸಂವೇದನೆಗಳೆರಡನ್ನೂ ಸಮರ್ಥವಾಗಿ ಇಂಗ್ಲಿಷಿಗೆ ತಂದಿದ್ದಾರೆ. ಓದಲು ಇದು ಆನಂದದಾಯಕವಾಗಿದೆ. ಇಂಗ್ಲಿಷ್ ಆವೃತ್ತಿ ಕೂಡ ಜಪಾನಿನಲ್ಲಿ ಅತ್ಯಂತ ಜನಪ್ರಿಯತೆ ಗಳಿಸಿದ್ದು ನಾಲ್ಕು ಲಕ್ಷ ಪ್ರತಿಗಳು ಮಾರಾಟಗೊಂಡಿವೆ.

ಇಂಗ್ಲಿಷ್ ಆವೃತ್ತಿಯು ಏಕಕಾಲಕ್ಕೆ ಅಮೆರಿಕಾದಲ್ಲೂ ಬಿಡುಗಡೆಗೊಂಡಿತು. ಈ ಸಂದರ್ಭದಲ್ಲಿ ನಾನು ಜಾನ್ ಕಾರ್ಸನ್‌ರ 'ಟುನೈಟ್' ಷೋದಲ್ಲಿ ಕಾಣಿಸಿಕೊಂಡೆ. ಆನಂತರ ಅನೇಕ ಚರ್ಚೆಗಳು ಮತ್ತು ಸಮಾಚಾರ ಪತ್ರಿಕೆಗಳ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ನನಗೆ ಕೋರಿಕೆ ಬಂತು. ಅಮೆರಿಕದ ಪ್ರತಿಷ್ಠಿತ ಪತ್ರಿಕೆ ದಿ *ನ್ಯೂಯಾರ್ಕ್ ಟೈಂಸ್* ತನ್ನ ಭಾನುವಾರದ ಪುಸ್ತಕ ವಿಭಾಗದಲ್ಲಿ ಇದರ ವಿಮರ್ಶೆಯನ್ನು ಪ್ರಕಟಿಸಿತು. ಅಲ್ಲದೆ ಅಮೆರಿಕಾದ ಸಂಪರ್ಕ ಮಾಧ್ಯಮಗಳಲ್ಲಿ ಜಪಾನಿನ ಟೆಲಿವಿಷನ್ ಕಲಾವಿದೆಯ ನಾವೀನ್ಯತೆಯ ಬಗ್ಗೆ ಬಹಳ ಪ್ರಚಾರ ಸಿಕ್ಕಿತು. *ಟೈಮ್* ಪತ್ರಿಕೆಯು ಜಪಾನ್ ಕುರಿತ ತನ್ನ ವಿಶೇಷ ಸಂಚಿಕೆಯಲ್ಲಿ ಇಡೀ ಪುಟದಲ್ಲಿ ನನ್ನೊಂದಿಗಿನ ಸಂದರ್ಶನವನ್ನು ಪ್ರಕಟಿಸಿತು.

ಚೀನಾ ಮತ್ತು ಕೊರಿಯಾಗಳಲ್ಲಿ ಈಗಾಗಲೇ **ತೊತ್ತೊ-ಚಾನ್**ನ ಅನುವಾದಗಳು ಪ್ರಕಟಗೊಂಡಿವೆ. ಇವೆರಡೂ ದೇಶಗಳು ಜಪಾನಿನೊಡನೆ ಪುಸ್ತಕದ ಹಕ್ಕುಗಳ ಬಗ್ಗೆ ಒಪ್ಪಂದ ಇಲ್ಲದಿರುವುದರಿಂದ ನನಗೆ ಭಾಷಾಂತರಗೊಂಡ ಬಗ್ಗೆ ತಿಳಿದಿರಲಿಲ್ಲ. ಚೀನಾದ ಯಾರೋ ಸಹೃದಯರು ಜಪಾನೀ ಸ್ನೇಹಿತರೊಬ್ಬರ ಮೂಲಕ ಪ್ರತಿಯೊಂದನ್ನು ಕಳಿಸಿದಾಗಲೇ ನಾನದನ್ನು ನೋಡಿದ್ದು. ಚೀನಾದಲ್ಲಿ ಹೀಗೆ ಇನ್ನೂ ಎರಡು ಮೂರು ಬೇರೆ ಬೇರೆ ಭಾಷಾಂತರಗಳು ಹೊರಬಂದಿವೆ. ಪೋಲೆಂಡ್ ಮತ್ತು ಫಿನ್‌ಲ್ಯಾಂಡ್‌ಗಳಲ್ಲೂ ಕೆಲ ಪ್ರಕಾಶಕರು ಅನುವಾದಕ್ಕೆ ಮುಂದಾಗಿದ್ದು ಕೆಲಸ ಪ್ರಗತಿಯಲ್ಲಿದೆ. ಜೆಕೋಸ್ಲೋವೇಕಿಯಾದ ಪ್ರಕಾಶಕರ ಜೊತೆಗೂ ಮಾತುಕತೆ ನಡೆಯುತ್ತಿದೆಯಲ್ಲದೆ ಯುರೋಪಿಯನ್ ದೇಶಗಳು ಕೂಡ ಅನುವಾದದಲ್ಲಿ ಆಸಕ್ತಿ ತೋರುತ್ತಿವೆ. ಎಷ್ಟೊಂದು ಜನ **ತೊತ್ತೊ-ಚಾನ್** ಮೂಲಕ ಜಪಾನಿನ ಪರಿಚಯ ಪಡೆಯುತ್ತಾರೆಂಬುದೇ ನನಗೆ ಹಿಗ್ಗು. ಅಮೆರಿಕಾದ ಪ್ರಾಥಮಿಕ ಶಾಲಾ ಹುಡುಗನೊಬ್ಬನ 'ಪ್ರೇಮ ಪತ್ರ'ವೂ ಬಂದಿದೆ. "ತೊತ್ತೊಚಾನ್, ನೀನು ಸುಂದರಿಯಾ? ಹಾಗಿದ್ದರೆ ನನ್ನ ಮನೆಗೆ ನಿನಗೆ ಊಟಕ್ಕೆ ಆಹ್ವಾನವಿದೆ" ಎಂದು ಬರೆದಿದ್ದಾನೆ. ಈ ಪುಸ್ತಕವನ್ನು ತನ್ನ ತರಗತಿಗೆ ಓದಿ ಹೇಳಿದ ಉಪಾಧ್ಯಾಯರು ಈ ಹುಡುಗನು ಬಿಳಿಯರಲ್ಲದ ಬಡ ಕುಟುಂಬದವನೆಂದೂ ಬರೆದಿದ್ದಾರೆ.

ಹಲವಾರು ಸಣ್ಣ ಮತ್ತು ದೊಡ್ಡ ಹುಡುಗಿಯರು ತಮ್ಮ ಪತ್ರಗಳಲ್ಲಿ, "ಈ ಪುಸ್ತಕ ಸಹೃದಯತೆಯ ಆಗರವೇ ಆಗಿದೆ" ಎಂದಿದ್ದಾರೆ. ಆದರೆ ತಮ್ಮ ಮನತಟ್ಟಿದ

ಸನ್ನಿವೇಶಗಳ ಬಗ್ಗೆ ನಿರ್ದಿಷ್ಟವಾಗಿ ಏನನ್ನೂ ಬರೆದಿಲ್ಲ. ಬಹುಶಃ ಒಬ್ಬೊಬ್ಬರಿಗೆ ಒಂದೊಂದು ಸನ್ನಿವೇಶ ಇಷ್ಟವಾಗಿರಬೇಕು. ಆದರೆ ಪುಟ್ಟ ಹೃದಯಗಳು ಒಳ್ಳೆಯತನಕ್ಕೆ, ಸೂಕ್ಷ್ಮತೆಗೆ ಬಲುಬೇಗ ಸ್ಪಂದಿಸುತ್ತವೆ ಎಂಬುದಂತೂ ನಿಜ.

ನೊಬೆಲ್ ಪ್ರಶಸ್ತಿ ವಿಜೇತ ಯೂನಿಸೆಫ್ ಸಂಸ್ಥೆಗೆ ನಾನು ಗುಡ್‌ವಿಲ್ (ಸದ್ಭಾವನಾ) ರಾಯಭಾರಿಯಾಗಿ ನೇಮಕಗೊಂಡಿದ್ದೇನೆ. ***ತೊತ್ತೊ-ಚಾನ್*** ನಿಂದಾಗಿಯೇ ಇದು ಸಾಧ್ಯವಾದದ್ದೆಂದು ಮತ್ತೊಮ್ಮೆ ಹೇಳಬಯಸುತ್ತೇನೆ. ಯೂನಿಸೆಫ್‌ನ ನ್ಯೂಯಾರ್ಕ್ ಸೆಕ್ರೆಟರಿಯೇಟ್‌ನ ಎಕ್ಸಿಕ್ಯುಟಿವ್ ಡೈರೆಕ್ಟರ್ ಅವರ ಸ್ನೇಹಿತರು ಕಳಿಸಿದ್ದ **ತೊತ್ತೊ-ಚಾನ್** ಅನ್ನು ಓದಿದ್ದರು. ಪುಸ್ತಕ ಅವರಿಗೆ ತುಂಬಾ ಹಿಡಿಸಿತ್ತು. ಯೂನಿಸೆಫ್‌ನ ವಿಚಾರಗಳು ನನ್ನ ವಿಚಾರಗಳೊಂದಿಗೆ ತುಂಬಾ ತಾಳೆಯಾಗುತ್ತವೆಂದು ಆತ ಅಭಿಪ್ರಾಯಪಟ್ಟರು. ಏಷ್ಯಾದಿಂದಲೇ ಯೂನಿಸೆಫ್‌ಗೆ ಗುಡ್‌ವಿಲ್ (ಸದ್ಭಾವನಾ) ರಾಯಭಾರಿ ನೇಮಕವಾಗಬೇಕೆಂದು ಯೋಚಿಸುತ್ತಿದ್ದ ಆತ ಅದಕ್ಕಾಗಿ ನನ್ನನ್ನು ಆರಿಸಿಕೊಂಡರು. ಅಮೆರಿಕಾದ ನಟ ಡ್ಯಾನಿ ಕೆಯಿ, ಬ್ರಿಟಿಷ್ ನಟ ಪೀಟರ್ ಉಸ್ತಿನೋವ್ ಮತ್ತು ನಾರ್ವೆಯ ನಟಿ ಲಿವ್ ಉಲ್‌ಮನ್ ಇವರೆಲ್ಲ ಈಗಾಗಲೇ ಗುಡ್‌ವಿಲ್ ರಾಯಭಾರಿಗಳಾಗಿ ಹೆಸರುಗಳಿಸಿದ್ದು ನಾನು ನಾಲ್ಕನೆಯವಳಾಗಿ ಸೇರಿಕೊಳ್ಳುತ್ತಿದ್ದೇನೆ. ದಿನವೊಂದಕ್ಕೆ ನಲವತ್ತು ಸಾವಿರ ಮಕ್ಕಳು ಮತ್ತು ವರ್ಷವೊಂದಕ್ಕೆ ಹದಿನೈದು ಮಿಲಿಯ ಮಕ್ಕಳು ಹಸಿವು ಮತ್ತು ಅದಕ್ಕೆ ಸಂಬಂಧಿಸಿದ ಕಾಯಿಲೆಗಳಿಂದ ಸಾಯುತ್ತಿದ್ದು ಅವರನ್ನೆಲ್ಲ ನನ್ನ ಕಣ್ಣಾರೆ ಕಂಡು ನಿಮಗೆ ವರದಿ ಮಾಡುವುದು ನನ್ನ ಕೆಲಸ. ಈ ಬೇಸಿಗೆಯಲ್ಲಿ ನಾನು ಆಫ್ರಿಕಾಕ್ಕೆ ಹೋಗುತ್ತಿದ್ದೇನೆ. ಆದಷ್ಟು ಬೇಗ ಏಷಿಯಾದ ವಿವಿಧ ದೇಶಗಳಲ್ಲಿ ಸುತ್ತುವ ಯೋಜನೆ ಹಾಕಿಕೊಂಡಿದ್ದೇನೆ. ಕೊಬಾಯಾಶಿಯವರು ಬದುಕಿದ್ದಿದ್ದರೆ ಖಂಡಿತವಾಗಿಯೂ ಸಂತೋಷ ಪಡುತ್ತಿದ್ದರು. "ನೀವೆಲ್ಲ ಒಂದಾಗಿದ್ದೀರೆಂಬುದು ನಿಮಗೆ ಗೊತ್ತಿದೆ ತಾನೆ. ನೀವು ಏನೇ ಮಾಡಿ, ಈ ಜಗತ್ತಿನಲ್ಲಿ ನೀವೆಲ್ಲ ಒಂದಾಗಿದ್ದೀರಿ" ಕೊಬಾಯಾಶಿಯವರು ಯಾವಾಗಲೂ ಹೇಳುತ್ತಿದ್ದ ಮಾತಿದು.

ವಸಂತ, 1984 **ತೆತ್ಸುಕೊ ಕುರೊಯಾನಾಗಿ**



## ರೈಲು ನಿಲ್ದಾಣ

ಜಿಯುಗಾವೋಕ ನಿಲ್ದಾಣದಲ್ಲಿ, ಓಯಿಮಾಚಿ ರೈಲಿನಿಂದ ಇಳಿದು ತೊತ್ತೊ-ಚಾನ್‌ಳ ತಾಯಿ ಮಗಳ ಕೈಹಿಡಿದು, ಟಿಕೇಟ್ ತೋರಿಸಿ ಹೊರಬರುವ ಗೇಟಿನ ಕಡೆ ನಡೆದಳು. ತೊತ್ತೊ-ಚಾನ್ ಈ ಮೊದಲು ರೈಲಿನಲ್ಲಿ ಪ್ರಯಾಣಿಸಿದ್ದಿಲ್ಲವೆಂದೇ ಹೇಳಬೇಕು. ತನ್ನ ಮುಷ್ಟಿಯಲ್ಲಿ ಗಟ್ಟಿಯಾಗಿ ಹಿಡಿದುಕೊಂಡಿದ್ದ ಅಮೂಲ್ಯವಾದ ಟಿಕೇಟುಗಳನ್ನು ಕೊಟ್ಟುಬಿಡಲು ಅವಳು ತಯಾರಿರಲಿಲ್ಲ.

"ನಾನಿದನ್ನ ಇಟ್ಟುಕೊಳ್ಳಲಾ?" ತೊತ್ತೊ-ಚಾನ್ ಟಿಕೇಟು ಕಲೆಕ್ಟರನನ್ನು ಕೇಳಿದಳು. "ಇಲ್ಲ ನೀನು ಹಾಗೆ ಮಾಡಲು ಸಾಧ್ಯವಿಲ್ಲ" ಎನ್ನುತ್ತಲೇ ಆತ ಅವಳಿಂದ ಟಿಕೇಟನ್ನು ಪಡೆದ.

"ಅವೆಲ್ಲಾ ನಿಮ್ಮದೇನಾ?" ಟಿಕೇಟುಗಳಿಂದ ತುಂಬಿದ ಅವನ ಪೆಟ್ಟಿಗೆಯತ್ತ ತೋರಿಸುತ್ತಾ ಆಕೆ ಕೇಳಿದಳು.

"ಇಲ್ಲ, ಅವೆಲ್ಲಾ ರೈಲು ನಿಲ್ದಾಣಕ್ಕೆ ಸೇರಿದವು" ಹೊರಹೋಗುವ ಜನರಿಂದ ಟಿಕೇಟು ಕಸಿದುಕೊಳ್ಳುತ್ತಾ ಅವನೆಂದ.

"ಓಹೋ" ತೊತ್ತೊ-ಚಾನ್ ಪೆಟ್ಟಿಗೆಯತ್ತಲೇ ನೋಡುತ್ತಾ "ನಾನು ದೊಡ್ಡವಳಾದ ಮೇಲೆ ರೈಲು ಟಿಕೇಟುಗಳನ್ನು ಮಾರುತ್ತೇನೆ" ಎಂದಳು.

ಇದೀಗ ಟಿಕೇಟು ಕಲೆಕ್ಟರ್ ಅವಳತ್ತ ನೋಡಿದ. "ನನ್ನ ಸಣ್ಣ ಮಗನೂ ರೈಲ್ವೇ ನಿಲ್ದಾಣದಲ್ಲೇ ಕೆಲಸ ಮಾಡುತ್ತಾನಂತೆ. ನೀವಿಬ್ಬರೂ ಕೂಡಿಯೇ ಕೆಲಸ

ಮಾಡಬಹುದು !'' ಎಂದ.

ತೊತ್ತೊ-ಚಾನ್ ಪಕ್ಕಕ್ಕೆ ಸರಿದು ಅವನನ್ನು ದಿಟ್ಟಿಸಿ ನೋಡಿದಳು. ಅವನೊಬ್ಬ ದಢೂತಿ ಆಸಾಮಿ. ಕನ್ನಡಕ ಧರಿಸಿದ್ದ. ನೋಡಲು ಒಳ್ಳೆಯವನಂತಿದ್ದ.

''ಹೂಂ'' ಅವಳು ಸೊಂಟದ ಮೇಲೆ ಕೈಯೇರಿಸಿ ಅವನ ಸಲಹೆಯನ್ನು ಎಚ್ಚರಿಕೆಯಿಂದ ಗಮನಿಸಿದಳು. ''ನಿಮ್ಮ ಮಗನ ಜತೆ ಕೆಲಸ ಮಾಡಲಿಕ್ಕೇನು ಅಡ್ಡಿಯಿಲ್ಲ, ಯೋಚಿಸ್ತೇನೆ. ಆದರೆ ನನಗೀಗ ಸ್ವಲ್ಪವೂ ಸಮಯವಿಲ್ಲ. ಹೊಸಾ ಶಾಲೆ ಸೇರಿಕೊಳ್ಳಲು ಹೋಗುತ್ತಿದ್ದೇನೆ'' ಎಂದು ಅಮ್ಮನ ಕಡೆ ಓಡಿದಳು. ''ನಾನು ದೊಡ್ಡವಳಾದ್ಮೇಲೆ ಟಿಕೇಟು ಮಾರುವ ಕೆಲಸಕ್ಕೆ ಸೇರಿಕೊಳ್ತೇನೆ'' ಎಂದು ಅಮ್ಮನಿಗೆ ಹೇಳಿದಳು.

ಅಮ್ಮನಿಗೇನೂ ಆಶ್ಚರ್ಯವಾಗಲಿಲ್ಲ. ''ನೀನು ಗೂಢಚಾರಿಣಿಯಾಗ್ತಿಯೇನೋ ಅಂತ ಮಾಡ್ಕಿದ್ದೆ'' ಎಂದಳು ನಗುತ್ತ.

ತೊತ್ತೊ-ಚಾನ್ ನಿನ್ನೆವರೆಗೂ ಗೂಢಚಾರಿಣಿಯಾಗಬಯಸಿದ್ದಳು. ಆದರೆ ಟಿಕೇಟುಗಳಿಂದ ತುಂಬಿದ ಇಡೀ ಪೆಟ್ಟಿಗೆಯೇ ತನ್ನ ಸುಪರ್ದಿನಲ್ಲಿರುವುದಾದರೆ ಅದೆಂಥಾ ಮಜಾ, ಎಂದುಕೊಂಡಳು.

''ಹಾಂ'' ಅವಳಿಗೀಗ ಅತ್ಯದ್ಭುತ ಆಲೋಚನೆ ಬಂತು. ''ನಾನು ಗೂಢಚಾರಿಣಿ ಹಾಗೂ ಟಿಕೇಟು ಮಾರಾಟಗಾರಳಾಗಲು ಸಾಧ್ಯವಿಲ್ಲವೇನಮ್ಮ?'' ಕತ್ತೆತ್ತಿ ಅಮ್ಮನನ್ನೇ ನೋಡುತ್ತಾ ಪ್ರಶ್ನಿಸಿದಳು. ಅಮ್ಮ ಉತ್ತರಿಸಲಿಲ್ಲ. ಕಿರು ಹೂಗಳಿಂದ ಅಲಂಕೃತವಾದ ಹ್ಯಾಟಿನ ಕೆಳಗಿನ ಅವಳ ಮುದ್ದಾದ ಮುಖ ಗಂಭೀರವಾಗಿತ್ತು. ಅಮ್ಮನಿಗೆ ನಿಜವಾಗಿಯೂ ಚಿಂತೆಯಾಗಿತ್ತು. ತೊತ್ತೊ-ಚಾನ್‌ಳನ್ನು ಹೊಸ ಶಾಲೆಯಲ್ಲಿ ಸೇರಿಸಿಕೊಳ್ಳದೇ ಹೋದರೆ? ತೊತ್ತೊ-ಚಾನ್ ತನ್ನ ಪಾಡಿಗೆ ತಾನು ರಸ್ತೆಯುದ್ದಕ್ಕೂ ಜಿಗಿಯುತ್ತಾ ಹರಟುತ್ತಾ ನಡೆಯುತ್ತಿದ್ದಳು. ಅಮ್ಮನ ಚಿಂತೆಯ ಅರಿವು ಲವಲೇಶವೂ ಅವಳಿಗೆ ಇರಲಿಲ್ಲ. ಅಮ್ಮನತ್ತ ನೋಡುತ್ತಾ ಹೇಳಿದಳು. ''ನಾನು ಮನಸ್ಸು ಬದಲಾಯಿಸಿದ್ದೇನೆ. ಹೊಸ ಅಂಗಡಿಗಳಿಗಾಗಿ ಪ್ರಚಾರ ಮಾಡುತ್ತಾ ಹೋಗುವ ಬೀದಿ ಸಂಗೀತಗಾರರ ತಂಡವನ್ನು ಸೇರಿಕೊಳ್ಳುತ್ತೇನೆ'' ಅಮ್ಮನಿಗೀಗ ನಿಜಕ್ಕೂ ಸಿಟ್ಟು ಬಂತು. ''ತಡವಾಗುತ್ತೆ, ಬೇಗ ನಡಿ. ನಾವು ಹೆಡ್‌ಮಾಸ್ತರನ್ನು ಕಾಯಿಸಬಾರದು. ಇನ್ನು ಹರಟೆ ಸಾಕು. ರಸ್ತೆ ನೋಡ್ತಾ ಸರಿಯಾಗಿ ಹೆಜ್ಜೆ ಹಾಕು'' ಎಂದಳು.

ಅವರು ನಡೆಯುತ್ತಾ ಹೋದಂತೆ ಸ್ವಲ್ಪ ದೂರದಲ್ಲಿ ಸಣ್ಣ ಶಾಲೆಯೊಂದರ ಗೇಟು ಅವರಿಗೆ ಕಾಣಿಸತೊಡಗಿತು.

## ಕಿಟಕಿಯ ಬಳಿ ನಿಂತ ಪುಟ್ಟ ಹುಡುಗಿ

ಅಮ್ಮನ ಚಿಂತೆಗೆ ಕಾರಣ ತೊತ್ತೊ-ಚಾನ್ ಶಾಲೆಗೆ ಹೋಗಲು ಶುರು ಮಾಡಿದ ಕೆಲವೇ ದಿನಗಳಲ್ಲೇ ಅವಳನ್ನು ಶಾಲೆಯಿಂದ ಹೊರಹಾಕಲಾಗಿತ್ತು. ಮೊದಲನೇ

ತರಗತಿಯಿಂದಲೇ ಹೊರಹಾಕುವುದೆಂದರೆ!

ಇದಾದದ್ದು ಒಂದು ವಾರದ ಹಿಂದೆಯಷ್ಟೇ. ತೊತ್ತೊ-ಚಾನ್ ತರಗತಿಯ ಅಧ್ಯಾಪಕಿ ಅಮ್ಮನಿಗೆ ಕರೆಕಳಿಸಿದ್ದರು. ಅಧ್ಯಾಪಕಿಗೆ ಸುತ್ತಿ ಬಳಸಿ ಹೇಳುವ ಅವಶ್ಯಕತೆಯಿರಲಿಲ್ಲ.

"ನಿಮ್ಮ ಮಗಳು ಇಡೀ ತರಗತಿಗೆ ತೊಂದರೆ ಕೊಡುತ್ತಾಳೆ. ನೀವು ಅವಳನ್ನು ಬೇರೆ ಶಾಲೆಗೆ ಸೇರಿಸಿದರೆ ಉಪಕಾರವಾಗುತ್ತೆ" ನೋಡಲು ಚೆನ್ನಾಗಿದ್ದ ಯುವ ಅಧ್ಯಾಪಕಿ ನಿಟ್ಟುಸಿರಿಟ್ಟು ಹೇಳಿದ್ದರು. "ನಿಜವಾಗಿಯೂ ನನಗೆ ಅವಳ ಮೇಲೆ ತುಂಬಾ ಸಿಟ್ಟು ಬಂದಿದೆ."

ಅಮ್ಮ ದಂಗಾಗಿ ಹೋದಳು. ಇಡೀ ತರಗತಿಗೇ ತೊಂದರೆಯಾಗುವಂತಹ ಅದೇನಪ್ಪ ಅಂಥಾದ್ದು ತೊತ್ತೊ-ಚಾನ್ ಮಾಡಿದ್ದು?

ಬಾಬ್‌ಕಟ್‌ನಂತೆ ನೀಟಾಗಿ ಕತ್ತರಿಸಿದ್ದ ತನ್ನ ತಲೆಗೂದಲನ್ನು ನವಿರಾಗಿ ಸವರುತ್ತಾ ಕಣ್ಣು ಪಳಗುಟ್ಟಿಸಿಕೊಂಡು ಆಕೆ ಪ್ರಾರಂಭಿಸಿದಳು. "ಒಂದೊಂದಾಗಿ ಹೇಳ್ತೀನಿ ಕೇಳಿ. ಮೊದಲನೆಯದಾಗಿ ಅವಳು ತನ್ನ ಡೆಸ್ಕ್ ಅನ್ನು ಒಂದುನೂರು ಸಲವಾದರೂ ತೆಗೆದು ಮುಚ್ಚುತ್ತಾಳೆ. 'ಏನಾದರೂ ತೆಗೆದುಕೊಳ್ಳುವುದೋ, ಇಡುವುದೋ ಇರದ ಹೊರತು ಸುಮ್ಮ-ಸುಮ್ಮನೆ ಅದನ್ನು ತೆಗೆಯಬೇಡಿ' ಎಂದು ನಾನು ಎಲ್ಲರಿಗೂ ಹೇಳಿದ್ದೆ. ಇದನ್ನೇ ನೆಪ ಮಾಡಿಕೊಂಡು ನಿಮ್ಮ ಮಗಳು ಏನನ್ನಾದರೂ ತೆಗೆಯುತ್ತಲೇ, ಹಾಕುತ್ತಲೇ ಇರುತ್ತಾಳೆ. ನೋಟ್ ಪುಸ್ತಕವನ್ನೋ, ಪೆನ್ಸಿಲ್ ಪೆಟ್ಟಿಗೆಯನ್ನೋ, ಪಠ್ಯಪುಸ್ತಕಗಳನ್ನೋ ಡೆಸ್ಕ್‌ನಲ್ಲಿರುವ ಅವಳ ಬೇರೆ ಏನಾದರೂ ವಸ್ತುಗಳನ್ನೋ ತೆಗೆಯುವುದು, ಹಾಕುವುದು ನಡೆದೇ ಇರುತ್ತೆ. ನೋಡಿ, ಈಗ ನಾವು ಅಕ್ಷರಗಳನ್ನೇ ಬರೆಯಬೇಕೆಂದು ಇಟ್ಟುಕೊಳ್ಳೋಣ. ನಿಮ್ಮ ಮಗಳು ಡೆಸ್ಕ್ ತೆಗೆದು ಪೆನ್ಸಿಲ್ ತೆಗೆದುಕೊಂಡು ಪುನಃ ಮುಚ್ಚುತ್ತಾಳೆ. ಈಗ 'ಎ' ಬರೆಯುತ್ತಾಳೆ. ಅದನ್ನು ಸರಿಯಾಗಿ ಬರೆದಿಲ್ಲ ಎನಿಸಿದರೆ ಅಥವಾ ತಪ್ಪೇನಾದರೂ ಆದರೆ ತಕ್ಷಣ ಡೆಸ್ಕ್ ತೆಗೆದು ರಬ್ಬರ್ ತೆಗೆದುಕೊಂಡು ಅದನ್ನು ಮುಚ್ಚುತ್ತಾಳೆ. ಅಳಿಸಿಯಾದ ಮೇಲೆ ಮತ್ತೆ ಡೆಸ್ಕ್ ತೆಗೆಯುವುದು, ರಬ್ಬರನ್ನು ಒಳಗಿಟ್ಟು ಡೆಸ್ಕ್ ಮುಚ್ಚುವುದು. 'ಎ' ಅನ್ನು ಸರಿಯಾಗಿ ಬರೆದಿದ್ದೇನೆ ಅನ್ನಿಸಿದಾಗ ಮತ್ತೆ ಅದೇ ದಡಬಡ ಶಬ್ದದಿಂದ ಡೆಸ್ಕನ್ನು ತೆಗೆದು, ಎಲ್ಲ ವಸ್ತುಗಳನ್ನೂ ಒಂದೊಂದಾಗಿ ಒಳಹಾಕುತ್ತಾಳೆ. ಪೆನ್ಸಿಲನ್ನು ಒಳಹಾಕಿ ಮುಚ್ಚುತ್ತಾಳೆ, ಪುನಃ ತೆಗೆಯುತ್ತಾಳೆ. ನೋಟ್ ಪುಸ್ತಕವನ್ನು ಹಾಕಿ ಮುಚ್ಚುಬಿಡುತ್ತಾಳೆ, ಪುನಃ ತೆಗೆಯುತ್ತಾಳೆ. ಪಠ್ಯ ಪುಸ್ತಕ ಒಳಹಾಕಿ ಮುಚ್ಚುತ್ತಾಳೆ. ಮತ್ತೆ ಮುಂದಿನ ಅಕ್ಷರಕ್ಕೆ ಹೋದಾಗ ಈ ಇಡೀ ಕ್ರಿಯೆ ಹಿಂದಿನಂತೆಯೇ ಮೊದಲಿನಿಂದ ಕೊನೆಯವರೆಗೂ ನಡೆಯುತ್ತೆ. ಮೊದಲು ನೋಟ್ ಪುಸ್ತಕ, ನಂತರ ಪೆನ್ಸಿಲ್ಲು, ನಂತರ ರಬ್ಬರು ಹೀಗೆ, ಡೆಸ್ಕನ್ನು ತೆಗೆಯುವುದು, ಮುಚ್ಚುವುದು. ಇದೇ ಕೆಲಸ. ನನಗಂತೂ ತಲೆ ಸಿಡಿದು ಹೋಗುತ್ತೆ. ಅಲ್ಲದೆ ಅವಳನ್ನು ಬಯ್ಯೋದಕ್ಕೂ ಆಗುವುದಿಲ್ಲ ನೋಡಿ. ಅವಳಿಗೆ ಪ್ರತಿ ಸಲ ತೆಗೆಯೋದಕ್ಕೂ, ಮುಚ್ಚೋದಕ್ಕೂ ಒಂದಲ್ಲ ಒಂದು ಕಾರಣ ಇದ್ದೇ ಇರುತ್ತೆ."

ಇಡೀ ಸನ್ನಿವೇಶ ಕಣ್ಣ ಮುಂದೆ ನಡೆಯುತ್ತಿರುವಂತೆ ವಿವರಿಸಿದರು ಆಕೆ, ರೆಪ್ಪೆ ಬಡಿಯುತ್ತಾ. ತೊತ್ತೊ-ಚಾನ್ ಏಕೆ ಇಷ್ಟೊಂದು ಸಲ ಡೆಸ್ಕ್ ತೆಗೆದು ಮುಚ್ಚುತ್ತಾಳೆಂದು ಅಮ್ಮನಿಗೆಲ್ಲಾ ಅರ್ಥವಾಯಿತು. ಮೊದಲನೇ ದಿನ ಶಾಲೆಗೆ ಹೋಗಿ ಬಂದಾಗ ಅವಳೆಷ್ಟು ಉತ್ಸುಕಳಾಗಿದ್ದಳೆಂಬುದು ಅಮ್ಮನ ನೆನಪಿಗೆ ಬಂತು. "ಅಮ್ಮ ಶಾಲೆ ಬಹಳ ಚಂದ ಇದೆ, ನಮ್ಮನೇಲಿರೋ ಡೆಸ್ಕಿಗೆ ಎಳೆಯಲು ಬರೀ ಡ್ರಾಯರುಗಳಿವೆ. ಆದರೆ ಶಾಲೆಯಲ್ಲಿರೋ ಡೆಸ್ಕಿಗೆ ಮೇಲಿಂದ ಎತ್ತೋ ಮುಚ್ಚಳ ಇದೆ. ಅದು ಪೆಟ್ಟಿಗೆ ಥರಾ ಇದೆ. ಅದರೊಳಗೆ ಏನೆಲ್ಲಾ ಇಡಬಹುದು ಗೊತ್ತಾ, ತುಂಬಾ ಚೆನ್ನಾಗಿದೆ" ಎಂದಿದ್ದಳು.

ತೊತ್ತೊ-ಚಾನ್ ಡೆಸ್ಕನ್ನು ಆಸೆಯಿಂದ ತೆಗೆದು ಮುಚ್ಚುವುದನ್ನು, ಅದರಿಂದ ಅವಳಿಗೆ ಸಿಗುವ ಆನಂದವನ್ನು ಅಮ್ಮ ಕಲ್ಪಿಸಿಕೊಂಡಳು. ಅದೇನೂ ಅಂತಹ ತುಂಟತನವೆಂದು ಅವಳಿಗೆ ಅನ್ನಿಸಲಿಲ್ಲ. ಕೆಲ ದಿನಗಳ ಮೇಲೆ ಡೆಸ್ಕ್ ಹಳೆಯದೆನಿಸಿದಾಗ ತಾನಾಗೇ ತೊತ್ತೊ-ಚಾನ್ ಕ್ರಮೇಣ ಹೀಗೆ ಮಾಡುವುದನ್ನು ನಿಲ್ಲಿಸಬಹುದು. ಆದರೆ ಇದನ್ನೆಲ್ಲಾ ಅಧ್ಯಾಪಕಿಗೆ ಅವಳು ಹೇಳಲಿಲ್ಲ. "ನಾನು ಅವಳಿಗೆ ತಿಳಿಸಿ ಹೇಳ್ತೇನೆ" ಎಂದಷ್ಟೇ ಹೇಳಿದಳು.

ಆಗ ಅಧ್ಯಾಪಕಿ ಕಟುವಾದ ಸ್ವರದಲ್ಲಿ "ಇಷ್ಟೇ ಆಗಿದ್ದರೆ ಪರವಾಗಿಲ್ಲ ಅನ್ನಬಹುದಾಗಿತ್ತೇನೋ" ಎಂದು ಮುಂದುವರಿಸಿದಳು.

"ಇನ್ನೇನು ಮಾಡ್ತಾಳೆ ?"

"ಡೆಸ್ಕ್ ತೆಗೆದು ಮುಚ್ಚೋದು ಇರದೇ ಹೋದರೆ ಎದ್ದು ನಿಂತೇ ಇರುತ್ತಾಳೆ."

"ಎಲ್ಲಿ ನಿಂತುಕೊಳ್ಳುತ್ತಾಳೆ ?" ಅಮ್ಮ ಆಶ್ಚರ್ಯದಿಂದ ಕೇಳಿದಳು. "ಕಿಟಕಿ ಹತ್ತಿರ" ಅಧ್ಯಾಪಕಿ ಅಸಹನೆಯಿಂದ ಹೇಳಿದಳು.

"ಯಾಕೆ ಕಿಟಕಿ ಹತ್ತಿರ ನಿಂತುಕೊಳ್ತಾಳೆ ?" ಅಮ್ಮ ಚಕಿತಳಾಗಿ ಕೇಳಿದಳು.

"ಬೀದಿ ಸಂಗೀತಗಾರರನ್ನು ಕರೀಲಿಕ್ಕೆ." ಅಧ್ಯಾಪಕಿಯ ಧ್ವನಿ ಮತ್ತಷ್ಟು ತೀಕ್ಷ್ಣವಾಗಿತ್ತು.

ಅಧ್ಯಾಪಕಿ ಹೇಳಿದ ಕತೆಯ ಸಾರಾಂಶವೇನೆಂದರೆ, ಒಂದು ಗಂಟೆಯ ಕಾಲದಷ್ಟು ಡೆಸ್ಕನ್ನು ದಡಾರ್-ಬಡಾರ್ ಎಂದು ತೆಗೆದು–ಮುಚ್ಚುವುದು ನಡೆದ ಮೇಲೆ ತೊತ್ತೊ-ಚಾನ್ ಕಿಟಕಿ ಹತ್ತಿರ ಹೋಗಿ ಹೊರಗೆ ನೋಡುತ್ತಾ ನಿಂತುಕೊಳ್ಳುತ್ತಾಳೆ. ಅಲ್ಲಾದರೂ ತೆಪ್ಪಗೆ ನಿಂತುಕೊಳ್ಳಲಿ ಎಂದು ಅಧ್ಯಾಪಕಿ ಸುಮ್ಮನಿದ್ದರೆ ರಸ್ತೆಯಲ್ಲಿ ಹೋಗುವ ಥಾಳಾಗಿ ದಿರುಸು ಹಾಕಿಕೊಂಡ ಹಾದಿ ಸಂಗೀತಗಾರರನ್ನು ಕರೆಯುತ್ತಾಳೆ. ಇವಳ ತರಗತಿ ಮೇಲಿನ ಅಂತಸ್ತಿನಲ್ಲಿಲ್ಲದಿದ್ದುದರಿಂದ ಕಿಟಕಿಯ ಬಳಿ ನಿಂತು ರಸ್ತೆಯಲ್ಲಿ ಹೋಗುವವರ ಸಂಗಡ ಸುಲಭವಾಗಿ ಮಾತನಾಡಲು ಸಾಧ್ಯವಾಗುತ್ತದೆ. ಹೀಗಾಗಿ ಅವರು ರಸ್ತೆಯಲ್ಲಿ ಹೋಗುತ್ತಿದ್ದರೆ ತೊತ್ತೊ-ಚಾನ್ ಎಲ್ಲ ಮಕ್ಕಳನ್ನೂ ಕರೆದು ಕೂಗಿ ಹೇಳುತ್ತಾಳೆ "ಓ ಅವರು ಇಲ್ಲೇ ಹೋಗ್ತಾ ಇದ್ದಾರೆ." ಎಲ್ಲಾ ಮಕ್ಕಳು ಕಿಟಕಿಯ ಹತ್ತಿರ ದಂಡು ಕಟ್ಟಿಕೊಂಡು ಬಂದು ನಿಂತು ಅವರನ್ನು ಕೂಗಿ ಕರೆಯುತ್ತಾರೆ. "ಏನಾದರೂ ಬಾರಿಸಿ" ಎಂದು ತೊತ್ತೊ-ಚಾನ್ ಅವರಿಗೆ

ಹೇಳುತ್ತಾಳೆ. ಅವರು ಬಾರಿಸಲು ತೊಡಗಿದಂತೆ ಮಕ್ಕಳೆಲ್ಲಾ ಕೇಕೆ ಹಾಕಿ ಕುಣಿಯಲು ಪ್ರಾರಂಭಿಸುತ್ತಾರೆ. ಏನೂ ಮಾಡಲು ತೋಚದ ಅಧ್ಯಾಪಕಿ ಎಲ್ಲಾ ಮುಗಿಯುವವರೆಗೂ ತೆಪ್ಪಗೆ ಕುಳಿತುಕೊಳ್ಳಬೇಕಾಗುತ್ತದೆ.

ಕೊನೆಗೂ ಸಂಗೀತ ಮುಗಿದು ಮಕ್ಕಳೆಲ್ಲಾ ತಮ್ಮ ಜಾಗಗಳಿಗೆ ಹೋಗಿ ಕುಳಿತುಕೊಳ್ಳುತ್ತಾರೆ. ಆದರೆ ತೊತ್ತೊ-ಚಾನ್ ಮಾತ್ರ ಅಲ್ಲೇ ನಿಂತಿರುತ್ತಾಳೆ. "ಇನ್ನೂ ಯಾಕೆ ಅಲ್ಲೇ ನಿಂತಿದ್ದೀಯಾ ?" ಎಂದು ಅಧ್ಯಾಪಕಿ ಕೇಳಿದರೆ ಅವಳು ಗಂಭೀರವಾಗಿ "ಇನ್ನೊಂದು ಬ್ಯಾಂಡ್ ಸೆಟ್ ಬರಬಹುದು. ಅವರು ಹೋದದ್ದನ್ನು ಯಾರೂ ನೋಡದೇ ಹೋದರೆ ಎಂಥ ಅನ್ಯಾಯ ?" ಎನ್ನುತ್ತಾಳೆ.

"ಇದರಿಂದ ಎಷ್ಟು ತೊಂದರೆಯಾಗುತ್ತೆ ಅಂತ ನಿಮಗೆ ಗೊತ್ತಾಗುತ್ತೆ, ಅಲ್ವ ?" ಅಧ್ಯಾಪಕಿ ಭಾವುಕರಾಗಿ ಹೇಳಿದಳು. ತಾಯಿ ಏನೋ ಹೇಳಬೇಕೆನ್ನುವಷ್ಟರಲ್ಲೇ ಆಕೆ ದನಿ ಏರಿಸಿ ಮುಂದುವರಿಸಿದಳು.

"ಆಮೇಲೆ"

"ಆಮೇಲೇನು ಮಾಡ್ತಾಳೆ ?" ಈಗ ತಾಯಿಯ ದನಿ ಕುಗ್ಗತೊಡಗಿತ್ತು.

"ಏನು ಮಾಡ್ತಾಳಾ ?" ಆಕೆ ಉದ್ಗರಿಸಿದಳು "ಅವಳು ಮಾಡೋದನ್ನು ಲೆಕ್ಕ ಇಡೋದಕ್ಕೆ ಸಾಧ್ಯವಾಗಿದ್ದಿದ್ದರೆ, ಬಹುಶಃ ಅವಳನ್ನು ಕರೆದುಕೊಂಡು ಹೋಗಿ ಎಂದು ನಾನು ಹೇಳುತ್ತಿರಲಿಲ್ಲವೇನೋ ?"

ಅಧ್ಯಾಪಕಿ ಈಗ ಸಟೆದು ನಿಂತು ತಾಯಿಯನ್ನು ದಿಟ್ಟಿಸಿ ನೋಡತೊಡಗಿದಳು. "ನಿನ್ನೆ ಮಾಮೂಲಿನಂತೆ ತೊತ್ತೊ-ಚಾನ್ ಕಿಟಕಿ ಹತ್ತಿರ ನಿಂತಿದ್ದಳು. ಬೀದಿ ಸಂಗೀತಗಾರರಿಗೆ ಕಾಯುತ್ತಿದ್ದಾಳೆಂದುಕೊಂಡು ನಾನು ನನ್ನ ಪಾಡಿಗೆ ಪಾಠ ಮಾಡುತ್ತಿದ್ದೆ. ಇದ್ದಕ್ಕಿದ್ದಂತೆ ಅವಳು ಯಾರನ್ನೋ 'ಏನು ಮಾಡ್ತಾ ಇದೀಯಾ ?' ಎಂದು ಕೇಳಿದಳು. ನನಗೆ ಯಾರೂ ಕಾಣಿಸಲಿಲ್ಲ. ರಸ್ತೆಯಲ್ಲಿಯೂ ಯಾರೂ ಹೋಗುತ್ತಿರಲಿಲ್ಲ. ಮತ್ತೆ ಅವಳು 'ಏನು ಮಾಡ್ತಾ ಇದೀಯಾ ?' ಎಂದು ಕೇಳಿದಾಗ ಅವಳ ದೃಷ್ಟಿಯನ್ನೇ ಅನುಸರಿಸಿ ನೋಡಿದರೆ ಅವಳು ತಲೆ ಎತ್ತಿ ಮೇಲೆ ಯಾರ ಹತ್ತಿರವೋ ಮಾತನಾಡುತ್ತಿದ್ದಳು. ನಾನು ಕುತೂಹಲ ತಾಳಲಾರದೆ ಉತ್ತರವನ್ನು ಕೇಳಲು ಪ್ರಯತ್ನಿಸಿದೆ. ಆದರೆ ಯಾರೂ ಮರುತ್ತರಿಸಲಿಲ್ಲ. ಆದರೆ ನಿಮ್ಮ ಮಗಳು ಮಾತ್ರ 'ಏನು ಮಾಡ್ತಾ ಇದೀಯಾ ?' ಎಂದು ಗಳಿಗೆ ಗಳಿಗೆಗೂ ಕೇಳುತ್ತಲೇ ಇದ್ದಳು. ನನಗೆ ಪಾಠ ಮಾಡಲು ಸಾಧ್ಯವಾಗದೆ ಅವಳು ಯಾರ ಬಳಿ ಮಾತನಾಡುತ್ತಿದ್ದಾಳೆ ನೋಡೋಣವೆಂದು ಕಿಟಕಿ ಹತ್ತಿರ ಹೋದೆ. ನಾನು ಕಿಟಕಿಯ ಹೊರಗೆ ತಲೆಹಾಕಿ ಮೇಲೆ ನೋಡಿದಾಗ ಚಾವಣಿಯಲ್ಲಿ ಎರಡು ಗುಬ್ಬಚ್ಚಿಗಳು ಗೂಡು ಕಟ್ಟುತ್ತಿರುವುದು ಕಾಣಿಸಿತು. ಅವಳು ಗುಬ್ಬಚ್ಚಿ ಹತ್ತಿರ ಮಾತನಾಡುತ್ತಿದ್ದಳು. ನನಗೂ ಅರ್ಥ ಆಗುತ್ತೆ ಬಿಡಿ, ಗುಬ್ಬಚ್ಚಿಗಳ ಹತ್ತಿರ ಮಕ್ಕಳು ಮಾತನಾಡುವುದೇನೂ ತೀರ ಅಸಹಜವಲ್ಲ. ಆದರೆ ತರಗತಿ ಮಧ್ಯದಲ್ಲಿ ಹೀಗೆ ಗುಬ್ಬಚ್ಚಿಗಳ ಜತೆ ಮಾತನಾಡುತ್ತಾ ನಿಂತರೆ ಹೇಗೆ ?" ಅಮ್ಮ ಶರಣಾಗತಿಯ ದನಿ ಎತ್ತುತ್ತಿರುವಂತೆಯೇ ಆಕೆ ಮುಂದುವರೆಸಿದರು. "ಇನ್ನೊಂದು, ಚಿತ್ರ ಬರೆಯುವ

ತರಗತಿಯ ಕತೆ ಕೇಳಿ. ಒಂದು ದಿನ ನಾನು ಜಪಾನಿನ ಬಾವುಟ ಬರೆಯುವಂತೆ ಮಕ್ಕಳಿಗೆ ಕೇಳಿದೆ. ಎಲ್ಲ ಮಕ್ಕಳೂ ಸರಿಯಾಗಿ ಬರೆದು ತೋರಿಸಿದರೆ, ಈ ನಿಮ್ಮ ಮಗಳಿದಾಳಲ್ಲ, ಅವಳು ಪಟ್ಟ-ಪಟ್ಟಿಯ ನೌಕಾಸೇನೆಯ ಬಾವುಟವನ್ನು ಬರೆಯುತ್ತಿದ್ದಾಳೆ. ಹೋಗಲಿ ಬಿಡು ಎಂದು ಸುಮ್ಮನಿದ್ದರೆ ಅವಳು ಅದರ ಸುತ್ತಾ ಚಿತ್ರವಿಚಿತ್ರ ಅಂಚನ್ನು ಬರೆಯಲು ಪ್ರಾರಂಭಿಸಿದಳು. ಎಂಥ ಅಂಚು ಗೊತ್ತಾ? ಆ ಯುವ ಮಂಡಳಿಯವರ ಬ್ಯಾನರ್‌ಗಳಲ್ಲಿರುತ್ತದಲ್ಲ ಅಂತಾ ಅಂಚು! ಇಂಥ ಬಾವುಟ ಎಲ್ಲೋ ನೋಡಿರಬಹುದು ಎಂದು ಸುಮ್ಮನಾದೆ. ಆದರೂ ಬರೆಯುತ್ತಲೇ ಹೋದ ಹಳದಿ ಬಣ್ಣದ ಅಂಚು ಅವಳ ಪೇಪರನ್ನು ದಾಟಿಕೊಂಡು ಡೆಸ್ಕಿನ ಮೇಲೂ ಮುಂದುವರಿಯಿತು. ಅವಳು ತನ್ನ ಕ್ರಯಾನ್ ಚಾಕ್‌ನಿಂದ ಒಂದೇ ಸಮನೆ ಗೀಚುತ್ತಲೇ ಇದ್ದಳು. ಡೆಸ್ಕಿನ ಮೇಲೆ ಕೊನೆಗೆ ಅವಳು ಪೇಪರನ್ನು ಎತ್ತಿದಾಗ ಡೆಸ್ಕಿನ ಮೇಲೆ ಹಳದಿ ಕ್ರಯಾನ್ ಚಾಕ್ ಮುದ್ದೆ ಮುದ್ದೆಯಾಗಿ ಗಟ್ಟಿಯಾಗಿ ಅಂಟಿಕೊಂಡಿತ್ತು. ಎಷ್ಟು ಒರೆಸಿ ತೆಗೆದರೂ ಅದು ಹಾಗೇ ಅಂಟಿಕೊಂಡು ಕೂತಿದೆ. ಅದೃಷ್ಟವಶಾತ್ ಗೆರೆಗಳು ಮೂರು ಕಡೆ ಮಾತ್ರ ಇದ್ದವು."

ಅಮ್ಮನಿಗೆ ಏನೊಂದೂ ಅರ್ಥವಾಗದೆ "ಬರೀ ಮೂರು ಕಡೆ ಹೇಗೆ?" ತಕ್ಷಣ ಕೇಳಿದಳು. ತನಗೆ ಸುಸ್ತಾಗುತ್ತಿದ್ದರೂ ಅಧ್ಯಾಪಕಿ ಉತ್ತರಿಸುವ ಕೃಪೆ ತೋರಿದಳು. "ಒಂದು ಕಡೆ ಅವಳು ಬಾವುಟದ ದಂಡವನ್ನು ಬರೆದಿದ್ದರಿಂದ ಬರೀ ಮೂರು ಕಡೆ ಮಾತ್ರ ಅಂಚು ಬಂದಿತ್ತು."

"ಓಹೋ ಹಾಗೆ, ಬರೀ ಮೂರು ಕಡೆ" ಅಮ್ಮನಿಗೆ ಅರ್ಥವಾಯಿತು.

"ಆದರೆ ಬಾವುಟದ ದಂಡವೂ ಪೇಪರನ್ನು ದಾಟಿ ಹೋಗಿಬಿಟ್ಟಿತ್ತು. ಈಗಲೂ ಹಾಗೇ ಡೆಸ್ಕಿನ ಮೇಲೆ ಇದೆ. ಬನ್ನಿ ಬೇಕಾದರೆ ನೀವೂ ನೋಡಿ" ಅಧ್ಯಾಪಕಿ ಹೇಳಿದಳು.

ಕೊನೆಯದೆಂಬಂತೆ ಅಧ್ಯಾಪಕಿ ಈಗ ಹೇಳಿದಳು "ನಾನೊಬ್ಬಳೇ ಹೀಗೆ ಹೇಳುತ್ತೇನೆ ಎಂದು ತಿಳೀಬೇಡಿ. ಪಕ್ಕದ ತರಗತಿಯ ಅಧ್ಯಾಪಕಿಯನ್ನು ಬೇಕಾದರೆ ಕೇಳಿ ನೋಡಿ."

ತಾಯಿಯು ಏನಾದರೂ ಮಾಡಲೇಬೇಕಾಗಿತ್ತು. ತೊತ್ತೊ-ಚಾನ್ ಇಡೀ ತರಗತಿಗೇ ತೊಂದರೆ ಕೊಡುತ್ತಿದ್ದಳು. ಅವಳನ್ನು ಬೇರೆ ಶಾಲೆಗೆ ಸೇರಿಸಬೇಕು. ಈ ಪುಟ್ಟಿಯನ್ನು ಅರ್ಥಮಾಡಿಕೊಂಡು ಅವಳಿಗೆ ಇತರರೊಡನೆ ಹೊಂದಿಕೊಂಡು ಹೋಗುವುದನ್ನು ಕಲಿಸುವಂಥ ಶಾಲೆ ಬೇಕಾಗಿತ್ತು.

ಈಗ ಅವರು ಹೋಗುತ್ತಿರುವ ಶಾಲೆ ತಾಯಿಯು ತುಂಬಾ ಕಷ್ಟಪಟ್ಟು ಹುಡುಕಿದ ಶಾಲೆ.

ತೊತ್ತೊ-ಚಾನ್‌ಳನ್ನು ಶಾಲೆಯಿಂದ ಹೊರಹಾಕಿದ್ದನ್ನು ಅಮ್ಮ ಅವಳಿಗೆ ಹೇಳಲಿಲ್ಲ. ತಾನೇನು ತಪ್ಪು ಮಾಡಿದೆನೆಂಬುದು ತೊತ್ತೊ-ಚಾನ್‌ಗೆ ಅರ್ಥವಾಗುವುದಿಲ್ಲ. ಅವಳು ಸುಮ್ಮಸುಮ್ಮನೆ ತನ್ನ ಬಗ್ಗೆ ಏನೇನೋ ಭಾವನೆಗಳನ್ನು ಬೆಳೆಸಿಕೊಂಡುಬಿಡಬಹುದು. ಹೀಗಾಗಿ ಅವಳು ದೊಡ್ಡವಳಾಗುವವರೆಗೂ ಅವಳಿಗೆ

ಇದನ್ನು ಹೇಳದಿರಲು ಅಮ್ಮ ನಿಶ್ಚಯಿಸಿದ್ದಳು. ಅಮ್ಮ ಅವಳನ್ನು ಕೇಳಿದ್ದು ಇಷ್ಟೆ: "ನಿನಗೆ ಹೊಸ ಶಾಲೆ ಸೇರಿಕೊಳ್ಳಲು ಇಷ್ಟಾನಾ? ಹೊಸ ಶಾಲೆ ತುಂಬಾ ಚೆನ್ನಾಗಿದೆಯಂತೆ."



"ಸರಿ" ಎಂದಳು ತೊತ್ತೊ-ಚಾನ್, ಯೋಚಿಸುತ್ತಾ.

"ಆದರೆ"

"ಆದರೆ ಏನು?" ಅಮ್ಮನಿಗೆ ಅನುಮಾನವಾಯಿತು. "ಶಾಲೆಯಿಂದ ಹೊರಹಾಕಿದ್ದು ಇವಳಿಗೇನಾದರೂ ತಿಳಿಯಿತಾ?"

"ಹೊಸ ಶಾಲೆ ಹತ್ರನೂ ಬೀದಿ ಸಂಗೀತಗಾರರು ಬರುತ್ತಾರೇನಮ್ಮ?" ತೊತ್ತೊ-ಚಾನ್ ಉಲ್ಲಸಿತಳಾಗೇ ಕೇಳಿದಳು.

## ಹೊಸ ಶಾಲೆ

ಹೊಸ ಶಾಲೆಯ ಪ್ರವೇಶ ದ್ವಾರವನ್ನು ತಲುಪಿದಾಗ ತೊತ್ತೊ-ಚಾನ್

ನಿಂತುಬಿಟ್ಟಳು. ಅವಳು ಹಿಂದೆ ಹೋಗುತ್ತಿದ್ದ ಶಾಲೆಯ ಗೇಟಿನ ಎರಡು ಪಕ್ಕಗಳಲ್ಲಿ ದೊಡ್ಡ ಸಿಮೆಂಟಿನ ಕಂಬಗಳಿದ್ದವು. ಅವುಗಳಿಗೆ ಅಂಟಿಕೊಂಡು ದಪ್ಪಕ್ಷರಗಳಲ್ಲಿ ಶಾಲೆಯ ಹೆಸರು ಇದ್ದ ಬೋರ್ಡನ್ನು ತೂಗುಹಾಕಲಾಗಿತ್ತು. ಆದರೆ ಈ ಶಾಲೆಯ ಗೇಟಿನ ಇಕ್ಕೆಲಗಳಲ್ಲಿ ಇನ್ನೂ ಸಣ್ಣ ರೆಂಬೆಗಳನ್ನು, ಎಲೆಗಳನ್ನು ಹೊಂದಿದ್ದ ಕುಳ್ಳಗಿದ್ದ ಎರಡು ಮರದ ತುಂಡುಗಳನ್ನು ನೆಡಲಾಗಿತ್ತು.

"ಈ ಗೇಟು ಬೆಳೀತಾ ಇದೆ" ತೊತ್ತೊ-ಚಾನ್ ಅಂದಳು "ಇದು ಬಹುಶಃ ಬೆಳೆಯುತ್ತಲೇ ಹೋಗುತ್ತೇನೋ !"

ನಿಜವಾಗಿಯೂ ಅವು ಮರದ ತುಂಡುಗಳಾಗಿರದೆ ಬೇರು ಬಿಟ್ಟ ಎರಡು ಸಣ್ಣ ಮರಗಳೇ ಆಗಿದ್ದವು. ಇನ್ನೂ ಹತ್ತಿರ ಹೋದಾಗ ತೊತ್ತೊ-ಚಾನ್ ತಲೆಯೆತ್ತಿ ಅಲ್ಲೇ ಪಕ್ಕಕ್ಕೆ ಹಾಕಿದ್ದ ಬೋರ್ಡನ್ನು ಕಷ್ಟಪಟ್ಟು ಓದಿದಳು.

"ತೊ..ಮೊ...ಯೆ..... ಗಾ.... ಕು.... ಯೆನ್."

ತೊಮೊಯೆ ಎಂದರೆ ಏನೆಂದು ಅಮ್ಮನನ್ನು ಕೇಳಬೇಕು ಎಂದು ಅವಳು ಅಂದುಕೊಳ್ಳುತ್ತಿರುವಾಗಲೇ 'ಇದೇನು ಕನಸಾ' ಎನ್ನುವಂತಹದ್ದೇನೋ ಅವಳ ಗಮನ ಸೆಳೆಯಿತು. ಮತ್ತೆ-ಮತ್ತೆ ಮರಗಿಡಗಳ ನಡುವೆ ಇಣುಕಿ ಇಣುಕಿ ದೃಢಪಡಿಸಿಕೊಂಡಳು. ತನ್ನ ಕಣ್ಣನ್ನೇ ನಂಬದಾದಳು.

"ಅಮ್ಮ ನಿಜವಾಗಲೂ ಅದು ರೈಲು ಗಾಡೀನೇನಾ ? ಅಗೋ, ಅಲ್ಲಿ ಶಾಲೆಯ ಮೈದಾನದಲ್ಲಿ !" ಹೌದು, ಹೊಸ ಶಾಲೆಯಲ್ಲಿ ತರಗತಿಗಳಿಗೆ ಹಳೆಯ ರೈಲುಬಂಡಿಗಳನ್ನು ಬಳಸಿಕೊಳ್ಳಲಾಗಿತ್ತು. ರೈಲು ಬಂಡಿಯಲ್ಲಿ ಶಾಲೆ ! ತೊತ್ತೊ-ಚಾನ್‌ಗೆ ಇದು ಕನಸಿನಂತೆ ಕಂಡಿತು.

ಬೆಳಗಿನ ಸೂರ್ಯನ ಹೊಂಗಿರಣಗಳಿಗೆ ರೈಲುಬಂಡಿಯ ಕಿಟಕಿಗಳು ಫಳಗುಡುತ್ತಿದ್ದವು. ಎವೆಯಿಕ್ಕದೆ ಅದನ್ನೇ ನೋಡುತ್ತಿದ್ದ ಈ ಪುಟ್ಟಿಯ ಕೆನ್ನೆಗಳು ಎರಡು ಪಟ್ಟು ಮಿನುಗಿದವು.

## "ಈ ಶಾಲೆ ನನಗೆ ಇಷ್ಟವಾಯಿತು !"

ಕ್ಷಣ ಮಾತ್ರದಲ್ಲಿ ತೊತ್ತೊ-ಚಾನ್ ಕೇಕೆ ಹಾಕುತ್ತಾ ರೈಲುಬಂಡಿ ಶಾಲೆಯ ಕಡೆ ಓಡಿದಳು. ಹಿಂದೆಯೇ ಉಳಿದ ಅಮ್ಮನನ್ನು ಕೂಗಿ ಕರೆದಳು "ಅಮ್ಮ ಬೇಗ ಬಾ, ರೈಲುಬಂಡಿ ನಿಂತಿದೆ. ನಾವು ಅದರಲ್ಲಿ ಕುಳಿತುಕೊಳ್ಳೋಣ."

ಅಮ್ಮ ಅವಳ ಹಿಂದೆಯೇ ಓಡಿದಳು. ಹಿಂದೊಮ್ಮೆ ಬಾಸ್ಕೆಟ್‌ಬಾಲ್ ತಂಡದಲ್ಲಿದ್ದ ಆಕೆ ವೇಗವಾಗಿ ತೊತ್ತೊ-ಚಾನ್ ರೈಲುಬಂಡಿಯೊಂದನ್ನು ಹತ್ತುವ ಮೊದಲೇ ಅವಳನ್ನು ಹಿಡಿದು ಹಿಂದಕ್ಕೆ ಎಳೆದುಕೊಂಡಳು. "ನೀನಿನ್ನೂ ಒಳಕ್ಕೆ ಹೋಗೋ ಹಾಗಿಲ್ಲ" ಅವಳನ್ನು ಹಿಂದಕ್ಕೆಳೆದುಕೊಳ್ಳುತ್ತಾ ಅಮ್ಮ ಹೇಳಿದಳು. "ಇದು ರೈಲುಬಂಡಿ ಶಾಲೆ. ಆದರೆ ನಿನ್ನನ್ನು ಇನ್ನೂ ಇಲ್ಲಿ ಸೇರಿಸಿಕೊಂಡಿಲ್ಲ. ನಿನಗೆ ನಿಜವಾಗಿಯೂ ರೈಲು ಬಂಡಿಯಲ್ಲಿ ಕುಳಿತುಕೊಳ್ಳುವ ಆಸೆ ಇದ್ದರೆ ನೀನು

ಹೆಡ್‌ಮಾಸ್ತರ ಹತ್ತಿರ ಚೆನ್ನಾಗಿ ನಡೆದುಕೊಳ್ಳಬೇಕು. ನಾವೀಗ ಅವರನ್ನು ನೋಡಲು ಹೋಗುತ್ತಿದ್ದೇವೆ. ಎಲ್ಲಾ ಸರಿಯಾಗಿ ನಡೆದರೆ, ನೀನು ಈ ಶಾಲೆಗೆ ಸೇರ್ಕೊಬಹುದು. ಅರ್ಥ ಆಯಿತಾ ?"

ತೊತ್ತೊ-ಚಾನ್‌ಗೆ ಭಯಂಕರ ನಿರಾಸೆಯಾಯಿತು. "ಈಗಲೇ ರೈಲು ಬಂಡಿಯಲ್ಲಿ ಹೋಗುವಂತಿಲ್ಲ, ಛೇ." ಆದರೂ ಅಮ್ಮ ಹೇಳಿದಂತೆಯೇ ನಡೆದುಕೊಳ್ಳಲು ತೀರ್ಮಾನಿಸಿದಳು.

"ಸರಿ" ಎಂದಳು. "ಈ ಶಾಲೆ ನನಗೆ ತುಂಬಾ ಇಷ್ಟವಾಯಿತು !" ಎಂದು ಮತ್ತೆ ಸೇರಿಸಿದಳು. ತೊತ್ತೊ-ಚಾನ್‌ಗೆ ಈ ಶಾಲೆಯು ಇಷ್ಟವಾಯಿತು ಅನ್ನುವುದಕ್ಕಿಂತ ಮುಖ್ಯೋಪಾಧ್ಯಾಯರಿಗೆ ಇವಳು ಇಷ್ಟವಾಗುತ್ತಾಳಾ ಎಂಬುದೇ ಮುಖ್ಯ ಎಂದು ಅವಳಮ್ಮನಿಗೆ ಹೇಳಬೇಕೆನಿಸಿತು. ಆದರೂ ಸುಮ್ಮನೆ ಅವಳ ಕೈಹಿಡಿದುಕೊಂಡು ಮುಖ್ಯೋಪಾಧ್ಯಾಯರ ಕಛೇರಿಯತ್ತ ನಡೆದಳು. ಶಾಲೆಯಲ್ಲಿ ತರಗತಿಗಳು ಪ್ರಾರಂಭವಾಗಿದ್ದರಿಂದ ಎಲ್ಲ ರೈಲುಬಂಡಿಗಳೂ ನಿಶ್ಶಬ್ದವಾಗಿದ್ದವು. ಈ ಸಣ್ಣ ಶಾಲೆಗೆ ಗೋಡೆಯ ಬದಲಿಗೆ ನಾಲ್ಕೂ ಕಡೆ ಗಿಡಮರಗಳಿದ್ದವು. ಮಧ್ಯ-ಮಧ್ಯೆ ಹೂ-ಗಿಡಗಳೂ, ಹೂ-ಬಳ್ಳಿ, ಕೆಂಪು-ಹಳದಿ ಬಣ್ಣದ ಹೂಗಳು ಯಥೇಚ್ಛವಾಗಿ ಬಿಟ್ಟಿದ್ದವು.

ಮುಖ್ಯೋಪಾಧ್ಯಾಯರ ಕಛೇರಿ ರೈಲು ಬಂಡಿಯಾಗಿರಲಿಲ್ಲ. ಗೇಟಿನ ಎದುರು ಸಾಲಿನಲ್ಲಿ ಏಳು ಮೆಟ್ಟಲುಗಳಿದ್ದ ಒಂದು ಸಣ್ಣ ಕಟ್ಟಡವಾಗಿತ್ತು.

ತೊತ್ತೊ-ಚಾನ್ ಅಮ್ಮನ ಕೈಬಿಡಿಸಿಕೊಂಡು ಓಡಿ ಮೆಟ್ಟಲುಗಳನ್ನು ಹತ್ತಿದಳು. ಮತ್ತೆ ಹಾಗೆಯೇ ಮಿಕಿ-ಮಿಕಿ ನೋಡುತ್ತಾ ನಿಂತುಬಿಟ್ಟಳು.

"ಏನಾಯ್ತು ?" ಅಮ್ಮ ಕೇಳಿದಳು. ತೊತ್ತೊ-ಚಾನ್ ಶಾಲೆಯ ಬಗ್ಗೆ ಮನಸ್ಸು ಬದಲಾಯಿಸಿದಳೇನೋ ಎಂದವಳಿಗೆ ಭಯವಾಯಿತು.

ತುದಿಯ ಮೆಟ್ಟಲು ಮೇಲೆ ನಿಂತು ತೊತ್ತೊ-ಚಾನ್ ಗಂಭೀರ ದನಿಯಲ್ಲಿ ಅಮ್ಮನನ್ನ ಕೇಳಿದಳು "ನಾವೀಗ ನೋಡಲು ಹೋಗುತ್ತಾ ಇರೋದು ಸ್ಟೇಷನ್ ಮಾಸ್ತರನ್ನೇ ಇರಬೇಕು."

ಅಮ್ಮನಿಗೆ ಅಪಾರ ತಾಳ್ಮೆಯ ಜೊತೆ ಸ್ವಲ್ಪ ಗೇಲಿ ಮಾಡುವ ಗುಣವೂ ಇತ್ತು. ತೊತ್ತೊ-ಚಾನ್ ಹತ್ತಿರಕ್ಕೆ ಬಾಗಿ ಪಿಸುದನಿಯಲ್ಲಿ ಕೇಳಿದಳು "ಯಾಕೆ ?"

"ನೀನೇನೋ ಅವರನ್ನು ಹೆಡ್‌ಮಾಸ್ತರು ಎಂದೆ. ಆದರೆ ಇಷ್ಟೆಲ್ಲಾ ರೈಲುಬಂಡಿಗಳನ್ನು ಇಟ್ಟುಕೊಂಡಿರಬೇಕಾದರೆ ಅವರು ಸ್ಟೇಷನ್ ಮಾಸ್ತರೇ ಇರಬೇಕು."

ಹೌದು ಶಾಲೆಯೊಂದಕ್ಕೆ ಹಳೇ ರೈಲುಬಂಡಿಗಳನ್ನು ಬಳಸಿಕೊಳ್ಳುವುದು ತೀರಾ ರೂಢಿಗತವಲ್ಲದ ವಿಚಾರವೇ. ಆದರೆ ವಿವರಣೆಗೀಗ ಸಮಯವಿರಲಿಲ್ಲ. ಸುಮ್ಮನೆ ನಕ್ಕು "ನಿಮ್ಮಪ್ಪ, ವಯೋಲಿನ್ ನುಡಿಸ್ತಾರೆ, ಅವರ ಹತ್ರ ಅನೇಕ ವಯೋಲಿನ್‌ಗಳಿವೆ, ಹಾಗಂತ ನಮ್ಮನೆ ಏನು ವಯೋಲಿನ್ ಅಂಗಡೀನಾ ?" ಎಂದಳು.

"ಅಲ್ಲ, ನಮ್ಮನೆ ವಯೋಲಿನ್ ಅಂಗಡಿ ಅಲ್ಲ" ಎಂದು ತೊತ್ತೊ-ಚಾನ್ ಅಮ್ಮನ ಕೈಹಿಡಿದುಕೊಂಡಳು.

## ಮುಖ್ಯೋಪಾಧ್ಯಾಯರು

ಅಮ್ಮ ಮತ್ತು ತೊತ್ತೊ-ಚಾನ್ ಒಳಹೋದಾಗ ಕುರ್ಚಿಯಲ್ಲಿ ಕುಳಿತಿದ್ದ ವ್ಯಕ್ತಿ ಎದ್ದು ನಿಂತರು.

ವಿರಳವಾದ ತಲೆಕೂದಲಿದ್ದ ಅವರಿಗೆ ಕೆಲವು ಹಲ್ಲುಗಳು ಬಿದ್ದು ಹೋಗಿದ್ದರೂ ಆರೋಗ್ಯವಂತ ಮುಖವಿತ್ತು. ಬಹಳ ಎತ್ತರವಿಲ್ಲದಿದ್ದರೂ ಅವರಿಗೆ ಬಲಿಷ್ಠ ಬಾಹುಗಳಿದ್ದವು. ಮಾಸಲಾಗಿದ್ದ ಕಪ್ಪು ಬಣ್ಣದ ಮೂರು ಪೀಸಿನ ಸೂಟನ್ನು ನೀಟಾಗಿ ತೊಟ್ಟಿದ್ದರು.

ಅವರನ್ನು ಕಂಡ ತಕ್ಷಣ ಬೇಗನೆ ವಂದಿಸಿ ಇಷ್ಟು ಹೊತ್ತೂ ತಡೆಹಿಡಿದವಳಂತೆ ತೊತ್ತೊ-ಚಾನ್ ಒಂದೇ ಉಸುರಿಗೆ ಪ್ರಶ್ನಿಸಿದಳು "ನೀವು ಸ್ಕೂಲ್ ಮಾಸ್ತರೋ ಸ್ಟೇಷನ್ ಮಾಸ್ತರೋ ?"

ಅಮ್ಮನಿಗೆ ತೀರಾ ಮುಜುಗರವಾಯಿತು. ಆದರೆ ತಕ್ಷಣ ಆತ ನಕ್ಕು ಹೇಳಿದರು "ನಾನು ಈ ಶಾಲೆಯ ಮುಖ್ಯ ಉಪಾಧ್ಯಾಯ."

ತೊತ್ತೊ-ಚಾನ್ ಖುಷಿಗೊಂಡಳು. "ನನಗೆ ತುಂಬಾ ಸಂತೋಷವಾಗಿದೆ. ಯಾಕಂದ್ರೆ ನಿಮ್ಮಿಂದ ನನಗೆ ಒಂದು ಉಪಕಾರ ಆಗ್ಬೇಕು. ನಿಮ್ಮ ಶಾಲೆಗೆ ಸೇರ್ಕೊಳ್ಳೋಕೆ ನನಗೆ ಇಷ್ಟ."

ಮುಖ್ಯೋಪಾಧ್ಯಾಯರು ತೊತ್ತೊ-ಚಾನ್‌ಗೊಂದು ಕುರ್ಚಿಯನ್ನು ಕೊಟ್ಟು, ಅಮ್ಮನತ್ತ ತಿರುಗಿ ಹೇಳಿದರು "ನೀವೀಗ ಹೋಗಬಹುದಮ್ಮ. ನಾನು ತೊತ್ತೊ-ಚಾನ್ ಹತ್ತಿರ ಮಾತನಾಡಬೇಕು."

ತೊತ್ತೊ-ಚಾನ್ ತಾಯಿಗೆ ಒಂದು ಕ್ಷಣ ಗಾಬರಿಯಾದರೂ, ಈ ವ್ಯಕ್ತಿಯ ಜತೆ ಬಿಡಲೇನೂ ಅಡ್ಡಿಯಿಲ್ಲ ಎಂದು ಸಮಾಧಾನಪಟ್ಟುಕೊಂಡಳು. "ಸರಿ, ನಾನಿವಳನ್ನು ಇಲ್ಲೇ ಬಿಟ್ಟು ಹೋಗುತ್ತೇನೆ." ಸ್ವಲ್ಪ ಧೈರ್ಯಗುಂದಿದ್ದರೂ ತೋರಿಸಿಕೊಳ್ಳದೆ, ಅಮ್ಮ ಬಾಗಿಲು ಮುಚ್ಚಿಕೊಂಡು ಹೊರನಡೆದಳು.

ಮುಖ್ಯೋಪಾಧ್ಯಾಯರು ಒಂದು ಕುರ್ಚಿಯನ್ನು ಎಳೆದುಕೊಂಡು ತೊತ್ತೊ-ಚಾನ್‌ಗೆ ಎದುರಾಗಿ ಕುಳಿತುಕೊಂಡರು. "ಸರಿ, ಈಗ ನೀನು ನಿನ್ನ ಬಗ್ಗೆ ನನಗೆ ಹೇಳು. ನಿನಗೆ ಏನೆಲ್ಲಾ ಹೇಳಬೇಕೆನಿಸುತ್ತೋ ಅದೆಲ್ಲಾ ಹೇಳು. ಏನೆಲ್ಲಾ ಅನಿಸುತ್ತೋ ಅದೆಲ್ಲಾ" ಈ ವ್ಯಕ್ತಿ ತನ್ನನ್ನು ಕೆಲವು ಪ್ರಶ್ನೆ ಕೇಳುತ್ತಾರೆ. ತಾನು ಉತ್ತರಿಸಬೇಕು ಎಂದುಕೊಂಡಿದ್ದಳು ತೊತ್ತೊ-ಚಾನ್. ಬೇಕಾದ್ದು ಮಾತಾಡು ಎಂದು ಆತನೆಂದಾಗ ಅವಳ ಸಂತೋಷಕ್ಕೆ ಎಣೆಯಿಲ್ಲದಾಗಿ ನೆಟ್ಟಗೆ ಪ್ರಾರಂಭಿಸಿದಳು. ಇದೆಲ್ಲಾ ಕಂತೆ-ಬೊಂತೆ ಪುರಾಣ ಎಂದುಕೊಳ್ಳುವರೇನೊ ಅನ್ನಿಸಿದರೂ ತನಗನ್ನಿಸಿದ್ದನ್ನು ನಿರರ್ಗಳವಾಗಿ ಹೇಳುತ್ತಾ ಹೋದಳು. ಇಂದು ತಾನು ಬಂದ ರೈಲು

ಎಷ್ಟು ವೇಗವಾಗಿ ಬಂತು; ತಾನು ಟಿಕೇಟ್ ಕಲೆಕ್ಟರನನ್ನು ಟಿಕೇಟು ಕೇಳಿದ್ದು; ಅವರು ಕೊಡದೇ ಹೋದದ್ದು; ತನ್ನ ಹಳೆಯ ಶಾಲೆಯ ಅಧ್ಯಾಪಕಿ ನೋಡಲು ಎಷ್ಟೊಂದು ಚೆನ್ನಾಗಿದ್ದಳೆಂಬುದು; ಗುಬ್ಬಚ್ಚಿಗಳು ಗೂಡು ಕಟ್ಟುತ್ತಿದ್ದದ್ದು; ತನ್ನ ಕಂದು ಬಣ್ಣದ ನಾಯಿ ರಾಕಿ ಮಾಡುವ ಕೀಟಲೆಗಳು; ಶಿಶುವಿಹಾರದಲ್ಲಿ ತಾನೂ ಕತ್ತರಿಯನ್ನು ಬಾಯೊಳಗೆ ಇಟ್ಟು ಆಟವಾಡುತ್ತಿದ್ದು ಮತ್ತು ನಾಲಿಗೆ ಕುಯ್ದುಹೋಗುತ್ತದೆಂದು ಉಪಾಧ್ಯಾಯರು ಹಾಗೆ ಮಾಡದಿರುವಂತೆ ಹೇಳಿದ್ದು, ಆದರೂ ತಾನು ಅದನ್ನು ಮಾಡುತ್ತಿದ್ದುದು; ಸಿಂಬಳ ಸುರಿಸಿಕೊಂಡಿರುವುದು ಅಮ್ಮನಿಗೆ ಸ್ವಲ್ಪವೂ ಇಷ್ಟವಿಲ್ಲದಿರುವುದರಿಂದ ತಾನು ಮೂಗನ್ನು ಹೇಗೆ ಪದೇಪದೇ ಸೀಟುತ್ತೇನೆನ್ನುವುದು; ತನ್ನ ತಂದೆ ಎಷ್ಟು ಚೆನ್ನಾಗಿ ಈಜಬಲ್ಲರು ಮತ್ತು ಮುಳುಗಬಲ್ಲರು ಎಂಬುದು; ಹೀಗೆ ಒಂದೇ ಎರಡೇ... ಹೆಡ್‌ಮಾಸ್ತರು ನಕ್ಕು ತಲೆಯಾಡಿಸಿ "ಆಮೇಲೆ" ಎನ್ನುವುದು, ಪುಳಕಗೊಂಡ ತೊತ್ತೊ-ಚಾನ್ ಮಾತನಾಡುತ್ತಾ ಹೋಗುವುದು ನಡೆಯಿತು. ಕೆಲ ಸಮಯದ ನಂತರ ಅವಳಿಗೆ ತಾನು ಎಲ್ಲಾ ಹೇಳಿ ಮುಗಿಸಿಬಿಟ್ಟೆ ಎನ್ನಿಸಿತು. ಇನ್ನೇನು ಹೇಳಬಹುದು ಎಂದು ಯೋಚಿಸುತ್ತಾ, ಬಾಯಿ ಮುಚ್ಚಿಕೊಂಡು ಕುಳಿತುಬಿಟ್ಟಳು.

"ಇನ್ನೂ ಏನಾದ್ರೂ ಹೇಳು" ಆತ ಕೇಳಿದರು.

ಹೀಗೆ ನಿಲ್ಲಿಸುವುದು ಎಷ್ಟು ಅವಮಾನ ಎನಿಸಿತು ತೊತ್ತೊ-ಚಾನ್‌ಗೆ. ಇದು ಎಂತಹ ಅದ್ಭುತ ಅವಕಾಶ! ತನ್ನಲ್ಲಿ ಇನ್ನೇನೂ ಹೇಳುವಂತಹುದು ಇಲ್ಲವೇ ಇಲ್ಲವೇನು ? ಕೊನೆಗೆ ಅವಳಿಗೆ ಹೊಳೆಯಿತು.

ತಾನು ಈಗ ಹಾಕಿಕೊಂಡಿರುವ ಉಡುಪಿನ ಬಗ್ಗೆ ಆತನಿಗೆ ಹೇಳಬಹುದೆನ್ನಿಸಿತು. ಅವಳ ಎಲ್ಲಾ ಉಡುಪುಗಳನ್ನು ಅಮ್ಮನೇ ಹೊಲೆದು ಕೊಡುತ್ತಿದ್ದಳು. ಆದರೆ ಅವಳಿಂದು ಹಾಕಿಕೊಂಡಿದ್ದು ಮಾತ್ರ ಅಂಗಡಿಯಿಂದ ಕೊಂಡು ತಂದದ್ದು. ತೊತ್ತೊ-ಚಾನ್ ಹೊರಗೆ ಹೋಗಿ ಬಂದಾಗಲೆಲ್ಲಾ ಬಟ್ಟೆಯನ್ನು ಹರಿದುಕೊಂಡೇ ಬರುತ್ತಿದ್ದಳು. ಕೆಲವು ಸಲವಂತೂ ಮೇಲಿಂದ ಕೆಳಗಿನವರೆಗೂ ಸೀಳಿ ಹೋಗಿರುತ್ತಿತ್ತು. ಇದು ಹೇಗಾಗುತ್ತದೆಂದು ಅಮ್ಮನಿಗೆ ತಿಳಿಯುತ್ತಿರಲಿಲ್ಲ. ಕೆಲ ಸಮಯ ಅವಳು ಒಳಗಡೆ ಹಾಕುತ್ತಿದ್ದ ಬಿಳಿಯ ಚಡ್ಡಿಗಳೂ ಚಿಂದಿಯಾಗಿರುತ್ತಿದ್ದವು. ಬೇರೆಯವರ ತೋಟಗಳನ್ನು ದಾಟಲು ಬೇಲಿಯ ಕೆಳಗೆ ನುಸುಳುವಾಗ ತನ್ನ ಬಟ್ಟೆ ಹೇಗೆ ಹರಿಯುತ್ತವೆಂದು ತೊತ್ತೊ-ಚಾನ್ ಮುಖ್ಯೋಪಾಧ್ಯಾಯರಿಗೆ ವಿವರಿಸಿದಳು.

ಆದ್ದರಿಂದ ಇಂದು ಬೆಳಿಗ್ಗೆ ಹೊರಡುವಾಗ ಅಮ್ಮ ಹೊಲೆದ ಎಲ್ಲ ಚೆಂದದ ಉಡುಪುಗಳೂ ಹರಿದು ಹೋದದ್ದರಿಂದ ಈ ಕೊಂಡು ತಂದ ಉಡುಪನ್ನೇ ಹಾಕಿಕೊಂಡು ಬಂದುದಾಗಿ ಹೇಳಿದಳು. ಸಣ್ಣ-ಸಣ್ಣ ಕಡು ಕೆಂಪು ಮತ್ತು ಕಂದು ಬಣ್ಣದ ಚೌಕಳಿಗಳಿದ್ದ ಆ ಉಡುಪು ಚೆನ್ನಾಗಿದೆಯೆಂದೇ ತೊತ್ತೊ-ಚಾನ್ ಅಂದುಕೊಂಡಿದ್ದಳು. ಆದರೆ ಕತ್ತಿನ ಸುತ್ತಲೂ ಕಾಲರಿನಲ್ಲಿ ಇದ್ದ ಕೆಂಪು ಬಣ್ಣದ ಹೂಗಳ ಚಿತ್ತಾರ ಮಾತ್ರ ಅಮ್ಮನಿಗೆ ಹಿಡಿಸುತ್ತಿರಲಿಲ್ಲ. "ಅಮ್ಮನಿಗೆ ಈ ಕಾಲರ್ ಇಷ್ಟವೇ ಇಲ್ಲ" ತೊತ್ತೊ-ಚಾನ್ ಮುಖ್ಯೋಪಾಧ್ಯಾಯರು ಸರಿಯಾಗಿ ನೋಡಲೆಂದು ಕಾಲರನ್ನು ಎತ್ತಿ ಹಿಡಿದಳು.

ಅನಂತರ ಎಷ್ಟು ಪ್ರಯತ್ನಿಸಿದರೂ ಅವಳಿಗೆ ಹೇಳಲು ಇನ್ನೇನೂ ಹೊಳೆಯಲಿಲ್ಲ. ಅವಳಿಗೆ ಸ್ವಲ್ಪ ದುಃಖವಾಯಿತು. ಆದರೆ ಅಷ್ಟರಲ್ಲೇ ಮುಖ್ಯೋಪಾಧ್ಯಾಯರು ತಮ್ಮ ಕುರ್ಚಿಯಿಂದೆದ್ದು ತನ್ನ ವಿಸ್ತಾರವಾದ ಬೆಚ್ಚಗಿನ ಕೈಗಳನ್ನು ಅವಳ ತಲೆಯ ಮೇಲೆ ಪ್ರೀತಿಯಿಂದಿಟ್ಟು "ಸರಿ, ನೀನೀಗ ನಮ್ಮ ಶಾಲೆಯ ಹುಡುಗಿಯಾಗಿಬಿಟ್ಟೆ" ಎಂದರು.

ಆತ ಹೇಳಿದ್ದು ಇಷ್ಟು ಮಾತ್ರ. ತೊತ್ತೊ-ಚಾನ್‌ಗೆ ಆ ಕ್ಷಣ ಜೀವನದಲ್ಲೇ ಮೊದಲ ಬಾರಿಗೆ ಉತ್ಕಟವಾಗಿ ಇಷ್ಟಪಡುವ ಒಬ್ಬರನ್ನು ಸಂಧಿಸಿದಂತೆ ಭಾಸವಾಯಿತು. ಈವರೆಗೂ ಯಾರೊಬ್ಬರೂ ಅವಳ ಮಾತನ್ನು ಇಷ್ಟೊಂದು ಹೊತ್ತು ಕೇಳಿರಲಿಲ್ಲ. ಅವಳು ಮಾತನಾಡುತ್ತಿದ್ದಷ್ಟು ಹೊತ್ತು ಮುಖ್ಯೋಪಾಧ್ಯಾಯರು ಒಮ್ಮೆಯಾದರೂ ಆಕಳಿಸಿರಲಿಲ್ಲ. ಬೋರಾದಂತೆ ತೋರಿಸಿಕೊಳ್ಳಲಿಲ್ಲ. ಅವಳು ಹೇಳುವುದೆಲ್ಲಾ ಬಹಳ ಆಸಕ್ತಿಯುತವಾಗಿದೆ ಎಂಬಂತೆ ಕೇಳಿಸಿಕೊಂಡಿದ್ದರು.

ತೊತ್ತೊ-ಚಾನ್‌ಗೆ ಸಮಯದ ಲೆಕ್ಕ ಹೇಗೆ ಇಡುವುದೆಂದು ತಿಳಿದಿರಲಿಲ್ಲ. ಆದರೂ ಬಹಳ ಹೊತ್ತಾಗಿದೆ ಎಂದೇನೋ ಅನಿಸುತ್ತಿತ್ತು. ಅವಳಿಗೇನಾದರೂ ಅದು ಗೊತ್ತಿದ್ದರೆ ದಂಗಾಗಿ ಬಿಡುತ್ತಿದ್ದಳು. ಹೆಡ್‌ಮಾಸ್ತರ ಮೇಲಿನ ಕೃತಜ್ಞತಾಭಾವ ಇನ್ನೂ ಹೆಚ್ಚುತ್ತಿತ್ತು. ತೊತ್ತೊ-ಚಾನ್ ಅಮ್ಮನೊಂದಿಗೆ ಶಾಲೆಗೆ ಬಂದಾಗ ಬೆಳಗಿನ ಎಂಟು ಗಂಟೆ. ಮುಖ್ಯೋಪಾಧ್ಯಾಯರು ನೀನೀಗ ನಮ್ಮ ಶಾಲೆಯ ಹುಡುಗಿ ಎಂದು ಹೇಳಿದ ನಂತರ ಜೇಬಿನಿಂದ ತಮ್ಮ ವಾಚನ್ನು ತೆಗೆದು ನೋಡಿ "ಓಹೋ ಆಗಲೇ ಊಟದ ಸಮಯ" ಎಂದಿದ್ದರು. ಅಂದರೆ ನಾಲ್ಕು ಗಂಟೆಗಳ ಕಾಲ ತೊತ್ತೊ-ಚಾನ್‌ಗೆ ಕಿವಿಗೊಟ್ಟಿದ್ದರು.

ಇಲ್ಲಿಯವರೆಗೂ ದೊಡ್ಡವರೊಬ್ಬರು ಇಷ್ಟೊಂದು ಹೊತ್ತು ತೊತ್ತೊ-ಚಾನ್ ಅನ್ನು ಕೇಳಿಸಿಕೊಂಡದ್ದೇ ಇಲ್ಲ. ಅಲ್ಲದೆ, ಏಳು ವರ್ಷದ ಹುಡುಗಿಯೊಬ್ಬಳು ಎಡೆಬಿಡದೆ ನಾಲ್ಕು ಗಂಟೆಗಳ ಕಾಲ ಮಾತನಾಡಬಲ್ಲಳು ಎಂಬ ಕಲ್ಪನೆ ಅವಳ ಅಮ್ಮನಿಗಾಗಲಿ, ಹಳೆಯ ಶಾಲೆಯ ಉಪಾಧ್ಯಾಯರಿಗಾಗಲಿ, ಖಂಡಿತ ಇರಲಿಲ್ಲ.

ತೊತ್ತೊ-ಚಾನ್‌ಗೆ ತನ್ನನ್ನು ಶಾಲೆಯಿಂದ ಹೊರಹಾಕಿದ್ದರ ಬಗ್ಗೆ ಯಾವ ಕಲ್ಪನೆಯೂ ಇರಲಿಲ್ಲ. ಅವಳು ಸ್ವಭಾವತಃ ತುಂಟಿ. ಅವಳಿಗೆ ಅತೀ ಕುತೂಹಲ. ಆದರೆ ತನ್ನನ್ನು, ಬೇರೆ ಮಕ್ಕಳಿಗಿಂತ ಭಿನ್ನವಾಗಿಯೇ ನೋಡಲಾಗುತ್ತದೆಂದು ಅವಳಿಗೆ ಮನದಾಳದಲ್ಲಿ ಅನಿಸುತ್ತಿತ್ತು. ಅದೇನೇ ಆದರೂ ಈ ಶಾಲೆಯ ಮುಖ್ಯೋಪಾಧ್ಯಾಯರು ಅವಳನ್ನು ನಿರಾಳಗೊಳಿಸಿದ್ದರು. ತಾನಿನ್ನು ಸುರಕ್ಷಿತಳಾದೆ ಎನ್ನುವಂಥ ಭಾವ ಅವಳಲ್ಲಿ ಉಂಟಾಗಿತ್ತು. ಅನುಗಾಲವೂ ಆತನೊಂದಿಗೆ ಇದ್ದುಬಿಡಬೇಕು ಎನಿಸುತ್ತಿತ್ತು. ಮುಖ್ಯೋಪಾಧ್ಯಾಯರೊಂದಿಗೆ ತೊತ್ತೊ-ಚಾನ್‌ಳ ಮೊದಲ ದಿನದ ಅನುಭವ ಇದು. ಅದೃಷ್ಟವೆಂದರೆ ಅವರಿಗೂ ಇವಳ ಬಗ್ಗೆ ಹಾಗೆಯೇ ಅನ್ನಿಸಿತು.

## ಮಧ್ಯಾಹ್ನದ ಊಟ

ಮುಖ್ಯೋಪಾಧ್ಯಾಯರು ಮಕ್ಕಳು ಊಟ ಮಾಡುವ ಜಾಗವನ್ನು ತೋರಿಸಲು ತೊತ್ತೊ-ಚಾನ್‌ಳನ್ನು ಕರೆದೊಯ್ದರು. "ನಾವು ರೈಲುಬಂಡಿಯಲ್ಲಿ ಊಟ ಮಾಡುವುದಿಲ್ಲ, ಸಭಾಂಗಣದಲ್ಲಿ ಮಾಡುತ್ತೇವೆ" ಎಂದು ವಿವರಿಸಿದರು. ಅದು ಹಲವು ಮೆಟ್ಟಲುಗಳನ್ನು ಏರಿ ಹೋಗಬೇಕಾಗಿದ್ದ ಎತ್ತರದ ಜಾಗದಲ್ಲಿತ್ತು. ಅಲ್ಲಿಗೆ ಹೋದಾಗ ಮಕ್ಕಳೆಲ್ಲಾ ದಡ-ಬಡ ಎಂದು ಡೆಸ್ಕುಗಳನ್ನೂ ಕುರ್ಚಿಗಳನ್ನು ಎಳೆಯುತ್ತಾ ವರ್ತುಲಾಕಾರದಲ್ಲಿ ಜೋಡಿಸುತ್ತಿದ್ದರು. ಮುಖ್ಯೋಪಾಧ್ಯಾಯರ ಜೊತೆ ಒಂದು ಮೂಲೆಯಲ್ಲಿ ನಿಂತಿದ್ದ ತೊತ್ತೊ-ಚಾನ್ ಅವರ ಜಾಕೆಟ್‌ನ ಅಂಚು ಹಿಡಿದೆಳೆದು ತಲೆಯೆತ್ತಿ ಅವರತ್ತ ನೋಡುತ್ತಾ ಕೇಳಿದಳು "ಬೇರೆ ಮಕ್ಕಳೆಲ್ಲಾ ಎಲ್ಲಿ?" "ಇಲ್ಲಿರುವಷ್ಟೇ, ಇಷ್ಟೇ ಜನ" ಎಂದು ಅವರು ಉತ್ತರಿಸಿದರು.

"ಎಲ್ಲಾ ಇಲ್ಲೇ ಇದ್ದಾರಾ?" ಅವಳಿಗೆ ನಂಬಿಕೆಯಾಗಲಿಲ್ಲ.

ಅವಳ ಹಳೆಯ ಶಾಲೆಯಲ್ಲಿ ಅವಳ ತರಗತಿಯೊಂದರಲ್ಲೇ ಹೆಚ್ಚು-ಕಡಿಮೆ ಇಷ್ಟು ಮಕ್ಕಳಿದ್ದರು.

"ಅಂದರೆ ಇಡೀ ಶಾಲೆಗೆ ಬರೀ ಐವತ್ತೇ ಮಕ್ಕಳಾ?"

"ಹೌದು, ಅಷ್ಟೇ."

ಈ ಶಾಲೆಯಲ್ಲಿ ಎಲ್ಲವೂ ಬೇರೆಯೇ ಆಗಿದೆಯಲ್ಲ ಎಂದುಕೊಂಡಳು ತೊತ್ತೊ-ಚಾನ್. ಎಲ್ಲರೂ ಊಟಕ್ಕೆ ಕುಳಿತಾದ ನಂತರ ಹೆಡ್‌ಮಾಸ್ತರು ಮಕ್ಕಳನ್ನು ಕುರಿತು, ಪ್ರತಿಯೊಬ್ಬರೂ ಕೊಂಚ ನೆಲದ್ದು ಕೊಂಚ ಜಲದ್ದು ತಂದಿರುವಿರಾ? ಎಂದು ಕೇಳಿದರು.

"ಓ ತಂದಿದ್ದೀನಿ" ಎಲ್ಲರೂ ಒಕ್ಕೊರಲಿನಿಂದ ನುಡಿದು ತಮ್ಮ-ತಮ್ಮ ಊಟದ ಡಬ್ಬಿಗಳನ್ನು ಬಿಚ್ಚತೊಡಗಿದರು.

"ಸ್ವಲ್ಪ ನೋಡೋಣ" ಎನ್ನುತ್ತಾ ಮುಖ್ಯೋಪಾಧ್ಯಾಯರು ಪ್ರತಿಯೊಬ್ಬರ ಡಬ್ಬಿಯನ್ನೂ ನೋಡತೊಡಗಿದರು. ಮಕ್ಕಳೆಲ್ಲಾ ಪುಳಕಗೊಂಡರು.

"ಇದೇನು ತಮಾಷೆ" ತೊತ್ತೊ-ಚಾನ್ ಅಂದುಕೊಂಡಳು "ಸ್ವಲ್ಪ ನೆಲದ್ದು ಸ್ವಲ್ಪ ಜಲದ್ದು ಏನಪ್ಪ ಹಾಗೆಂದರೆ? ಈ ಶಾಲೆ ಬೇರೆಯೇ ಆಗಿದೆ, ತುಂಬಾ ಮಜವಾಗಿದೆ." ಶಾಲೆಯಲ್ಲಿ ಮಧ್ಯಾಹ್ನದ ಊಟ ಇಷ್ಟೊಂದು ಮಜವಾಗಿರಲು ಸಾಧ್ಯ ಎಂದು ಅವಳು ಎಣಿಸಿರಲಿಲ್ಲ. ನಾಳೆ ತಾನೂ ಈ ವರ್ತುಲದಲ್ಲಿ ಒಬ್ಬಳಾಗಿ ಕುಳಿತು ತಾನು ತರುವ ಸ್ವಲ್ಪ ನೆಲದ್ದು ಸ್ವಲ್ಪ ಜಲದ್ದನ್ನು ಮುಖ್ಯೋಪಾಧ್ಯಾಯರಿಗೆ ತೋರಿಸುತ್ತೇನೆ ಎಂಬ ಕಲ್ಪನೆಯೇ ಅವಳನ್ನು ಆನಂದದಿಂದ ಜಿಗಿಯುವಂತೆ ಮಾಡಿತು.

ಮುಖ್ಯೋಪಾಧ್ಯಾಯರು ಮಕ್ಕಳ ಬುತ್ತಿಗಳನ್ನು ಪರೀಕ್ಷಿಸುತ್ತಾ ಹೋದಂತೆ ಮಧ್ಯಾಹ್ನದ ಸೂರ್ಯರಶ್ಮಿ ಚಾವಣಿಯಿಂದ ಇಣುಕುತ್ತಾ ಅವರ ವಿಶಾಲ ಭುಜಗಳನ್ನು ಬೆಳಗಿಸಿತ್ತು.

## ತೊತ್ತೊ-ಚಾನ್ ಶಾಲೆಗೆ ಹೋದದ್ದು

'ನೀನಿನ್ನು ನಮ್ಮ ಶಾಲೆಯ ಹುಡುಗಿಯಾಗಿಬಿಟ್ಟೆ' ಎಂದು ಮುಖ್ಯೋಪಾಧ್ಯಾಯರೆಂದ ಮೇಲೆ ತೊತ್ತೊ-ಚಾನ್‌ಗೆ ಮರುದಿನದ ಸೂರ್ಯೋದಯವನ್ನು ಕಾಯುವ ವ್ಯವಧಾನವೇ ಹೊರಟುಹೋಯಿತು. ಹಿಂದೆಂದೂ ಅವಳಿಗೆ ಹೀಗಾಗಿರಲಿಲ್ಲ. ಅಮ್ಮನಿಗೆ ತೊತ್ತೊ-ಚಾನ್‌ಳನ್ನು ಹಾಸಿಗೆಯಿಂದೆಬ್ಬಿಸುವುದೇ ಒಂದು ತಲೆಬಿಸಿ. ಆದರೆ ಇಂದು ಅವಳು ಎಲ್ಲರಿಗಿಂತ ಮುಂಚೆ ಎದ್ದು ಬಟ್ಟೆ ಧರಿಸಿ ಶಾಲಾಚೀಲ ತಗುಲಿಸಿಕೊಂಡು ತಯಾರಾಗಿ ನಿಂತುಬಿಟ್ಟಿದ್ದಳು.

ಆ ಮನೆಯ ಶಿಸ್ತಿನ ಸಿಪಾಯಿಯೆಂದರೆ, ಜರ್ಮನ್ ಷಫರ್ಡ್ ನಾಯಿ ರಾಕಿ. ಇಂದು ಅದಕ್ಕೂ ಆಶ್ಚರ್ಯ. ತೊತ್ತೊ-ಚಾನ್‌ಳ ಅಸಹಜ ರೀತಿಯನ್ನು ಕಂಡು ಏನೋ ಅನುಮಾನ. ಏನೋ ವಿಶೇಷವಿರಬೇಕೆಂದುಕೊಂಡು ಮೈಮುರಿದು ಅವಳ ಪಕ್ಕಕ್ಕೆ ಸರಿಯಿತು.

ಅಮ್ಮನಿಗಿಂದು ಒಂದು ಪಟ್ಟು ಕೆಲಸ ಹೆಚ್ಚು. ಇರುವ ತಿನಿಸಿನಿಂದ ಬುತ್ತಿಯನ್ನು ತಯಾರು ಮಾಡಿ, ತೊತ್ತೊ-ಚಾನ್‌ಗೆ ಬೆಳಗಿನ ತಿಂಡಿ ತಿನ್ನಲು ಕೊಟ್ಟಳು. ತೊತ್ತೊ-ಚಾನ್‌ಳ ರೈಲಿನ ಪಾಸನ್ನು ಪ್ಲಾಸ್ಟಿಕ್ ಚೀಲದಲ್ಲಿ ಹಾಕಿ ಕಳೆಯದಿರಲೆಂದು ಅದನ್ನು ಅವಳ ಕುತ್ತಿಗೆಗೆ ನೇತು ಹಾಕಿದಳು.

"ಒಳ್ಳೆ ಹುಡುಗಿ ಅನ್ನಿಸಿಕೋ" ಅವಳು ಹೊರಟಾಗ ತಂದೆಯೆಂದರು.

"ಖಂಡಿತ" ಎನ್ನುತ್ತಾ ತೊತ್ತೊ-ಚಾನ್ ತನ್ನ ಬೂಟುಗಳನ್ನು ಹಾಕಿಕೊಂಡು ಮನೆಯ ಹೊರ ಬಾಗಿಲಿನಿಂದ ನಡೆದಳು. ಮತ್ತೆ ಹಿಂದಿರುಗಿ ನಿಂತು ಸೌಮ್ಯವಾಗಿ ಬಾಗಿ "ಎಲ್ಲರಿಗೂ ಗುಡ್ ಬೈ" ಎಂದಳು.

ತೊತ್ತೊ-ಚಾನ್ ಹೊರನಡೆಯುತ್ತಿದ್ದಂತೆಯೇ ಅಮ್ಮನ ಕಣ್ಣಿನಿಂದ ಹನಿಗಳು ಉದುರಿದವು. ಈ ಚೈತನ್ಯದ ಚಿಲುಮೆಯನ್ನು ಶಾಲೆಯಿಂದ ಹೊರಹಾಕಿದರಲ್ಲ ಎಂದುಕೊಂಡಳು. ಈ ಸಲವಾದರೂ ಎಲ್ಲಾ ಸರಿಯಾಗಲಿ ಎಂದು ದೇವರನ್ನು ಪ್ರಾರ್ಥಿಸಿದಳು.

ಸ್ವಲ್ಪ ದೂರ ಹೋಗುತ್ತಿದ್ದಂತೆಯೇ ತೊತ್ತೊ-ಚಾನ್ ತನ್ನ ರೈಲು ಪಾಸನ್ನು ರಾಕಿಯ ಕುತ್ತಿಗೆಗೆ ನೇತು ಹಾಕಿದ್ದು ಕಂಡು ಅಮ್ಮನಿಗೆ ಗಲಿಬಿಲಿಯಾದರೂ ಸುಮ್ಮನೆ ನೋಡುತ್ತಾ ನಿಂತಳು.

"ರಾಕಿ, ನಿನಗೆ ಈ ರೈಲು ಪಾಸು ಸ್ವಲ್ಪವೂ ಚೆನ್ನಾಗಿ ಕಾಣೋಲ್ಲ ಕಣೋ" ಎಂದು ಅದನ್ನು ಕಿತ್ತುಕೊಂಡಳು.

ಅದಕ್ಕೆ ಕಟ್ಟಿದ್ದ ದಾರ ತುಂಬಾ ಉದ್ದವಾಗಿದ್ದು ರಾಕಿಯ ಕೊರಳಿಗೆ ಹಾಕಿದಾಗ ಅದು ನೆಲದ ಮೇಲೆ ಎಳೆದಾಡುತ್ತಿತ್ತು.

"ಈ ಪಾಸು ನನ್ನದು, ನಿನ್ನದಲ್ಲ ತಿಳೀತಾ ? ನೀನು ರೈಲಿನಲ್ಲಿ ಬರಬೇಕೆಂದರೆ ಕಷ್ಟ. ನಾನು ಹೆಡ್‌ಮಾಸ್ತರನ್ನೂ, ಸ್ಟೇಷನ್ ಮಾಸ್ತರನ್ನೂ ಕೇಳ್ತಿನಿ, ನಿನ್ನನ್ನೂ ಸ್ಕೂಲಿಗೆ ಬಿಡ್ತಾರ ಅಂತಾ."

ರಾಕಿ ಎಚ್ಚರಿಕೆಯಿಂದೆಂಬಂತೆ ಕಿವಿ ನಿಮಿರಿಸಿ ಕೇಳಿಸಿಕೊಂಡಿತು. ನಂತರ ರೈಲು ಪಾಸನ್ನು ಒಂದೆರಡು ಸಲ ನೆಕ್ಕಿ ಆಕಳಿಸಿತು. ತೊತ್ತೊ-ಚಾನ್ ಮುಂದುವರಿಸಿದಳು.

"ಶಾಲೆಯು ರೈಲುಬಂಡಿ ಓಡಾಡೋದಿಲ್ಲ. ಆದ್ದರಿಂದ ಹತ್ತೋಕೆ ಅದಕ್ಕೆ ನಿನಗೆ ಟಿಕೇಟು ಬೇಕಾಗಿಲ್ಲವೇನೋ. ಆದರೆ ಇವತ್ತು ಮಾತ್ರ ನೀನು ಮನೆಯಲ್ಲೇ ಇದ್ದು ನಾನು ಬರೋವರ್ಗೂ ಕಾಯ್ತಾ ಇರು."

ತೊತ್ತೊ-ಚಾನ್ ಹಳೇ ಶಾಲೆಗೆ ಹೋಗುತ್ತಿದ್ದಾಗ ರಾಕಿ ಅವಳನ್ನು ಗೇಟಿನವರೆಗೂ ಬಿಟ್ಟು ಬರುತ್ತಿತ್ತು. ಇವತ್ತೂ ಹಾಗೆಯೇ ಅಂದುಕೊಂಡಿತ್ತು ಅದು.

ತೊತ್ತೊ-ಚಾನ್ ರೈಲು ಪಾಸನ್ನು ತನ್ನ ಕುತ್ತಿಗೆಗೆ ಹಾಕಿಕೊಳ್ಳುತ್ತಾ ಹಿಂದಿರುಗಿ ತಂದೆ-ತಾಯಿಗಳಿಗೆ ಮತ್ತೊಮ್ಮೆ ಗುಡ್‌ಬೈ ಹೇಳಿ ಓಟಕಿತ್ತಳು.

ರೈಲ್ವೆ ಸ್ಟೇಷನ್‌ಗೆ ಹೋಗುವುದು ಹಳೇ ಶಾಲೆಗೆ ಹೋದಷ್ಟೆ ದೂರವಾಗುತ್ತಿತ್ತು. ನಡೆದು ಹೋಗುವಾಗ ದಾರಿಯಲ್ಲಿ ಅವಳಿಗೆ ಅವಳ ಪರಿಚಯದ ನಾಯಿ-ಬೆಕ್ಕುಗಳಾದಿಯಾಗಿ ಹಳೇ ಶಾಲೆಯ ಮಕ್ಕಳೆಲ್ಲಾ ಸಿಕ್ಕರು. ಅವರಿಗೆಲ್ಲಾ ತನ್ನ ರೈಲುಬಂಡಿ ಶಾಲೆ ಬಗ್ಗೆ ಹೇಳಿ ಹೊಟ್ಟೆ ಉರಿಸಬೇಕೆನ್ನಿಸಿತು. ತಡವಾಗುತ್ತದೆಂದು ಸುಮ್ಮನೆ ನಡೆದಳು.

ತೊತ್ತೊ-ಚಾನ್ ರೈಲು ನಿಲ್ದಾಣ ತಲುಪಿದಾಗ ರಾಕಿ ತಬ್ಬಿಬ್ಬಾಗಿ ನಿಂತುಬಿಟ್ಟಿತು. ತೊತ್ತೊ-ಚಾನ್ ಟಿಕೇಟ್ ಗೇಟನ್ನು ತಲುಪಿದ್ದರೂ ಪುನಃ ಹಿಂದಕ್ಕೆ ಹೋಗಿ ಮಿಕಿಮಿಕಿ ನೋಡುತ್ತಿದ್ದ ರಾಕಿಯನ್ನು ತಬ್ಬಿಕೊಂಡಳು.

"ನಾನು ಹಳೇ ಶಾಲೆಗೆ ಹೋಗ್ತಾ ಇಲ್ಲ ರಾಕಿ, ಹೊಸ ಶಾಲೆಗೆ ಹೋಗ್ತಾ ಇದೀನಿ" ಅದರ ಕಿವಿಯಲ್ಲಿ ಹೇಳಿದಳು.

ಗೇಟಿನಲ್ಲಿದ್ದವನಿಗೆ ಪಾಸನ್ನು ತೋರಿಸುತ್ತಲೇ ರಾಕಿಗೆ ಬೈ ಬೈ ಹೇಳಿ ಸ್ಟೇಷನಿನ ಕಡಿದಾದ ಮೆಟ್ಟಲೇರಿದಳು. ಅವಳು ಕಣ್ಣರೆಯಾಗುವವರೆಗೂ ರಾಕಿ ಬಿಟ್ಟ ಕಣ್ಣು ಬಿಟ್ಟಂತೆ ನೋಡುತ್ತಲೇ ಇತ್ತು.

## ರೈಲುಬಂಡಿಯಲ್ಲಿ ತರಗತಿ

ಮುಖ್ಯೋಪಾಧ್ಯಾಯರು ತನ್ನ ತರಗತಿಯೆಂದು ತೋರಿಸಿಕೊಟ್ಟಿದ್ದ ರೈಲುಬಂಡಿಯ ಬಾಗಿಲಿಗೆ ತೊತ್ತೊ-ಚಾನ್ ಬಂದಾಗ ಬೇರೆ ಯಾರೂ ಬಂದಿರಲಿಲ್ಲ. ಅದು ಹೊರಗೆ ಹ್ಯಾಂಡಲಿದ್ದ ಹಳೆ ಮಾದರಿಯ ರೈಲುಬಂಡಿ. ಹ್ಯಾಂಡಲನ್ನು ಎರಡೂ ಕೈಯಲ್ಲಿ ಹಿಡಿದು ಬಾಗಿಲನ್ನು ಬಲಕ್ಕೆ ಜರುಗಿಸಬೇಕು. ಒಳಗೆ ಇಣುಕಿ ನೋಡುತ್ತಿದ್ದಂತೆಯೇ ತೊತ್ತೊ-ಚಾನ್‌ಳ ಹೃದಯ ಉದ್ವೇಗದಿಂದ ಬಡಿದುಕೊಳ್ಳತೊಡಗಿತು.

"ಆಹಾ!" ಇಲ್ಲಿ ಪಾಠ ಕಲಿಯುವುದೆಂದರೆ ಮಜವಾಗಿ ರೈಲು ಬಂಡಿಯಲ್ಲಿ ಪ್ರಯಾಣ ಮಾಡಿದಂತೆ. ರೈಲುಬಂಡಿಯಲ್ಲಿ ಕಿಟಕಿಗಳ ಮೇಲೆ ಸಾಮಾನು ಇಡುವ ಜಾಗ ಹಾಗೆಯೇ ಇತ್ತು. ಒಂದೇ ಒಂದು ವ್ಯತ್ಯಾಸವೆಂದರೆ ರೈಲುಬಂಡಿಯ ಮುಂದಿನ ಭಾಗದಲ್ಲಿ ಕರಿಹಲಗೆ ಇದ್ದು ಅದರ ಎಲ್ಲ ಅಡ್ಡಡ್ಡ ಸೀಟುಗಳನ್ನು ತೆಗೆದುಹಾಕಿ ಡೆಸ್ಕು

ಕುರ್ಚಿಗಳನ್ನು ಹಾಕಲಾಗಿತ್ತು. ಉಳಿದೆಲ್ಲವೂ ಹಾಗೆಯೇ ಇದ್ದವು. ತೊತ್ತೊ-ಚಾನ್ ಒಳಹೋಗಿ ಯಾರದೋ ಒಂದು ಡೆಸ್ಕಿನಲ್ಲಿ ಕುಳಿತುಕೊಂಡಳು. ಮರದ ಕುರ್ಚಿಗಳು ಹಳೆಯ ಶಾಲೆಯಲ್ಲಿದ್ದಂತೆಯೇ ಇದ್ದರೂ ಹೆಚ್ಚು ಆರಾಮವಾಗಿದೆಯೆನಿಸಿತು. ಇಡೀ ದಿನ ಹಾಗೇ ಕುಳಿತಿರಬಲ್ಲೆ ಎಂದುಕೊಂಡಳು. ತೊತ್ತೊ-ಚಾನ್‌ಗೆ ಶಾಲೆ ಎಷ್ಟೊಂದು ಹಿಡಿಸಿತೆಂದರೆ ಪ್ರತಿ ದಿನ ತಪ್ಪದೆ ಬರುವುದಾಗಿ ಶಪಥ ಮಾಡಿದಳು.

ತೊತ್ತೊ-ಚಾನ್ ಕಿಟಕಿಯಿಂದ ಹೊರನೋಡಿದಳು. ರೈಲು ನಿಂತಿದೆಯೆಂದು ಗೊತ್ತು. ಆದರೂ ಅದು ಚಲಿಸುತ್ತಿರುವಂತೆ ಅವಳಿಗೆ ಭಾಸವಾಯಿತು. ಹೊರಗಡೆ ಮರಗಿಡಗಳೂ ಹೂ ಬಳ್ಳಿಗಳೂ ಗಾಳಿಯಲ್ಲಿ ತೊನೆದಾಡುತ್ತಿದ್ದರಿಂದ ಹಾಗೆನ್ನಿಸಿತೋ ? ಅಥವಾ ತೊತ್ತೊ-ಚಾನ್‌ಳೇ ಹಾಗೆ ಕಲ್ಪಿಸಿಕೊಂಡಳೋ ?

"ನನಗೆ ತುಂಬಾ ಖುಷಿಯಾಗಿದೆ" ಗಟ್ಟಿಯಾಗಿ ಹೇಳಿಕೊಂಡಳು. ಕಿಟಕಿಗೆ ಮುಖ ಆನಿಸಿಕೊಂಡು ಹಾಡತೊಡಗಿದಳು. ತನಗೆ ತುಂಬಾ ಖುಷಿಯಾಗಿದೆ ಎನಿಸಿದಾಗಲೆಲ್ಲಾ ತೊತ್ತೊ-ಚಾನ್ ಹೀಗೆ ಹಾಡಿಕೊಳ್ಳುವಳು:

ನನಗೆಷ್ಟೊಂದು ಖುಷಿ,
ಎಷ್ಟೊಂದು ಖುಷಿ ನನಗೆ !
ಇಷ್ಟೊಂದು ಖುಷಿ ಏಕೆ ?
ಏಕೆಂದರೆ.....

ಹೀಗೆ ಅವಳು ಹಾಡಿಕೊಳ್ಳುತ್ತಿರುವಾಗಲೇ ಯಾರೋ ಒಳಬಂದರು. ಅವಳೊಬ್ಬ ಹುಡುಗಿ. ಅವಳು ತನ್ನ ಪಾಟಿಚೀಲದಿಂದ ಪೆನ್ಸಿಲ್ ಪೆಟ್ಟಿಗೆಯನ್ನೂ ನೋಟ್ ಪುಸ್ತಕವನ್ನೂ ತೆಗೆದು ಡೆಸ್ಕಿನ ಮೇಲಿಟ್ಟಳು. ತೊತ್ತೊ-ಚಾನ್ ಹಾಡುವುದನ್ನು ನಿಲ್ಲಿಸಿ ಲಗುಬಗೆಯಿಂದ ತಾನೂ ಹಾಗೆಯೇ ಮಾಡಿದಳು. ಆನಂತರ ಒಬ್ಬ ಹುಡುಗ ಒಳ ಬಂದ. ಅವನು ಬಾಗಿಲ ಬಳಿಯೇ ನಿಂತು ಬಾಸ್ಕೆಟ್ ಬಾಲ್ ಆಡುತ್ತಿರುವವನಂತೆ ತನ್ನ ಚೀಲವನ್ನು ಕಪಾಟಿನ ಮೇಲಕ್ಕೆಸೆದ. ಅದು ಅಲ್ಲಿ ನಿಲ್ಲದೆ ಕೆಳಗೆ ಬಿತ್ತು. "ಕೆಟ್ಟ ಎಸೆತ" ಎಂದು ಹುಡುಗ ಅದನ್ನು ಮತ್ತೆ ತೆಗೆದುಕೊಂಡು, ಅಲ್ಲಿಂದಲೇ ಇನ್ನೊಮ್ಮೆ ಹಾಗೆಯೇ ಎಸೆದ. ಈಗ ಅದು ಅಲ್ಲಿಯೇ ಕುಳಿತಿತ್ತು. "ಒಳ್ಳೇ ಎಸೆತ" ಎಂದು ಕೂಗಿದವನು ಹಿಂದೆಯೇ "ಇಲ್ಲ ಕೆಟ್ಟ ಎಸೆತ" ಎಂದು ಕೂಗುತ್ತಾ ಚೀಲವನ್ನು ತೆಗೆದುಕೊಂಡು ಪೆನ್ಸಿಲ್ ಪೆಟ್ಟಿಗೆ ಮತ್ತು ನೋಟು ಪುಸ್ತಕಗಳನ್ನು ಹೊರತೆಗೆದ. ಮೊದಲೇ ಹೀಗೆ ಮಾಡದೇ ಹೋದದ್ದು ತನ್ನ ಸೋಲೆಂದು ಅವನಿಗನಿಸಿರಬೇಕು.

ಕೊನೆಯಲ್ಲಿ ಆ ರೈಲುಗಾಡಿಯಲ್ಲಿ ಒಂಬತ್ತು ಜನ ಮಕ್ಕಳಿದ್ದರು. ಅವರು ತೊಮೊಯೆದ ಮೊದಲನೇ ತರಗತಿಯ ಮಕ್ಕಳು.

ಅವರೆಲ್ಲಾ ಇಲ್ಲಿ ಒಂದೇ ರೈಲಿನ ಪ್ರಯಾಣಿಕರಾಗಿದ್ದರು.

## ತೊಮೊಯೆದಲ್ಲಿ ಪಾಠಗಳು

ರೈಲುಗಾಡಿಯ ಶಾಲೆ ಭಿನ್ನವಾಗಿದ್ದಂತೆಯೇ ಅಲ್ಲಿ ಕುಳಿತುಕೊಳ್ಳುವ ವ್ಯವಸ್ಥೆ ಕೂಡ ಭಿನ್ನವಾಗಿತ್ತು. ಬೇರೆ ಶಾಲೆಗಳಲ್ಲಿ ಪ್ರತಿಯೊಬ್ಬ ಮಕ್ಕಳಿಗೂ ನಿರ್ದಿಷ್ಟ ಡೆಸ್ಕುಗಳಿರುತ್ತವೆ. ಅವರು ಅಲ್ಲಿಯೇ ಕುಳಿತುಕೊಳ್ಳಬೇಕು. ಆದರೆ ಇಲ್ಲಿ ಮಕ್ಕಳು ತಮಗೆ ಯಾವಾಗ ಎಲ್ಲಿ ಇಷ್ಟವಾಗುತ್ತದೋ ಅಲ್ಲಿ ಕುಳಿತುಕೊಳ್ಳಬಹುದಾಗಿತ್ತು.

ಒಮ್ಮೆ ಎಲ್ಲಾ ಕಡೆ ಸರಿಯಾಗಿ ಕಣ್ಣಾಡಿಸಿ, ತೊತ್ತೊ-ಚಾನ್ ಅಂದು ತರಗತಿಗೆ ತನ್ನ ಬಳಿಕ ಬಂದವಳ ಪಕ್ಕ ಕುಳಿತುಕೊಳ್ಳಲು ನಿರ್ಧರಿಸಿದಳು. ಆ ಹುಡುಗಿ ತೊಟ್ಟಿದ್ದ ಮೇಲಂಗಿಯ ಮೇಲೆ ಉದ್ದಕಿವಿಯ ಮೊಲವಿತ್ತು.

ಆ ಶಾಲೆಯಲ್ಲಿ ತೀರಾ ಭಿನ್ನವೆಂದು ಕಂಡುಬಂದದ್ದೆಂದರೆ ಅಲ್ಲಿನ ಪಾಠಗಳು. ಸಾಮಾನ್ಯವಾಗಿ ಶಾಲೆಗಳಲ್ಲಿ ಇಂತಿಂಥಾ ಪೀರಿಯಡ್ಡುಗಳಿಗೆ ಇಂತಿಂಥಾ ವಿಷಯಗಳೆಂದು ಗೊತ್ತುಪಡಿಸಲಾಗಿರುತ್ತದೆ. ಉದಾಹರಣೆಗೆ, ಮೊದಲನೇ ಪಿರಿಯಡ್ಡು ಜಪಾನೀ ಭಾಷೆಯಾದರೆ, ಎರಡನೆಯ ಪಿರಿಯಡ್ಡು ಲೆಕ್ಕ ಹೀಗೆ. ತರಗತಿಯ ಎಲ್ಲರೂ ಆಯಾಯಾ ಪಿರಿಯಡ್ಡುಗಳಲ್ಲಿ ಆಯಾಯ ವಿಷಯಗಳನ್ನು ಕಲಿಯಬೇಕು. ಆದರೆ ಇಲ್ಲಿ ತೀರಾ ಭಿನ್ನ. ಮೊದಲನೇ ಪಿರಿಯಡ್ಡಿನಲ್ಲಿ ಉಪಾಧ್ಯಾಯರು ಅಂದು ಅಭ್ಯಸಿಸಬೇಕಾದ ವಿಷಯಗಳಲ್ಲಿನ ಎಲ್ಲ ಸಮಸ್ಯೆಗಳನ್ನೂ ಪ್ರಶ್ನೆಗಳನ್ನೂ ಪಟ್ಟಿ ಮಾಡಿಕೊಳ್ಳುತ್ತಾರೆ. ಆನಂತರ ಅವರು "ಸರಿ, ಈಗ ನಿಮಗೇನು ಇಷ್ಟವೋ ಅಲ್ಲಿಂದ ಪ್ರಾರಂಭಿಸಿ" ಎಂದು ಹೇಳುತ್ತಾರೆ.

ನೀನು ಜಪಾನೀಯನ್ನು ಪ್ರಾರಂಭಿಸುತ್ತಿಯೋ, ಲೆಕ್ಕವನ್ನು ಶುರು ಮಾಡುತ್ತಿಯೋ ಅಥವಾ ಬೇರೆ ಏನನ್ನು ಆರಿಸಿಕೊಳ್ಳುತ್ತಿಯೋ, ಅದು ನಿನಗೆ ಬಿಟ್ಟದ್ದು. ವಾಕ್ಯಗಳನ್ನು ರಚಿಸಬಯಸುವವರು ಏನಾದರೂ ಬರೆಯುತ್ತಿದ್ದರೆ, ವಿಜ್ಞಾನದಲ್ಲಿ ಆಸಕ್ತಿಯಿರುವವರು ಬೇರೆಡೆ ಹೋಗಿ ಮದ್ಯಸಾರ ದೀಪದ ಮೇಲೆ ಏನನ್ನೋ ಕಾಯಿಸುತ್ತಿರುತ್ತಾರೆ. ಆದ್ದರಿಂದ ಯಾವುದೇ ತರಗತಿಯಲ್ಲಿ ಯಾವುದೇ ಸಮಯದಲ್ಲಿ ಸಣ್ಣ ಸಿಡಿತದ ಸದ್ದು ಕೇಳಿ ಬಂದರೆ ಅದು ತರಗತಿ ನಡೆಯುತ್ತಿರುವಷ್ಟೇ ಸತ್ಯ.

ಈ ಬಗೆಯ ಕಲಿಯುವ ರೀತಿಯಿಂದ ಉಪಾಧ್ಯಾಯರಿಗೆ ಮಕ್ಕಳು ಬೆಳೆಯುತ್ತಾ ಹೋದಂತೆ ಅವರ ನಿಜವಾದ ಆಸಕ್ತಿಗಳನ್ನು ಜೊತೆಗೆ ಅವರ ಆಲೋಚನಾ ಕ್ರಮ ಹಾಗೂ ವ್ಯಕ್ತಿತ್ವಗಳನ್ನು ಚೆನ್ನಾಗಿ ತಿಳಿದುಕೊಳ್ಳಲು ಸಹಾಯವಾಗುತ್ತದೆ. ಉಪಾಧ್ಯಾಯರಿಗೆ ತಮ್ಮ ವಿದ್ಯಾರ್ಥಿ ವಿದ್ಯಾರ್ಥಿನಿಯರನ್ನು ಅರ್ಥಮಾಡಿಕೊಳ್ಳಲು ಇದೊಂದು ಉತ್ತಮ ಮಾರ್ಗ.

ಮಕ್ಕಳಿಗೆ ತಮಗಿಷ್ಟವಾದ ವಿಷಯದಿಂದ ಕಲಿಕೆ ಪ್ರಾರಂಭಿಸುವುದು ತುಂಬಾ ಖುಷಿ ಕೊಡುತ್ತಿತ್ತು. ತಮಗಿಷ್ಟವಿಲ್ಲದ ವಿಷಯಗಳನ್ನು ತಮಗೆ ಮನಸ್ಸು ಬಂದಾಗ, ಸಾಧ್ಯವಿದ್ದಾಗ ಕಲಿಯಬಹುದಾದ್ದರಿಂದ ಹೇಗೋ ನಿಭಾಯಿಸಬಹುದಾಗಿತ್ತು. ಹೀಗಾಗಿ ಕಲಿಕೆಯೆಂಬುದು ಬಹುಪಾಲು ಸ್ವತಂತ್ರವಾಗಿದ್ದು, ಮಕ್ಕಳು ತಮಗೆ ಅವಶ್ಯವಿದ್ದಾಗ ಉಪಾಧ್ಯಾಯರನ್ನು ಹೋಗಿ ನೋಡಬಹುದಾಗಿತ್ತು. ಅವರು

ಬಯಸಿದಲ್ಲಿ ಉಪಾಧ್ಯಾಯರೇ ಮಕ್ಕಳಿರುವಲ್ಲಿಗೆ ಬಂದು ಅರ್ಥವಾಗುವವರೆಗೂ ಹೇಳಿಕೊಡುತ್ತಿದ್ದರು. ಅನಂತರ ಮಕ್ಕಳಿಗೆ ಸ್ವತಃ ಕೆಲಸಮಾಡಲು ಸಹಾಯವಾಗದಂಥ ಚಟುವಟಿಕೆಗಳನ್ನು ಕೊಡುವರು. ಇದು ನಿಜವಾದ ಅರ್ಥದಲ್ಲಿ ಕಲಿಕೆಯಾಗಿದ್ದು ಉಪಾಧ್ಯಾಯರ ಯಾವ ಬೋಧನೆಗಳೂ ವ್ಯರ್ಥವಾಗಿ ಹೋಗದ ರೀತಿಯಲ್ಲಿ ಮಕ್ಕಳು ಮನಸ್ಸು ಕೊಡುವುದು ಇದರಿಂದ ಸಾಧ್ಯವಾಗುತ್ತಿತ್ತು.

ಮೊದಲನೆ ತರಗತಿಯ ಮಕ್ಕಳು ಸ್ವತಂತ್ರ ಕಲಿಕೆಯ ಮಟ್ಟವನ್ನು ತಲುಪಿಲ್ಲದಿದ್ದರೂ ಅವರು ತಮಗಿಷ್ಟವಾದಲ್ಲಿಂದ ಪ್ರಾರಂಭಿಸಬಹುದಾಗಿತ್ತು.

ಕೆಲವರು ಅಕ್ಷರಗಳನ್ನು ಬರೆಯುತ್ತಿದ್ದರೆ, ಮತ್ತೆ ಕೆಲವರು ಚಿತ್ರಗಳನ್ನು ಬರೆಯುತ್ತಿದ್ದರು. ಕೆಲವರು ಪುಸ್ತಕ ಓದುತ್ತಿದ್ದರೆ, ಇನ್ನು ಕೆಲವರಂತೂ ವ್ಯಾಯಾಮ ಮಾಡುತ್ತಿದ್ದರು. ತೊತ್ತೊ-ಚಾನ್ ಪಕ್ಕದಲ್ಲಿ ಕುಳಿತಿದ್ದ ಹುಡುಗಿಗೆ ಎಲ್ಲ ಅಕ್ಷರಗಳೂ ಬರುತ್ತಿದ್ದು, ಅವಳದನ್ನು ತನ್ನ ನೋಟ್ ಪುಸ್ತಕದಲ್ಲಿ ಬರೆಯುತ್ತಿದ್ದಳು. ತೊತ್ತೊ-ಚಾನ್‌ಗೆ ಇದೆಲ್ಲಾ ತೀರ ಹೊಸದಾದ್ದರಿಂದ ಸ್ವಲ್ಪ ಹೆದರಿಬಿಟ್ಟಳು. ಏನು ಮಾಡಬೇಕೆಂದು ತಿಳಿಯಲಿಲ್ಲ.

ಅಷ್ಟರಲ್ಲೇ ಹಿಂದಿನ ಸೀಟಿನಿಂದ ಒಬ್ಬ ಹುಡುಗ ಎದ್ದು ತನ್ನ ನೋಟ್ ಪುಸ್ತಕದೊಡನೆ ಅಧ್ಯಾಪಕಿಯತ್ತ ನಡೆದ. ಆಕೆ ಕರಿಹಲಗೆಯ ಪಕ್ಕ ಡೆಸ್ಕೊಂದರಲ್ಲಿ ಕುಳಿತು ಯಾವುದೋ ವಿದ್ಯಾರ್ಥಿಗೆ ಏನೋ ಹೇಳಿಕೊಡುತ್ತಿದ್ದರು. ತೊತ್ತೊ-ಚಾನ್ ಈಗ ಸುತ್ತಲೂ ಮಿಕಿಮಿಕಿ ನೋಡುವುದನ್ನು ಬಿಟ್ಟು ಅಂಗೈಯಲ್ಲಿ ಗದ್ದ ಊರಿ ಆ ಹುಡುಗನನ್ನು ತದೇಕಳಾಗಿ ನೋಡತೊಡಗಿದಳು. ಆ ಹುಡುಗ ನಡೆಯುವಾಗ ಕಾಲನ್ನು ಎಳೆದೆಳೆದು ಹಾಕುತ್ತಿದ್ದನು.

ಅವನು ಪ್ರತಿ ಹೆಜ್ಜೆ ಇಡುವಾಗಲೂ ಅವನ ಇಡೀ ದೇಹ ಜೋಲಾಡುತ್ತಿತ್ತು. ತೊತ್ತೊ-ಚಾನ್‌ಗೆ ಮೊದಲಿಗೆ ಅವನು ಬೇಕೆಂದೇ ಹಾಗೆ ಮಾಡುತ್ತಿರಬಹುದೆಂದುಕೊಂಡಳು. ಆದರೆ ಅವನಿಗೇನೋ ಆಗಿದೆಯೆಂದು ಬಹು ಬೇಗ ಅವಳ ಅರಿವಿಗೆ ಬಂತು.

ಹುಡುಗ ತನ್ನ ಜಾಗಕ್ಕೆ ವಾಪಸ್ಸು ಬರುವಾಗಲೂ ತೊತ್ತೊ-ಚಾನ್ ಅವನನ್ನೇ ನೋಡುತ್ತಿದ್ದಳು. ಹುಡುಗ ಇವಳ ಕಡೆ ನೋಡಿ ನಕ್ಕ. ತೊತ್ತೊ-ಚಾನ್ ತಕ್ಷಣ ಸಾವರಿಸಿಕೊಂಡು ತಾನೂ ನಕ್ಕಳು. ಅವನಿಗೆ ಡೆಸ್ಕಿನಲ್ಲಿ ಕುಳಿತುಕೊಳ್ಳಲು ಬೇರೆ ಮಕ್ಕಳಿಗಿಂತ ಹೆಚ್ಚು ಸಮಯ ಬೇಕಾಯಿತು. ತೊತ್ತೊ-ಚಾನ್ ಹಿಂದಿರುಗಿ ಅವನತ್ತ ನೋಡುತ್ತಾ ಕೇಳಿದಳು "ನೀನೇಕೆ ಹಾಗೆ ನಡೆಯುತ್ತಿಯಾ?" ಅವನು ಮೆಲ್ಲಗೆ ಹೇಳಿದ "ನನಗೆ ಪೋಲಿಯೋ" "ಪೋಲಿಯೋ?" ತೊತ್ತೊ-ಚಾನ್ ಈವರೆಗೆ ಇಂಥದ್ದನ್ನು ಕೇಳಿಯೇ ಇರಲಿಲ್ಲ. "ಹೌದು, ಪೋಲಿಯೋ" ಅವನು ಹೇಳಿದ. "ಬರೀ ನನ್ನ ಕಾಲು ಮಾತ್ರ ಅಲ್ಲ, ಕೈ ಕೂಡ" ಎಂದು ಕೈ ನೀಡಿ ತೋರಿಸಿದ. ತೊತ್ತೊ-ಚಾನ್ ಅವನ ಎಡಗೈಯನ್ನು ನೋಡಿದಳು. ಅವನ ನೀಳವಾದ ಬೆರಳುಗಳು ಮಡಚಿಕೊಂಡಂತಿದ್ದು ಒಂದಕ್ಕೊಂದು ಅಂಟಿಕೊಂಡಂತೆ ಕಾಣುತ್ತಿದ್ದವು.

"ಇದಕ್ಕೆ ಏನೂ ಮಾಡಲಾಗೋಲ್ಲವಾ" ಅವಳು ಕಳಕಳಿಯಿಂದ ಕೇಳಿದಳು.

ಅವನು ಏನೂ ಹೇಳಲಿಲ್ಲ. ಅವಳಿಗೆ ಮುಜುಗರವಾಯಿತು. ತಾನು ಹಾಗೆ ಕೇಳಲೇಬಾರದಾಗಿತ್ತೇನೋ ಎಂದುಕೊಂಡಳು. ಆದರೆ ಆ ಹುಡುಗ ಸ್ವಲ್ಪ ದನಿಯೇರಿಸಿ ಮಿಂಚಿನ ನೋಟ ಬೀರುತ್ತಾ ಹೇಳಿದ, "ನನ್ನ ಹೆಸರು ಯಾಸುಕಿ ಯಾಮಾಮೋತೋ. ನಿನ್ನ ಹೆಸರೇನು ?"

ಅವನು ಅಷ್ಟೊಂದು ಪ್ರಸನ್ನನಾಗಿ ಮಾತಾಡಿದ್ದು ಇವಳಿಗೆ ಖುಷಿಯೆನಿಸಿ ಸ್ಪಷ್ಟ ದನಿಯಲ್ಲಿ ಹೇಳಿದಳು "ನನ್ನ ಹೆಸರು ತೊತ್ತೊ-ಚಾನ್." ಇದು ಯಾಸುಕಿ ಮತ್ತು ತೊತ್ತೊ-ಚಾನ್ ಸ್ನೇಹಿತರಾದ ಕತೆ.

ಬಿಸಿಲು ಏರುತ್ತಿದ್ದಂತೆ ರೈಲುಗಾಡಿಯ ಒಳಗಡೆ ಸೆಖೆಯೆನಿಸಿತು. ಯಾರೋ ಕಿಟಕಿಯನ್ನು ತೆರೆದರು. ವಸಂತದ ಕುಳಿರ್ಗಾಳಿ ಮೆಲ್ಲನೆ ಬೀಸಿ ಚಿಣ್ಣರ ತಲೆಗೂದಲನ್ನು ನವಿರಾಗಿ ಸವರಿತ್ತು. ಹೀಗೆ ತೊಮೊಯೆದಲ್ಲಿ ತೊತ್ತೊ-ಚಾನ್‌ಳ ಮೊದಲ ದಿನ ಪ್ರಾರಂಭವಾಗಿತ್ತು.

## ನೆಲದ ಆಹಾರ ಮತ್ತು ಜಲದ ಆಹಾರ

ಇದೀಗ ಸ್ವಲ್ಪ ನೆಲದ್ದು ಸ್ವಲ್ಪ ಜಲದ್ದು ತಿನಿಸಿರುವ ಊಟದ ಸಮಯ. ಇದಕ್ಕಾಗಿ ತೊತ್ತೊ-ಚಾನ್ ತುಂಬಾ ಕಾತರದಿಂದ ಕಾದಿದ್ದಳು.

ಮಧ್ಯಾಹ್ನದ ಊಟದಲ್ಲಿ ಅನ್ನದ ಜತೆ ಇರಬೇಕಾದ ಸಮತೋಲನ ಆಹಾರ ಕುರಿತು ಹೇಳಲು ಮುಖ್ಯೋಪಾಧ್ಯಾಯರು ಬಳಸುತ್ತಿದ್ದ ನುಡಿಗಟ್ಟು ಇದು. ನಿಮ್ಮ ಮಕ್ಕಳಿಗೆ ಪೌಷ್ಟಿಕ ಸಮತೋಲನ ಆಹಾರ ಕೊಡಿ ಎಂಬ ಕ್ಲೀಷೆಯ ಮಾತಿಗಿಂತ ನಿಮ್ಮ ಮಕ್ಕಳ ಬುತ್ತಿಯಲ್ಲಿ ಸ್ವಲ್ಪ ನೆಲದ್ದು ಸ್ವಲ್ಪ ಜಲದ್ದು ಹಾಕಿ ಕಳಿಸಿ ಎಂದು ಹೇಳುತ್ತಿದ್ದರು.

"ಜಲದ್ದು" ಎಂದರೆ ನೀರಿನಲ್ಲಿ ಸಿಗುವಂತಹ ಮೀನು, ಏಡಿ ಇತ್ಯಾದಿ ಏನೂ ಆಗಬಹುದು. "ನೆಲದ್ದು" ಎಂದರೆ, ನೆಲದ ಮೇಲೆ ಸಿಗುವಂತಹ ತರಕಾರಿ, ದನದ ಮಾಂಸ, ಹಂದಿ ಮಾಂಸ, ಕೋಳಿ ಏನಾದರೂ ಆಗಬಹುದು.

ಅಮ್ಮನಿಗೆ ಇದು ಹಿಡಿಸಿತ್ತು. ಕೇವಲ ಕೆಲವರು ಮಾತ್ರ ಇಷ್ಟೊಂದು ಮಹತ್ವದ್ದನ್ನು ಅಷ್ಟು ಸರಳವಾಗಿ ಹೇಳಬಲ್ಲರು ಎಂದುಕೊಂಡಳು. ಎರಡು ಗುಂಪಿನಿಂದ ಒಂದೊಂದನ್ನು ಆರಿಸಿಕೊಂಡು ಅಡಿಗೆ ಮಾಡುವುದು ಸುಲಭವೆಂದು ಅಮ್ಮನಿಗೆ ಅನ್ನಿಸಿತ್ತು. ಇದಕ್ಕೆ ಅವರು ಹೆಚ್ಚೇನೂ ತಲೆ ಕೆಡಿಸಿಕೊಳ್ಳಬೇಕಾಗಿಲ್ಲವೆಂದು ಮುಖ್ಯೋಪಾಧ್ಯಾಯರು ಹೇಳಿದ್ದರು. ನೆಲದ್ದಕ್ಕೆ ಒಂದು ಆಮ್ಲೆಟ್ಟೋ, ಕಂದಮೂಲಗಳಾದರೂ ಆದೀತು. ಜಲದ್ದಕ್ಕೆ ಒಣಗಿದ ಬೋನೀಟೋ ಹಳುಕುಗಳಾದರೂ ಆದೀತು. ಇನ್ನೂ ಸರಳವೆಂದರೆ ಜಲದ್ದಕ್ಕೆ ಬರೀ ನೋರಿ (ಒಂದು ಬಗೆಯ ಜೊಂಡು) ಮತ್ತು ನೆಲದ್ದಕ್ಕೆ ಕುಂಬಳಕಾಯಿಯಾದರೂ ಆದೀತು.

ತೊತ್ತೊ-ಚಾನ್ ಕುತೂಹಲದಿಂದ ನೋಡುತ್ತಿದ್ದಂತೆಯೇ ಮುಖ್ಯೋಪಾಧ್ಯಾಯರು ಬಂದು ಒಂದೊಂದೇ ಡಬ್ಬಿಗಳನ್ನು ನೋಡತೊಡಗಿದರು.

"ನೆಲದ್ದು ಸ್ವಲ್ಪ, ಜಲದ್ದು ಸ್ವಲ್ಪ ಇದೆಯಾ?" ಎನ್ನುತ್ತಾ ಪ್ರತಿ ಡಬ್ಬಿಯನ್ನೂ ಪರೀಕ್ಷಿಸುತ್ತಾ ಎಲ್ಲರೂ ಎರಡರದ್ದನ್ನೂ ತಂದಿದ್ದಾರೆಂದು ನೋಡುವುದೇ ಅವರಿಗೆ ಆನಂದ.

ಕೆಲವು ಸಾರಿ ತಾಯಂದಿರು ಎಷ್ಟೇ ಪ್ರಯತ್ನಿಸಿದರೂ ನೆಲದ್ದು, ಜಲದ್ದು ಎರಡೂ ಇರುವಂತಹ ಊಟವನ್ನು ಕಳಿಸಲು ಸಾಧ್ಯವಾಗುತ್ತಿರಲಿಲ್ಲ. ಆದರೆ ಅದೇನೂ ದೊಡ್ಡ ವಿಷಯವಲ್ಲ. ಮುಖ್ಯೋಪಾಧ್ಯಾಯರು ಒಬ್ಬೊಬ್ಬರ ಬುತ್ತಿಯನ್ನೂ ಪರೀಕ್ಷಿಸುತ್ತಾ ಹೋದಂತೆ ಅವರ ಹೆಂಡತಿ ಅಡಿಗೆಯವರು ಧರಿಸುವ ಬಟ್ಟೆಯನ್ನು ಕಟ್ಟಿಕೊಂಡು ಎರಡೂ ಕೈಗಳಲ್ಲೂ ಒಂದೊಂದು ದೊಡ್ಡ ಸೌಟುಗಳನ್ನು ಹಿಡಿದು ನಡೆಯುವರು. ಹೆಡ್‌ಮಾಸ್ತರು ಯಾವುದಾದರೂ ಮಗುವಿನ ಮುಂದೆ ನಿಂತು "ಜಲದ್ದು" ಎಂದರೆ, ಆಕೆಯ ಸೌಟಿನಿಂದ ಎರಡು ಬೇಯಿಸಿದ ಚಿಕುವಾ (ಮೀನಿನ ತಿನಿಸು)ಗಳು ಉರುಳುತ್ತವೆ. ಆತ "ನೆಲದ್ದು" ಎಂದರೆ ಇನ್ನೊಂದು ಸೌಟಿನಿಂದ ಆಲೂಗಡ್ಡೆಯ ತಿನಿಸು ಬೀಳುತ್ತದೆ.



ಯಾರಿಗೂ ಇಲ್ಲಿ ತನಗೆ ಅದು ಇಷ್ಟವಿಲ್ಲ, ಇದು ಇಷ್ಟವಿಲ್ಲವೆಂದು ಹೇಳಬೇಕೆನಿಸುವುದೇ ಇಲ್ಲ. ಅವನ ಊಟ ಎಷ್ಟು ರುಚಿ, ಅವಳ ಊಟ ರುಚಿಯೇ ಇಲ್ಲ ಎನ್ನುವುದಕ್ಕೆ ಇಲ್ಲಿ ಆಸ್ಪದ ಇಲ್ಲ. ತಮ್ಮ ಊಟದಲ್ಲಿ ನೆಲದ್ದು, ಜಲದ್ದು ಎರಡೂ ಇದೆ ಎಂದು ಖಚಿತಪಡಿಸಿಕೊಳ್ಳುವುದೇ ಇಲ್ಲಿನ ಕಳಕಳಿ. ಎರಡನ್ನೂ ತಿಂದ ತೃಪ್ತಿಯಿಂದಲೇ ಚೈತನ್ಯ !

ನೆಲದ್ದು, ಜಲದ್ದು ಎನ್ನುವುದು ಅರ್ಥವಾಗುತ್ತಾ ಹೋದಂತೆ ಅಮ್ಮ ಇಂದು ತರಾತುರಿಯಲ್ಲಿ ಕಳಿಸಿದ ಬುತ್ತಿಯಲ್ಲಿ ಎರಡೂ ಇದೆಯಾ ಎಂದು ತೊತ್ತೊ-ಚಾನ್‌ಗೆ ಯೋಚನೆಗಿಟ್ಟುಕೊಂಡಿತು. ಆದರೆ ಬುತ್ತಿಯನ್ನು ಬಿಚ್ಚಿದಾಗ ಬೆರಗಾಗಿಸುವಂಥ ಊಟ ಅಲ್ಲಿತ್ತು.

ತೊತ್ತೊ-ಚಾನ್ ಬುತ್ತಿಯಲ್ಲಿ ಕಡು ಹಳದಿಯ ಹುರಿದ ಮೊಟ್ಟೆ, ಬಟಾಣಿ, ಕಂದು ಬಣ್ಣದ ಡೆನೆಬು ಮತ್ತು ಕಡು ಗುಲಾಬಿಯ ಹುರಿದ ಮೀನಿನ ಹಳಕುಗಳಿದ್ದವು. ಅದೊಂದು ಹೂ ತೋಟದಂತೆ ವರ್ಣಮಯವಾಗಿತ್ತು.

"ಎಂತಹ ಒಳ್ಳೆ ಊಟ !" ಮುಖ್ಯೋಪಾಧ್ಯಾಯರೆಂದರು.

"ಅಮ್ಮ ತುಂಬಾ ಚೆನ್ನಾಗಿ ಅಡಿಗೆ ಮಾಡ್ತಾಳೆ" ಎಂದಳು ಹರ್ಷದಿಂದ ತೊತ್ತೊ-ಚಾನ್.

"ಹೌದು ಹೌದಲ್ಲಾ ?" ಮುಖ್ಯೋಪಾಧ್ಯಾಯರೆಂದರು. ಮತ್ತೆ ಡೆನೆಬುನತ್ತ ಕೈ ಮಾಡಿ ತೋರಿಸುತ್ತಾ ಕೇಳಿದರು "ಇದೇನು ? ಇದು ನೆಲದ್ದೋ ಜಲದ್ದೋ ?" ಯಾವುದು ಸರಿ ಎಂದು ತೊತ್ತೊ-ಚಾನ್ ಯೋಚಿಸತೊಡಗಿದಳು. ಅದು ಮಣ್ಣಿನ ಬಣ್ಣದಲ್ಲಿತ್ತು. ಆದ್ದರಿಂದ ಅದು ನೆಲದ್ದೇ ಇರಬೇಕೆಂದುಕೊಂಡಳು. ಆದರೆ ಸರಿಯಾಗಿ ತಿಳಿಯದು.

"ನನಗೆ ಗೊತ್ತಿಲ್ಲ" ಎಂದಳು.

ಆಗ ಮುಖ್ಯೋಪಾಧ್ಯಾಯರು ಎಲ್ಲ ಮಕ್ಕಳನ್ನೂ ಉದ್ದೇಶಿಸಿ ಕೇಳಿದರು: "ಮಕ್ಕಳಾ, ಡೆನೆಬು ನೆಲದ್ದೋ, ಜಲದ್ದೋ ಹೇಳಿ ನೋಡೋಣ" ಕೆಲವರು ನೆಲದ್ದೆಂದರೆ ಇನ್ನು ಕೆಲವರು ಜಲದ್ದೆಂದರು. ಯಾರಿಗೂ ಖಾತ್ರಿಯಿರಲಿಲ್ಲ.

"ಸರಿ ನಾನೇ ಹೇಳುತ್ತೇನೆ; ಡೆನೆಬು ಜಲದ್ದು"

"ಅದೇಕೆ ?" ದಪ್ಪಗಿದ್ದ ಹುಡುಗನೊಬ್ಬ ಪ್ರಶ್ನಿಸಿದ.

ಡೆಸ್ಕುಗಳ ವರ್ತುಲದ ಮಧ್ಯೆ ನಿಂತು ಮುಖ್ಯೋಪಾಧ್ಯಾಯರು ವಿವರಿಸತೊಡಗಿದರು, "ಡೆನೆಬು ಮೀನಿಂದ ತಯಾರಿಸುವ ತಿನಿಸು. ಬೇಯಿಸಿದ ಮೀನಿನ ಮಾಂಸವನ್ನು ಮುಳ್ಳಿನಿಂದ ಬಿಡಿಸಿ ಸಣ್ಣಗೆ ಚೂರು ಮಾಡಿ ಸುಮಾರಾಗಿ ಹುರಿದು, ಒಣಗಿಸಿ ಮಸಾಲೆ ಹಚ್ಚುತ್ತಾರೆ."

"ಓಹೋ" ಮಕ್ಕಳಿಗೆಲ್ಲ ಇಷ್ಟವಾಯಿತು. "ನಾವು ತೊತ್ತೊ-ಚಾನ್ ತಂದಿರುವ ಡೆನೆಬು ನೋಡಬಹುದಾ ?" ಎಂದು ಯಾರೋ ಕೇಳಿದರು.

"ಖಂಡಿತ" ಮುಖ್ಯೋಪಾಧ್ಯಾಯರೆಂದರು. ಡೆನೆಬು ನೋಡಲು ಎಲ್ಲರೂ ತೊತ್ತೊ-ಚಾನ್ ಸುತ್ತಲೂ ಮುತ್ತಿಕೊಂಡರು. ಅನೇಕ ಮಕ್ಕಳಿಗೆ ಡೆನೆಬು ತಿಂದು

ಗೊತ್ತಿತ್ತು. ಆದರೂ ತೊತ್ತೊ-ಚಾನ್ ತಂದಿರುವ ಡೆನೆಬು ತಮ್ಮ ಮನೆಯಲ್ಲಿ ಮಾಡುವುದಕ್ಕಿಂತ ಸ್ವಲ್ಪವಾದರೂ ಬೇರೆಯಾಗಿರಬಹುದಲ್ಲ ಎಂಬ ಉತ್ಸುಕತೆ. ಹೀಗಾಗಿ ಕೆಲವರಂತೂ ಅದನ್ನು ಮೂಸಿ ನೋಡತೊಡಗಿದರು. ಕೆಲವರಂತೂ ಎಷ್ಟು ಜೋರಾಗಿ ಮೂಸುತ್ತಿದ್ದರೆಂದರೆ ಕೆಲವು ತುಂಡುಗಳು ಹಾರಿ ಹೋಗುವ ಸಾಧ್ಯತೆ ಇತ್ತು!

ತೊತ್ತೊ-ಚಾನ್ ಅಂದಿನ ಊಟದ ಬಗ್ಗೆ ಸ್ವಲ್ಪ ಹೆದರಿಕೊಂಡೇ ಇದ್ದಳು. ಆದರೆ ಅದು ವಿನೋದವಾಗಿಯೇ ಕಳೆದುಹೋಗಿತ್ತು. ಅಮ್ಮ ಮಾಡಿದ ಅಡಿಗೆಯಲ್ಲಿ, ನೆಲದ್ದು, ಜಲದ್ದು ಎರಡೂ ಇದ್ದು ಮುಖ್ಯೋಪಾಧ್ಯಾಯರಿಗೆ ಅದು ಮೆಚ್ಚಿಗೆಯಾಯಿತಲ್ಲ ಎಂದು ಅವಳಿಗೆ ಸಂತೋಷವಾಗಿತ್ತು.

ತೊತ್ತೊ-ಚಾನ್‌ಗೆ ಅಮ್ಮ ಮಾಡಿದ್ದ ಅಡಿಗೆ ಹಿಂದೆಂದಿಗಿಂತಲೂ ಅಂದು ಹೆಚ್ಚು ರುಚಿಯಾಗಿದೆ ಎನಿಸಿತು.

## "ಚೆನ್ನಾಗಿ ಅಗಿಯಬೇಕು !"

ಸಾಮಾನ್ಯವಾಗಿ ಊಟಕ್ಕೆ ಮೊದಲು 'ಇತಾದಾಕಿಮಾಸು' (ಇವತ್ತಿನ ಊಟಕ್ಕೆ ಋಣಿಯಾಗಿರುವೆ) ಎಂದು ಹೇಳಿ ಪ್ರಾರಂಭಿಸುವುದು ವಾಡಿಕೆ. ಆದರೆ ತೊಮೊಯೆದಲ್ಲಿ ಅದು ಸ್ವಲ್ಪ ಭಿನ್ನವಾಗಿತ್ತು. ಅಲ್ಲಿ ಊಟಕ್ಕೆ ಮೊದಲು ಎಲ್ಲರೂ ಹಾಡುವರು. ಮುಖ್ಯೋಪಾಧ್ಯಾಯರಿಗೇ ಸಂಗೀತ ಗೊತ್ತಿದ್ದು ಊಟಕ್ಕೆ ಮೊದಲು ಹಾಡುವ ಹಾಡನ್ನು ಅವರೇ ರಚಿಸಿದ್ದರು. ಅವರು ತಾವು ರಚಿಸಿದ ಸಾಲುಗಳನ್ನು ಪ್ರಸಿದ್ಧ ಜಾನಪದ ಗೀತೆಯೊಂದರ ರಾಗಕ್ಕೆ ಹೊಂದಿಸಿದ್ದರು. ಅದರ ಸಾಲುಗಳು ಹೀಗಿದ್ದವು:

ಅಗಿಯಿರಿ, ಅಗಿಯಿರಿ, ಚೆನ್ನಾಗಿ ಅಗಿಯಿರಿ
ಏನನ್ನೇ ತಿನ್ನಿರಿ, ಚೆನ್ನಾಗಿ ಅಗಿಯಿರಿ;
ಅಗಿಯಿರಿ, ಅಗಿಯಿರಿ, ಚೆನ್ನಾಗಿ ಅಗಿಯಿರಿ
ಅನ್ನ, ಮೀನು, ಮಾಂಸ ಅದೇನೇ ಇರಲಿ!

ಹಾಡು ಮುಗಿದ ನಂತರ ಮಕ್ಕಳೆಲ್ಲ 'ಇತಾದಾಕಿಮಾಸು' ಹೇಳುವರು. "ರೋ ರೋ ರೋ ಯುವರ್ ಬೋಟ್" ರಾಗಕ್ಕೆ ಸರಿಯಾಗಿ ಹೊಂದಿಕೊಳ್ಳುತ್ತಿದ್ದ ಈ ಹಾಡಿಗೆ ಸಂಪೂರ್ಣ ಮನಸೋತಿದ್ದ ಮಕ್ಕಳು ಅನೇಕ ವರ್ಷಗಳವರೆಗೂ ಇದೇ ವಾಡಿಕೆಯ ಊಟದ ಹಾಡು ಎಂದು ನಂಬಿದ್ದರು.

ಮುಖ್ಯೋಪಾಧ್ಯಾಯರು ಹೀಗೆ ಹಾಡಿಸಲು ಕಾರಣ ಅವರಿಗೆ ಕೆಲವು ಹಲ್ಲುಗಳು ಇರದೇ ಹೋದದ್ದೇ ಇರಬೇಕು. ಅದೇನೇ ಇರಲಿ, ಆತ ಮಕ್ಕಳಿಗೆ ಯಾವಾಗಲೂ ಊಟವನ್ನು ಆದಷ್ಟು ನಿಧಾನಕ್ಕೆ ಹರಟೆಕೊಚ್ಚಲು ಬೇಕಾದಷ್ಟು ಸಮಯವನ್ನು ತೆಗೆದುಕೊಂಡು ಮಾಡಿರೆಂದೇ ಹೇಳುತ್ತಿದ್ದರು. ಇದನ್ನು ಮಕ್ಕಳಿಗೆ ಜ್ಞಾಪಿಸಲೆಂದೇ ಈ ಹಾಡನ್ನು ಹಾಡಿಸುತ್ತಿದ್ದಿರಬೇಕು.

ಮಕ್ಕಳು ಏರು ದನಿಯಲ್ಲಿ ಹಾಡಿದ ನಂತರ 'ಇತಾದಾಕಿಮಾಸು' ಹೇಳಿ, ತಾವು ತಂದಿರುವ, ನೆಲದ್ದು, ಜಲದ್ದು ತಿನ್ನಲು ತಯಾರಾಗುವರು.

ಒಂದು ಕ್ಷಣ ಸಭಾಂಗಣದ ತುಂಬಾ ಬರೀ ಮೌನ.

## ತಿರುಗಾಟ

ಊಟದ ನಂತರ ತೊತ್ತೊ-ಚಾನ್ ಬೇರೆ ಮಕ್ಕಳ ಸಂಗಡ ಆಟದ ಮೈದಾನದಲ್ಲಿ ಸ್ವಲ್ಪ ಹೊತ್ತು ಆಡುತ್ತಿದ್ದಳು. ನಂತರ ಮಕ್ಕಳೆಲ್ಲಾ ತರಗತಿಗೆ ಮರಳಿದರು. ಬೆಳಿಗ್ಗೆ ಇದ್ದ ಅಧ್ಯಾಪಕಿಯೇ ಅಲ್ಲಿ ಅವರಿಗಾಗಿ ಕಾಯುತ್ತಿದ್ದರು.

"ನೀವೆಲ್ಲಾ ಬೆಳಿಗ್ಗೆ ಕಷ್ಟಪಟ್ಟು ಕೆಲಸ ಮಾಡಿದ್ದೀರಿ" ಆಕೆ ಹೇಳಿದಳು.

"ಈಗ ಏನು ಮಾಡೋಣ."

ತೊತ್ತೊ-ಚಾನ್ ಈಗೇನು ಮಾಡುವುದಪ್ಪ? ಎಂದು ಯೋಚಿಸುತ್ತಿರುವಂತೆಯೇ ಮಕ್ಕಳೆಲ್ಲಾ ಒಂದೇ ಸ್ವರದಿಂದ ಕೂಗಿಕೊಂಡರು.

"ವಾಕಿಂಗ್"

"ಸರಿ ನಡೀರಿ" ಎಂದು ಅಧ್ಯಾಪಕಿ ಹೇಳುತ್ತಿದ್ದಂತೆಯೇ ಮಕ್ಕಳೆಲ್ಲ ಒಬ್ಬರನ್ನೊಬ್ಬರು ತಳ್ಳಿಕೊಂಡೇ ಹೊರನಡೆದರು. ತೊತ್ತೊ-ಚಾನ್ ರಾಕಿಯ ಸಂಗಡ, ತಂದೆಯ ಜೊತೆ ವಾಕಿಂಗ್ ಹೋಗುತ್ತಿದ್ದುದುಂಟು. ಆದರೆ ಶಾಲೆಯಲ್ಲಿ ವಾಕಿಂಗ್ ಹೋಗುವುದನ್ನು ಅವಳು ಕೇಳಿರಲಿಲ್ಲ. ಆದರೆ ವಾಕಿಂಗೆಂದರೆ ಅವಳಿಗೆ ಪ್ರಾಣ. ಹೀಗಾಗಿ ಕಾಯಲಾರದೆ ಚಡಪಡಿಸತೊಡಗಿದಳು.

ಬೆಳಿಗ್ಗೆ ಪಟ್ಟಿ ಮಾಡಿದ ಎಲ್ಲವನ್ನೂ ಮಾಡಿ ಮುಗಿಸಿದರೆ ಮಧ್ಯಾಹ್ನದ ಹೊತ್ತು ಹೀಗೆ ಅವರು ವಾಕಿಂಗ್ ಹೋಗಬಹುದಾಗಿತ್ತು. ಇದು ಒಂದರಿಂದ ಆರನೇ ತರಗತಿವರೆಗೆ ಎಲ್ಲ ಮಕ್ಕಳಿಗೂ ಅನ್ವಯಿಸುತ್ತಿತ್ತು.

ಒಂದನೇ ತರಗತಿಯ ಎಲ್ಲ ಒಂಭತ್ತು ಮಕ್ಕಳು ಗೇಟು ದಾಟಿ ಹೊರನಡೆಯತೊಡಗಿದರು. ಅಧ್ಯಾಪಕಿಯನ್ನು ಸುತ್ತುವರಿದುಕೊಂಡು, ಪಕ್ಕದಲ್ಲಿ ಹರಿಯುವ ತೊರೆ ಉದ್ದಕ್ಕೂ ಅವರು ನಡೆದರು. ತೊರೆಯ ಎರಡೂ ಪಕ್ಕಗಳಲ್ಲೂ ಚೆರ್ರಿ ಮರಗಳು ಇದ್ದು ಹೂ ಬಿಡಲು ಪ್ರಾರಂಭಿಸಿದ್ದವು. ಕಣ್ಣು ಹಾಯಿಸಿದಷ್ಟು ದೂರವೂ ಹಳದಿ ಬಣ್ಣದ ಸಾಸಿವೆಯ ಹೊಲಗಳೇ. ಇತ್ತೀಚೆಗೆ ಆ ತೊರೆಗಳು ಮಾಯವಾಗಿ ಅಪಾರ್ಟ್‌ಮೆಂಟುಗಳು ಅಲ್ಲಿ ತಲೆ ಎತ್ತಿವೆ. ಆ ಸಮಯದಲ್ಲಿ ಜಿಯುಗಾವೋಕ ಸಾಮಾನ್ಯವಾಗಿ ಹೊಲಗಳಿಂದಲೇ ತುಂಬಿತ್ತು.

"ನಾವು ಕುಹೋನಬುತ್ಸು ದೇವಸ್ಥಾನದವರೆಗೂ ಹೋಗೋಣವೇ?" ಬೆಳಿಗ್ಗೆ ತೊತ್ತೊ-ಚಾನ್ ಬಳಿಕ ಬಂದಿದ್ದ ಹುಡುಗಿ ಕೇಳಿದಳು. ಅವಳ ಹೆಸರು ಸಾಕ್ಕೊ-ಚಾನ್.

"ಹೋದ ಸಲ ಬಂದಿದ್ದಾಗ ಅಲ್ಲಿ ಕೊಳದ ಹತ್ತಿರ ನಾವು ಹಾವು ನೋಡಿದೆವು" ಸಾಕ್ಕೊ-ಚಾನ್ ಹೇಳಿದಳು. "ದೇವಸ್ಥಾನದಲ್ಲಿ ಒಂದು ಹಳೇ ಬಾವಿ ಇದೆ. ಒಂದು

ಸಾರಿ ಅದರೊಳಗೆ ಒಂದು ನಕ್ಷತ್ರ ಬಂದು ಬಿತ್ತಂತೆ."

ಮಕ್ಕಳು ಇಷ್ಟ ಬಂದಂತೆ ಹರಟುತ್ತಾ ನಡೆಯತೊಡಗಿದರು. ಆಕಾಶ ತಿಳಿಯಾಗಿದ್ದು, ಚಿಟ್ಟೆಗಳು ತಮ್ಮ ಬಣ್ಣಬಣ್ಣದ ರೆಕ್ಕೆಗಳನ್ನು ಬಡಿಯುತ್ತಾ ಹಾರಾಡುತ್ತಿದ್ದುವು.

ಹತ್ತು ನಿಮಿಷ ನಡೆದ ನಂತರ ಅಧ್ಯಾಪಕಿ ನಿಂತರು. ಆಕೆ ಕೆಲವು ಹಳದಿ ಹೂವುಗಳನ್ನು ತೋರಿಸುತ್ತಾ ಹೇಳಿದರು "ಈ ಸಾಸಿವೆ ಹೂಗಳನ್ನು ನೋಡಿ, ಹೂಗಳು ಏಕೆ ಅರಳುತ್ತವೆಂದು ನಿಮಗೆ ಗೊತ್ತಾ?" ಆಕೆ ಹೂವೆಡೆಗೆ ಬಾಗಿ ಶಲಾಕೆ, ಕೇಸರಗಳು ಬಗ್ಗೆ ವಿವರಿಸುತ್ತಿದ್ದಂತೆ ಮಕ್ಕಳೆಲ್ಲಾ ಕುಕ್ಕರುಗಾಲಲ್ಲಿ ಕೂತು ಹೂವುಗಳನ್ನು ಪರೀಕ್ಷಿಸತೊಡಗಿದರು. ಚಿಟ್ಟೆಗಳು ಹೂವರಳಲು ಹೇಗೆ ಸಹಾಯಕವೆಂಬುದನ್ನೂ ಅಧ್ಯಾಪಕಿ ವಿವರಿಸಿದರು. ಚಿಟ್ಟೆಗಳು ಹೂವಿಂದ ಹೂವಿಗೆ ಹಾರಾಡಿಕೊಂಡಿದ್ದವು. ಅಧ್ಯಾಪಕಿ ಎದ್ದು ನಿಂತಾಗ ಮಕ್ಕಳೆಲ್ಲಾ ಹೂವುಗಳನ್ನು ಪರೀಕ್ಷಿಸುವುದನ್ನು ನಿಲ್ಲಿಸಿ ತಾವೂ ಎದ್ದು ನಿಂತರು. ಯಾರೋ ಅಂದರು "ಅವು ಶಲಾಕೆಗಳಂತೆ ಕಾಣುತ್ತಿಲ್ಲ, ಅಲ್ಲಾ?"

ತೊತ್ತೊ-ಚಾನ್‌ಗೂ ಹಾಗೆಯೇ ಅನ್ನಿಸಿತ್ತು. ಆದರೆ ಬೇರೆ ಮಕ್ಕಳಂತೆ ಶಲಾಕೆ, ಕೇಸರಗಳೆರಡೂ ಹೂವಿಗೆ ಬಹು ಮುಖ್ಯ ಎಂಬುದೇನೋ ಅವಳಿಗೆ ಗೊತ್ತಿತ್ತು.

ಅವರು ಇನ್ನೂ ಹತ್ತು ನಿಮಿಷಗಳು ನಡೆಯುತ್ತಿದ್ದಂತೆ ದಟ್ಟವಾದ ಮರಗಳು ಕಾಣಿಸಿದವು. ಅವುಗಳ ಮಧ್ಯೆ ಕುಹೋನಬುತ್ಸು ಎನ್ನುವ ದೇವಸ್ಥಾನ ಇತ್ತು. ಅಲ್ಲಿಗೆ ತಲುಪುತ್ತಿದ್ದಂತೆಯೇ ಮಕ್ಕಳೆಲ್ಲಾ ಬೇರೆಬೇರೆ ಕಡೆಗೆ ಚೆಲ್ಲಾಪಿಲ್ಲಿಯಾದರು.

"ನಕ್ಷತ್ರ, ಬಿದ್ದ ಬಾವೀನ ನೋಡ್ತೀಯ?" ಸಾಕ್ಯೋ-ಚಾನ್ ಕೇಳಿದಾಗ ತೊತ್ತೊ-ಚಾನ್ ಸಹಜವಾಗಿಯೇ ಒಪ್ಪಿಕೊಂಡು, ಅವಳ ಹಿಂದೆ ಓಡಿದಳು.

ಬಾವಿ ಕಲ್ಲಿನಿಂದ ಕಟ್ಟಿದಂತೆ ಕಾಣುತ್ತಿದ್ದು ಎದೆಯೆತ್ತರದ ಕಟ್ಟೆ ಇತ್ತು. ಅದಕ್ಕೆ ಮರದ ಹಲಗೆಗಳನ್ನು ಮುಚ್ಚಲಾಗಿತ್ತು. ಇವರಿಬ್ಬರೂ ಮರದ ಹಲಗೆಯನ್ನು ಜರುಗಿಸಿ ಒಳಗಿಣುಕಿದರು. ಅದು ಕತ್ತಲೆಯಿಂದ ಗವ್ವೆನ್ನುತ್ತಿತ್ತು. ತೊತ್ತೊ-ಚಾನ್‌ಗೆ ದೊಡ್ಡ ಸಿಮೆಂಟ್ ಕಲ್ಲಿನಂಥ ಆಕೃತಿಯಂತಹದ್ದೇನೋ ಕಂಡಿತೇ ವಿನಃ ಅವಳು ಊಹಿಸಿಕೊಂಡ ಮಿನುಗುವ ನಕ್ಷತ್ರವನ್ನು ಹೋಲುವಂಥದ್ದು ಕಾಣಲೇ ಇಲ್ಲ. ತುಂಬಾ ಹೊತ್ತು ದಿಟ್ಟಿಸಿ ನೋಡಿದ ನಂತರ ಕೇಳಿದಳು. "ನೀನು ನಕ್ಷತ್ರ ನೋಡಿದ್ದೀಯಾ?"

"ಇಲ್ಲಾಪ್ಪ" ಸಾಕ್ಯೋ-ಚಾನ್ ತಲೆಯಲ್ಲಾಡಿಸಿದಳು.

ನಕ್ಷತ್ರವೇಕೆ ಹೊಳೆಯುತ್ತಿಲ್ಲವೋ? ಎಂದುಕೊಂಡ ತೊತ್ತೊ-ಚಾನ್ ತುಂಬಾ ಯೋಚಿಸಿ ಹೇಳಿದಳು. "ನಕ್ಷತ್ರ ನಿದ್ದೆ ಮಾಡ್ತಾ ಇದೆಯೋ ಏನೋ?"

ತನ್ನ ದುಂಡು ಕಣ್ಣುಗಳನ್ನು ಅರಳಿಸುತ್ತಾ ಸಾಕ್ಯೋ-ಚಾನ್ ಕೇಳಿದಳು "ನಕ್ಷತ್ರಗಳೂ ನಿದ್ದೆ ಮಾಡ್ತಾವಾ?"

"ಹಗಲಿನಲ್ಲಿ ನಿದ್ದೆ ಮಾಡಿ, ರಾತ್ರಿ ಹೊತ್ತು ಎದ್ದು ಮಿನುಗುತ್ತವೋ ಏನೋ?" ತೊತ್ತೊ-ಚಾನ್ ಅನುಮಾನದಿಂದ ತನ್ನ ಊಹೆಯನ್ನು ಮುಂದಿಟ್ಟಳು.

ಈಗ ಮಕ್ಕಳೆಲ್ಲ ಕೂಡಿಕೊಂಡು ದೇವಸ್ಥಾನದ ಸುತ್ತಲೂ ಓಡಾಡತೊಡಗಿದರು. ದೇವಸ್ಥಾನದ ಪ್ರವೇಶದಲ್ಲಿ ಕಾವಲು ಕಾಯುತ್ತಿರುವ ಬೆತ್ತಲೆ ಹೊಟ್ಟೆಯ ಎರಡು ದೇವದೂತರ ವಿಗ್ರಹಗಳನ್ನು ನೋಡಿ ನಕ್ಕರು. ದೇವಸ್ಥಾನದ ಒಳಗಡೆ ಅರೆಗತ್ತಲಿನಲ್ಲಿ ನಿಂತಿದ್ದ ಬುದ್ಧನ ಪ್ರತಿಮೆಯನ್ನು ಅಚ್ಚರಿಯಿಂದ ನೋಡಿದರು. ನೆಲದ ಮೇಲೆ ಮೂಡಿದ್ದ, ಟೆಂಗು ಎಂಬ ಉದ್ದ ಮೂಗಿನ ಬೇತಾಳದ ಪಾದದ ಗುರುತಿನ ಮೇಲೆ ತಮ್ಮ ಪಾದಗಳನ್ನು ಇಟ್ಟರು. ಕೊಳದಲ್ಲಿ ದೋಣಿ ವಿಹಾರ ಮಾಡುತ್ತಿದ್ದ ಜನರತ್ತ ಕೂಗಿ ಕರೆದರು. ಅಲ್ಲೇ ಗುಂಪುಗುಂಪಾಗಿ ತಮಗಿಷ್ಟವಾದ ಆಟಗಳನ್ನು ಆಡತೊಡಗಿದರು. ಇದೆಲ್ಲವೂ ತೊತ್ತೊ-ಚಾನ್‌ಳಿಗೆ ತುಂಬಾ ಹೊಸತು, ಅಪೂರ್ವವಾಗಿತ್ತು. ಪ್ರತಿಯೊಂದು ಹೊಸ ಅನುಭವವನ್ನು ಅವಳು ಮನಸಾರೆ ಸ್ವಾಗತಿಸಿದಳು. ಆನಂದದಿಂದ ಅನುಭವಿಸಿದಳು.

ಸೂರ್ಯ ಮುಳುಗುವ ಸಮಯವಾದ ಹಾಗೆ "ನಾವಿನ್ನು ಹೋಗೋಣ" ಎಂದು ಅಧ್ಯಾಪಕಿ ಎಚ್ಚರಿಸಿದಳು. ಮಕ್ಕಳೆಲ್ಲ ಸಾಸಿವೆ ಹೊಲದ ದಿಬ್ಬದಲ್ಲಿ ಶಾಲೆಯೆಡೆಗೆ ನಡೆಯತೊಡಗಿದರು.

ಸ್ವಚ್ಛಂದವಾಗಿ ಆನಂದಪಡುವ ತಿರುಗಾಟ ತಮಗೆ ವಿಜ್ಞಾನ, ಚರಿತ್ರೆ, ಜೀವಶಾಸ್ತ್ರಗಳಲ್ಲಿನ ಅತ್ಯಮೂಲ್ಯ ಪಾಠಗಳನ್ನು ಕಲಿಸುತ್ತವೆಂಬುದು ಮಕ್ಕಳ ಅರಿವಿಗೆ ಅಂದು ಖಂಡಿತ ಬರುವಂತಿರಲಿಲ್ಲ.

ತೊತ್ತೊ-ಚಾನ್‌ಗೀಗ ತರಗತಿಯ ಎಲ್ಲಾ ಮಕ್ಕಳೂ ಪರಿಚಯವಾಗಿದ್ದರು. ಅವರೆಲ್ಲ ತನ್ನ ತುಂಬಾ ಹಳೆಯ ಸ್ನೇಹಿತರೆನಿಸತೊಡಗಿದರು.

"ನಾಳೇನೂ ವಾಕಿಂಗ್ ಹೋಗೋಣ ಅಲ್ವಾ" ಹಿಂದಿರುಗಿ ಬರುವಾಗ ತೊತ್ತೊ-ಚಾನ್ ಎಲ್ಲರನ್ನೂ ಉದ್ದೇಶಿಸಿ ಹೇಳಿದಳು.

"ಓಹೋ, ಖಂಡಿತಾ ಹೋಗೋಣ" ಅವರೆಲ್ಲಾ ಕುಣಿದಾಡಿದರು. ಚಿಟ್ಟೆಗಳು ಇನ್ನೂ ತಮ್ಮ ಕೆಲಸದಲ್ಲಿ ತನ್ಮಯವಾಗಿ ಹಾರಾಡುತ್ತಿದ್ದವು. ಹಕ್ಕಿಗಳ ಕಲರವ ಕೇಳಿಬರುತ್ತಿತ್ತು. ತೊತ್ತೊ-ಚಾನ್ ಹೃದಯ ಆನಂದದಿಂದ ಬಿರಿಯುವಂತಾಗಿತ್ತು.

## ಶಾಲೆಯ ಹಾಡು

ತೊತ್ತೊ-ಚಾನ್‌ಗೆ ತೊಮೊಯೆದ ಪ್ರತಿಯೊಂದೂ ವಿಸ್ಮಯವೇ. ನಾಳೆ ಎಷ್ಟು ಹೊತ್ತಿಗೆ ಬೆಳಗಾದೀತೋ, ಯಾವಾಗ ಶಾಲೆಗೆ ಬಂದೇನೋ ಎಂದೇ ಯೋಚಿಸುವಳು. ಪ್ರತಿದಿನ ಮನೆ ತಲುಪಿದ್ದೇ ತಡ ಅಮ್ಮ-ಅಪ್ಪ ರಾಕಿಗೆ ಶಾಲೆಯ ಆ ದಿನದ ವಿಸ್ಮಯಗಳನ್ನು ವಿವರಿಸಿದ್ದೇ ವಿವರಿಸಿದ್ದು. ಅಮ್ಮ ಕೊನೆಗೆ "ಸಾಕಮ್ಮ ಇನ್ನು ಸ್ವಲ್ಪ ತಿಂಡಿ ತಿನ್ನು" ಎಂದು ಒತ್ತಾಯಿಸಬೇಕಾಗುತ್ತಿತ್ತು. ದಿನೇ ದಿನೇ ತೊತ್ತೊ-ಚಾನ್ ಹೊಸ ಶಾಲೆಗೆ ಹಳಬಳಾಗುತ್ತಾ ಹೋಗುತ್ತಿದ್ದರೂ ಅದರ ಬಗ್ಗೆ ಹೇಳುವುದಂತೂ ಬೆಟ್ಟದಷ್ಟಿರುತ್ತಿತ್ತು. ಅಮ್ಮನಿಗೂ ಹೊಸ ಶಾಲೆಯ ಬಗ್ಗೆ ಕೇಳುವುದು ಇಷ್ಟವೇ.

ಒಂದು ದಿನ ತೊತ್ತೊ-ಚಾನ್ ರೈಲಿನಲ್ಲಿ ಶಾಲೆಗೆ ಹೋಗುತ್ತಿದ್ದಾಗ, ಇದ್ದಕ್ಕಿದ್ದಂತೆ

ತೊಮೊಯೆದಲ್ಲಿ ಅಂದು ಶಾಲೆಯ ಹಾಡು ಇದೆಯೇ ಎಂದು ಯೋಚಿಸತೊಡಗಿದಳು. ಈ ಯೋಚನೆ ಅವಳನ್ನು ಕಾಡತೊಡಗಿ ಶಾಲೆ ತಲುಪುವವರೆಗೆ ಚಡಪಡಿಸಿ ಹೋದಳು. ಇನ್ನೂ ಇಳಿಯಲು ಎರಡು ನಿಲ್ದಾಣಗಳಿದ್ದರೂ ಹೊರಜಿಗಿಯುವವಳಂತೆ ತಯಾರಾಗಿ ನಿಂತುಕೊಂಡಳು. ರೈಲಿಗೆ ಹತ್ತಿದ ಮಹಿಳೆಯೊಬ್ಬಳು ಈ ಪುಟ್ಟಿ ಇನ್ನೇನು ಇಳಿಯುವವಳೇನೋ ಅಂದುಕೊಂಡಳು. ಅವಳು ಇಳಿಯದೆ ಓಟದ ಸ್ಪರ್ಧೆಯಲ್ಲಿ ಸೀಟಿ ಸದ್ದಿಗಾಗಿ ಕಾಯುತ್ತಿರುವಂತೆ ನಿಂತಿರುವುದನ್ನು ಕಂಡು ಆಶ್ಚರ್ಯಗೊಂಡು ಆಕೆ "ಈ ಹುಡುಗಿಗೇನಾಗಿದೆ ?" ಎಂದು ತನ್ನಷ್ಟಕ್ಕೇ ವಟಗುಟ್ಟಿಕೊಂಡಳು.

ನಿಲ್ದಾಣ ಬರುತ್ತಿದ್ದಂತೆಯೇ ರೈಲು ಪೂರ್ತಿ ನಿಲ್ಲುವ ಮೊದಲೇ ತೊತ್ತೊ-ಚಾನ್ ಚಂಗನೆ ಹೊರ ಜಿಗಿದಳು. ತರುಣ ಕಂಡಕ್ಟರ್ "ಜಿಯುಗಾವೋಕ" ಎಂದು ಕೂಗುತ್ತಿದ್ದ. ತೊತ್ತೊ-ಚಾನ್ ಆಗಲೇ ಹೊರಕ್ಕೆ ಹೋಗಿದ್ದಳು. ರೈಲುಗಾಡಿ ತರಗತಿಯನ್ನು ಪ್ರವೇಶಿಸುತ್ತಿದ್ದಂತೆಯೇ ಮೊದಲೇ ಬಂದಿದ್ದ ತಾಯಿಜಿ ಯಾಮಾನೌಚಿಯನ್ನು ಕೇಳಿದಳು, "ತಾಯಿ-ಚಾನ್ ಇಂದು ಶಾಲೆಯ ಹಾಡು ಇದೆಯೇ ?"

ವಿಜ್ಞಾನದಲ್ಲೇ ಯಾವಾಗಲೂ ಆಸಕ್ತನಾಗಿರುತ್ತಿದ್ದ ತಾಯಿ-ಚಾನ್ ಸ್ವಲ್ಪ ಯೋಚಿಸಿ ಹೇಳಿದ, "ಇಲ್ಲ ಅಂತ ಕಾಣುತ್ತೆ."

"ಓಹೋ" ತೊತ್ತೊ-ಚಾನ್ ಯೋಚನೆಗಿಟ್ಟುಕೊಂಡವಳಂತೆ ಕಂಡಳು. "ನಮ್ಮ ಹಳೇ ಶಾಲೆಯಲ್ಲಿ ತುಂಬಾ ಒಳ್ಳೆ ಹಾಡು ಇತ್ತು." ಅವನು ಕೇಳಿಸಿಕೊಂಡನೋ ಇಲ್ಲವೋ ಇವಳು ದನಿಯೇರಿಸಿ ಹಾಡತೊಡಗಿದಳು.

"ಸೆನ್‌ಜೋಕು ಕೊಳ ಆಳವಿಲ್ಲವಾದರೇನು
ತಿಳಿವಿನ ಆಳ ಅಪಾರ !"

ಅವಳು ಹಳೆ ಶಾಲೆಗೆ ಹೋದದ್ದು ಕೆಲವೇ ದಿನಗಳಾದರೂ ತೊತ್ತೊ-ಚಾನ್‌ಗೆ ಹಾಡು ಪೂರ್ತಿ ನೆನಪಿತ್ತು.

ತಾಯಿ-ಚಾನ್‌ನಿಗೆ ಹಾಡು ಹಿಡಿಸಿದಂತೆ ಕಂಡಿತು. ಇಷ್ಟರಲ್ಲಿ ಒಬ್ಬೊಬ್ಬರಾಗೇ ಒಳಬಂದಿದ್ದ ಮಕ್ಕಳಿಗೂ ಹಾಡು ಹಿಡಿಸಿತ್ತು. ಅವಳು ಬಳಸುತ್ತಿದ್ದ ದೊಡ್ಡ ದೊಡ್ಡ ಪದಗಳಿಗೆ ಮರುಳಾಗಿದ್ದರು.

"ನಮ್ಮ ಶಾಲೆಗೆ ಒಂದು ಹಾಡು ಕಲಿಸುವಂತೆ ಮುಖ್ಯೋಪಾಧ್ಯಾಯರಿಗೆ ಕೇಳೋಣವಾ ?" ಸ್ಫೂರ್ತಿಗೊಂಡ ತೊತ್ತೊ-ಚಾನ್ ಕೇಳಿದಳು.

"ಓ, ಕೇಳೋಣ" ಎಂದರು ಎಲ್ಲ.

ಒಂದನೇ ತರಗತಿಯ ಮಕ್ಕಳೆಲ್ಲಾ ದಂಡು ಕಟ್ಟಿಕೊಂಡು ಬೆಳಿಗ್ಗೆಯೇ ಆಫೀಸಿಗೆ ಲಗ್ಗೆ ಹಾಕಿದ್ದು ಮುಖ್ಯೋಪಾಧ್ಯಾಯರಿಗೆ ಆಶ್ಚರ್ಯವಾಯಿತು. ಎಲ್ಲ ಕತೆ ಕೇಳಿದ ಮೇಲೆ "ಸರಿ, ನಾಳೆ ನಿಮಗೊಂದು ಶಾಲೆಯ ಹಾಡನ್ನು ಕಲಿಸುತ್ತೇನೆ" ಎಂದರು.

"ನಿಜವಾಗಿಯೂ ?" ಮಕ್ಕಳೆಲ್ಲ ಒಂದೇ ಸ್ವರದಲ್ಲಿ ಉದ್ಗರಿಸಿದರು.

ಮಾರನೆಯ ದಿನ ಎಲ್ಲ ಮಕ್ಕಳೂ ಶಾಲೆಯ ಮೈದಾನದಲ್ಲಿ ಸೇರುವಂತೆ ಕೇಳುವ

ನೋಟೀಸ್ ಎಲ್ಲ ತರಗತಿಗೂ ಹೋಯಿತು. ತೊತ್ತೊ-ಚಾನ್ ಅಲ್ಲಿ ನೆರೆದ ಇತರರನ್ನು ಸೇರಿಕೊಂಡಳು. ಮುಖ್ಯೋಪಾಧ್ಯಾಯರು ಕರಿಹಲಗೆಯನ್ನು ಮೈದಾನದ ಮಧ್ಯಕ್ಕೆ ತಂದು ನಿಲ್ಲಿಸಿ "ಇದೋ, ಇಲ್ಲಿದೆ ನಿಮ್ಮ ಶಾಲೆಯ ಹಾಡು" ಎಂದರು. ಅಲ್ಲಿ ಆತ ಐದು ಅಡ್ಡಗೆರೆಗಳನ್ನು ಹಾಕಿ ಹೀಗೆ ಬರೆದರು:



ತೊ-ಮೊ-ಯೆ ತೊ-ಮೊ-ಯೆ ತೊ-ಮೊ-ಯೆ

ನಂತರ ಆತ ತನ್ನ ಎರಡೂ ಕೈಗಳನ್ನು ಸಂಗೀತ ನಿರ್ದೇಶಕನಂತೆ ಮೇಲೆತ್ತಿ "ಈಗ ಹಾಡನ್ನು ಹಾಡೋಣ, ಎಲ್ಲರೂ ಒಟ್ಟಾಗಿ!" ಎಂದರು.

ಆತ ಒಂದು ಸಲ ಆರೋಹಣ, ಮತ್ತೊಂದು ಸಲ ಅವರೋಹಣದ ಧಾಟಿಯಲ್ಲಿ ಹಾಡತೊಡಗಿದರು. ಶಾಲೆಯ ಎಲ್ಲಾ ಐವತ್ತು ಮಕ್ಕಳೂ ಅವರನ್ನನುಸರಿಸಿ ಹಾಗೆಯೇ ಹಾಡಿದರು: "ತೊ ಮೊ ಯೆ ತೊ ಮೊ ಯೊ ತೊ ಮೊ ಯೆ."

"ಅಯ್ಯೋ ಇಷ್ಟೇನಾ?" ಎಂದಳು ತೊತ್ತೊ-ಚಾನ್ ನಿಟ್ಟುಸಿರಿಟ್ಟು.

"ಹೌದು ಅಷ್ಟೇ?" ಹೆಮ್ಮೆಯಿಂದ ಮುಖ್ಯೋಪಾಧ್ಯಾಯರೆಂದರು.

"ಒಳ್ಳೊಳ್ಳೆ ಪದಗಳನ್ನು ಹಾಕಿದ್ದರೆ ಚೆನ್ನಾಗಿತ್ತು." ತನ್ನ ಅಸಮಾಧಾನವನ್ನೆಲ್ಲಾ ತೋಡಿಕೊಂಡಳು ತೊತ್ತೊ-ಚಾನ್. "ಸೆನ್‌ಜೋಕು ಕೊಳ ಆಳವಿಲ್ಲವಾದರೇನು ಹಾಡಿನಂತೆ."

"ಯಾಕೆ ಇದು ಚೆನ್ನಾಗಿಲ್ವಾ?" ಎಂದು ಕೇಳುವಾಗ ಮುಖ್ಯೋಪಾಧ್ಯಾಯರು ಕೊಂಚ ಲಜ್ಜಿತರಾದಂತೆ ಕಂಡರೂ ಮುಗುಳ್ನಗುತ್ತಾ "ನಾನು ಚೆನ್ನಾಗಿದೆ ಅಂದುಕೊಂಡಿದ್ದೆ" ಎಂದರು.

ಒಬ್ಬರಿಗೂ "ಹಾಡು" ಇಷ್ಟವಾಗಿರಲಿಲ್ಲ, ತೀರಾ ಸರಳವೆನಿಸಿತು. ಇಷ್ಟು ಸರಳವಾದ ಹಾಡನ್ನು ಹಾಡುವುದಕ್ಕಿಂತ ಸುಮ್ಮನಿರುವುದೇ ವಾಸಿ ಎಂದುಕೊಂಡರು.

ಮುಖ್ಯೋಪಾಧ್ಯಾಯರಿಗೆ ಬೇಸರವೆನಿಸಿದರೂ ಸಿಟ್ಟಾಗಲಿಲ್ಲ. ಆತ ಅದನ್ನು ಬೋರ್ಡಿನಿಂದ ಒರೆಸಿ ಹಾಕಿದರು. ಅವರಿಗೆ ಬೇಸರವಾಯಿತೇನೋ ಎಂದು ತೊತ್ತೊ-ಚಾನ್ ನೊಂದುಕೊಂಡಳು. ಆದರೆ ಅವಳು ನಿಜವಾಗಿಯೂ ಇನ್ನೂ ಚೆನ್ನಾಗಿರುವ ಹಾಡನ್ನು ನಿರೀಕ್ಷಿಸಿದ್ದಳು.

ನಿಜ ಹೇಳಬೇಕೆಂದರೆ, ಶಾಲೆ ಮತ್ತು ಮಕ್ಕಳ ಮೇಲಿನ ತನ್ನ ಪ್ರೀತಿ ಮಮತೆಗಳನ್ನು ವ್ಯಕ್ತಪಡಿಸಲು ಮುಖ್ಯೋಪಾಧ್ಯಾಯರಲ್ಲಿ ಯಾವ ಹಾಡೂ ಇರಲಿಲ್ಲ. ಆದರೆ ಚಿಣ್ಣರಿಗೆ ಇದು ಅರ್ಥವಾಗಬೇಕಾದರೂ ಹೇಗೆ? ಮಕ್ಕಳು ಬಹು

ಬೇಗ ಶಾಲೆಯು ಹಾಡು ಬೇಕೆನ್ನುವುದನ್ನು ಮರೆತುಬಿಟ್ಟರು. ಮುಖ್ಯೋಪಾಧ್ಯಾಯರು ಅದನ್ನು ಬೋರ್ಡಿನ ಮೇಲಿಂದ ಅಳಿಸಿದಾಗಲೇ ಅದು ನೆನಪಿನಿಂದಲೂ ಸಂಪೂರ್ಣ ಅಳಿಸಿಹೋಗಿತ್ತು. ತೊಮೊಯೆದಲ್ಲಿ ಮತ್ತೆಂದೂ ಶಾಲೆಯ ಹಾಡನ್ನು ಹಾಡಲೇ ಇಲ್ಲ.

## "ಎಲ್ಲ ಒಳಹಾಕಿ ಮುಚ್ಚು!"

ತೊತ್ತೊ-ಚಾನ್ ಎಂದೂ ಇಷ್ಟೊಂದು ಕಷ್ಟಪಟ್ಟು ಕೆಲಸ ಮಾಡಿರಲಿಲ್ಲ. ಒಂದು ದಿನ ಅವಳ ಅಚ್ಚುಮೆಚ್ಚಿನ ಪರ್ಸ್ ಕಕ್ಕಸು ಗುಂಡಿಯಲ್ಲಿ ಬಿದ್ದುಹೋಯಿತು. ಅದರಲ್ಲೇನೂ ಹಣವಿರಲಿಲ್ಲ. ಆದರೆ ತೊತ್ತೊ-ಚಾನ್ ಅದನ್ನು ಎಷ್ಟೊಂದು ಪ್ರೀತಿಸುತ್ತಿದ್ದಳೆಂದರೆ ಅದನ್ನು ತನ್ನೊಡನೆ ಕಕ್ಕಸಿಗೂ ತೆಗೆದುಕೊಂಡು ಹೋಗುತ್ತಿದ್ದಳು. ಅದೊಂದು ತುಂಬಾ ಮುದ್ದಾದ ಪರ್ಸು. ಅದಕ್ಕೆ ಕೆಂಪು, ಹಳದಿ, ಹಸಿರು ಮಣಿಗಳನ್ನು ಹದವಾಗಿ ಪೋಣಿಸಲಾಗಿತ್ತು. ಚೌಕಾಕಾರವಾಗಿ ಚಪ್ಪಟೆಯಾಗಿದ್ದ ಅದಕ್ಕೆ ಸುತ್ತಲೂ ಬೆಳ್ಳಿ ಬಣ್ಣದ ಅಂಚಿತ್ತು.

ತೊತ್ತೊ-ಚಾನ್‌ಗೊಂದು ವಿಚಿತ್ರ ಅಭ್ಯಾಸ, ಸಣ್ಣವಳಿದ್ದಾಗಿನಿಂದ, ಕಕ್ಕಸಿಗೆ ಹೋದಾಗಲೆಲ್ಲಾ ಕಕ್ಕಸು ಮಾಡಿ ಮುಗಿಸಿದ ಮೇಲೆ ಗುಂಡಿಯನ್ನು ಬಗ್ಗಿ ನೋಡುವುದು ಅವಳ ಚಾಳಿ. ಹೀಗಾಗಿ ಶಾಲೆಗೆ ಹೋಗಲು ಪ್ರಾರಂಭಿಸುವ ಮೊದಲೇ ಅವಳು ಅನೇಕ ಹ್ಯಾಟುಗಳನ್ನು ಕಳೆದುಕೊಂಡಿದ್ದಳು. ಸುಂದರವಾದ ಬಿಳೀ ಲೇಸಿನ ಹುಲ್ಲಿನ ಹ್ಯಾಟು ಕೂಡ ಹೀಗೆ ಕಳೆದಿತ್ತು. ಆ ದಿನಗಳಲ್ಲಿ ಕಕ್ಕಸುಗಳಿಗೆ ಫ್ಲಶ್‌ಗಳಿರಲಿಲ್ಲ. ಬರೀ ಗುಂಡಿಗಳಿರುತ್ತಿದ್ದವು. ಹೀಗಾಗಿ ಹ್ಯಾಟುಗಳು ಅಲ್ಲಿ ತೇಲಿಕೊಂಡಿರುತ್ತಿದ್ದವು. ಕಕ್ಕಸು ಮಾಡಿದ ಮೇಲೆ ಬಗ್ಗಿನೋಡಬೇಡವೆಂದು ಅಮ್ಮ ಹೇಳುತ್ತಲೇ ಇದ್ದಳು.

ಆ ದಿನ, ಶಾಲೆ ಪ್ರಾರಂಭವಾಗುವ ಮೊದಲು ತೊತ್ತೊ-ಚಾನ್ ಕಕ್ಕಸ್ಸಿಗೆ ಹೋಗಿದ್ದಳು. ಅಮ್ಮನ ಎಚ್ಚರಿಕೆಯ ಮಾತು ನೆನಪಿಗೆ ಬರುವ ಮೊದಲೇ ಅವಳು ಬಗ್ಗಿ ನೋಡಿದ್ದಳು. ಆ ಕ್ಷಣ ಕೈಯಲ್ಲಿ ಹಿಡಿದಿದ್ದ ಪರ್ಸಿನ ಮೇಲಿನ ಹಿಡಿತ ತಪ್ಪಿತ್ತು. ಅವಳ ಪರ್ಸ್ ಕಕ್ಕಸು ಗುಂಡಿಯಲ್ಲಿ ಬಿದ್ದಿತ್ತು. ಭಾರವಾಗಿದ್ದ ಅದು ಹ್ಯಾಟಿನಂತೆ ತೇಲದೆ ಸರಕ್ಕನೆ ಒಳಕ್ಕೆ ಜಾರಿಕೊಂಡು ಕಣ್ಮರೆಯಾಗಿತ್ತು.

ತೊತ್ತೊ-ಚಾನ್ ಅಳು ತಡೆದುಕೊಂಡಳು. ಆದರೆ ಪರ್ಸನ್ನು ಬಿಟ್ಟುಬಿಡಲೂ ತಯಾರಿರಲಿಲ್ಲ. ಶೆಡ್ಡಿಗೆ ಹೋಗಿ ತೋಟಕ್ಕೆ ನೀರು ಹನಿಸಲು ಉಪಯೋಗಿಸುತ್ತಿದ್ದ ಉದ್ದನೆಯ ಮರದ ಸಟ್ಟುಗವನ್ನು ತೆಗೆದುಕೊಂಡಳು. ಅದು ಅವಳಿಗಿಂತ ಎರಡರಷ್ಟು ಉದ್ದವಿತ್ತು. ಅದರಿಂದ ಅವಳ ಉತ್ಸಾಹವೇನೂ ಕುಗ್ಗಲಿಲ್ಲ. ಶಾಲೆಯ ಹಿಂಭಾಗಕ್ಕೆ ಹೋಗಿ ಕಕ್ಕಸು ಬಂದು ಸೇರುವ ಗುಂಡಿಗಾಗಿ ಹುಡುಕತೊಡಗಿದಳು. ಅದು ಕಕ್ಕಸು ರೂಮಿನ ಗೋಡೆಯ ಪಕ್ಕಕ್ಕೆ ಹೊರಗಡೆ ಇರಬಹುದೆಂದು ಊಹಿಸಿಕೊಂಡಳು. ಆದರೆ ತುಂಬಾ ಹುಡುಕಿದ ನಂತರ ಸುಮಾರು ಹತ್ತಡಿ

ದೂರದಲ್ಲಿ ಮುಚ್ಚಿದ್ದ ದೊಡ್ಡ ಗುಂಡಿ ಇರುವುದು ಕಂಡುಬಂತು. ಬಹಳ ಕಷ್ಟಪಟ್ಟು ಮುಚ್ಚಳ ತೆಗೆದ ನಂತರ ತಾನು ಹುಡುಕುತ್ತಿದ್ದ ಗುಂಡಿ ಇದೇ ಎಂಬುದರಲ್ಲಿ ಅವಳಿಗೆ ಯಾವ ಸಂಶಯವೂ ಉಳಿಯಲಿಲ್ಲ. ಇಣುಕಿ ನೋಡಿದಳು. "ಅಬ್ಬಾ!, ಕುಹೊನ್‌ಬುತ್ಸು ಕೊಳದಷ್ಟು ದೊಡ್ಡದು" ಎಂದು ಉದ್ಗರಿಸಿದಳು.

ಕೆಲಸ ಶುರು ಮಾಡಿದಳು. ಒಂದೊಂದೇ ಸೌಟು ಕಸ ತೆಗೆದು ಹೊರಹಾಕತೊಡಗಿದಳು. ಮೂರು ಕಕ್ಕಸುಗಳಿಂದ ಬಂದು ಸೇರುತ್ತಿದ್ದ ಆ ಗುಂಡಿ ವಿಪರೀತ ದೊಡ್ಡದಿತ್ತು. ಅದೂ ಅಲ್ಲದೆ ಹೆಚ್ಚು ಬಗ್ಗಿದರೆ ಅವಳು ಅದರಲ್ಲಿ ಬಿದ್ದು ಬಿಡುವ ಅಪಾಯವಿತ್ತು. ಹೀಗಾಗಿ ಪರ್ಸ್ ಸಿಕ್ಕುವವರೆಗೆ ಗುಂಡಿಯಲ್ಲಿರುವುದನ್ನು ಸುಮ್ಮನೆ ಸೌಟಿನಿಂದ ತೆಗೆದುಹಾಕುತ್ತಾ ಹೋಗುವುದೆಂದು ನಿರ್ಧರಿಸಿದಳು.

ಪ್ರತೀ ಬಾರಿಯೂ ಸೌಟು ಹೊರಬರುತ್ತಿದ್ದಂತೆಯೇ ಮೂಗು ಮುಚ್ಚಿಕೊಂಡು ಪರ್ಸ್ ಬಂದಿತೇ? ಎಂದು ಪರೀಕ್ಷಿಸುವಳು. ಗುಡ್ಡೆ ಬೆಳೆಯುತ್ತಾ ಹೋಯಿತೇ ಹೊರತು ಪರ್ಸಿನ ಸುಳಿವಿಲ್ಲ. ಎಲ್ಲಿ ಹೋಯಿತು? ಅಷ್ಟರಲ್ಲಿ ಬೆಲ್ಲು ಹೊಡೆಯಿತು.

ಈಗೇನು ಮಾಡುವುದು? ಅವಳಿಗೆ ಚಿಂತೆಗಿಟ್ಟುಕೊಂಡಿತ್ತು. ಇಷ್ಟೊಂದು ಶ್ರಮ ಪಟ್ಟಾಗಿದೆ, ಇನ್ನು ಸುಮ್ಮನೆ ಬಿಟ್ಟುಬಿಡುವುದೇ? ಖಂಡಿತಾ ಇಲ್ಲ, ಕೆಲಸವನ್ನು ಚುರುಕುಗೊಳಿಸಿದಳು.

ಗುಡ್ಡೆ ದೊಡ್ಡದಾಗುತ್ತಾ ಹೋದಂತೆ ಮುಖ್ಯೋಪಾಧ್ಯಾಯರು ಅತ್ತ ಕಡೆಯೇ ಬಂದರು. "ಇಲ್ಲೇನು ಮಾಡುತ್ತಿದ್ದೀಯಾ?" ಎಂದು ತೊತ್ತೊ-ಚಾನ್‌ಳನ್ನು ಪ್ರಶ್ನಿಸಿದರು.

"ನನ್ನ ಪರ್ಸ್ ಬಿದ್ದು ಹೋಗಿದೆ" ಕೆಲಸ ನಿಲ್ಲಿಸದೆಯೇ ಉತ್ತರಿಸಿದಳು. ಒಂದು ನಿಮಿಷವನ್ನೂ ವ್ಯರ್ಥಮಾಡುವುದು ಅವಳಿಗೆ ಇಷ್ಟವಿರಲಿಲ್ಲ.

"ಓಹೋ" ಎಂದಷ್ಟೇ ಹೇಳಿ ಅವರು ಅಲ್ಲಿಂದ ನಡೆದರು, ರೂಢಿಯಂತೆ ಬೆನ್ನಿನ ಹಿಂದೆ ಕೈಕಟ್ಟಿ.

ಕೆಲಸ ಸಾಗಿತೇ ವಿನಃ ಕೊನೆಗೂ ಪರ್ಸ್ ಮಾತ್ರ ಸಿಗಲೇ ಇಲ್ಲ. ದುರ್ನಾತದಿಂದ ತೊತ್ತೊ-ಚಾನ್‌ಗೆ ತಲೆ ಸುತ್ತುವಂತಾಯಿತು.

ಮತ್ತೆ ಮುಖ್ಯೋಪಾಧ್ಯಾಯರು ಅತ್ತಲೇ ಬಂದರು. "ಪರ್ಸು ಸಿಕ್ತಾ?" ಕೇಳಿದರು. "ಇಲ್ಲ" ಬೆವರಿಂದ ತೊಯ್ದು ಹೋಗಿದ್ದ ತೊತ್ತೊ-ಚಾನ್ ಗುಪ್ಪೆಯ ಮಧ್ಯದಿಂದ ದನಿಗೊಟ್ಟಳು. ಅವಳ ಕೆನ್ನೆಗಳು ರಕ್ತ ಚಿಮ್ಮುವಂತಿದ್ದವು.

ಮುಖ್ಯೋಪಾಧ್ಯಾಯರು ಹತ್ತಿರ ಬಂದು ಸ್ನೇಹದಿಂದ ಹೇಳಿದರು "ಎಲ್ಲಾ ಮುಗಿದ ಮೇಲೆ ತೋಡಿದ್ದನ್ನೆಲ್ಲಾ ಒಳಹಾಕಿ ಮುಚ್ತೀಯಲ್ಲವೇ?" ಮತ್ತೆ ಹಿಂದಿನಂತೆಯೇ ಅಲ್ಲಿಂದ ನಡೆದರು.

"ಆಯ್ತು" ತೊತ್ತೊ-ಚಾನ್ ಸೌಮ್ಯವಾಗಿ ಉತ್ತರಿಸಿದಳು. ತಕ್ಷಣ ಅವಳಿಗೇನೋ ಹೊಳೆಯಿತು. ಸುತ್ತಮುತ್ತ ನೋಡಿದಳು. "ಎಲ್ಲಾ ಮುಗಿಸಿದ ಮೇಲೆ ಗಟ್ಟಿಯಾಗಿರೋದನ್ನು ಒಳಹಾಕಬಹುದು. ಆದರೆ ನೀರನ್ನು ಏನು ಮಾಡೋದು?" ನೀರಿನ ಭಾಗವನ್ನು ನೆಲ ಬೇಗಬೇಗ ಹೀರಿಕೊಳ್ಳತೊಡಗಿತ್ತು.

ತೊತ್ತೊ-ಚಾನ್ ಈಗ ಕೆಲಸ ನಿಲ್ಲಿಸಿ, ಹೀರಿಕೊಂಡ ನೀರನ್ನು ಗುಂಡಿಯೊಳಕ್ಕೆ ಹೇಗೆ ಹಾಕುವುದೆಂದು ಯೋಚಿಸತೊಡಗಿದಳು. ಎಲ್ಲಾ ಒಳಹಾಕುತ್ತೇನೆಂದು ಹೆಡ್ ಮಾಸ್ತರ್‌ಗೆ ಹೇಳಿಯಾಯಿತು. ಒದ್ದೆಯಾದ ನೆಲದ ಭಾಗವನ್ನೇ ಕೆರೆದು ಹಾಕುವುದೆಂದು ನಿರ್ಧರಿಸಿದಳು.

ಈಗ ಗುಡ್ಡೆ ಪರ್ವತವಾಗಿ ಬೆಳೆದಿದ್ದು, ಗುಂಡಿ ಹೆಚ್ಚು ಕಮ್ಮಿ ಖಾಲಿಯಾಗಿತ್ತು. ಆದರೂ ಪರ್ಸ್ ಪತ್ತೆಯಿಲ್ಲ. ಗುಂಡಿಯು ತಳದಲ್ಲೋ ಸಂದಿಯಲ್ಲೋ ಸಿಕ್ಕಿ ಹಾಕಿಕೊಂಡಿತ್ತೇನೋ. ತೊತ್ತೊ-ಚಾನ್‌ಗೇನೂ ಬೇಸರವಾಗಲಿಲ್ಲ. ತನ್ನಿಂದ ಸಾಧ್ಯವಾದದ್ದೆಲ್ಲಾ ಮಾಡಿದೆನೆನ್ನುವ ತೃಪ್ತಿ ಅವಳಲ್ಲಿ ಉಂಟಾಗಿತ್ತು. ಮುಖ್ಯೋಪಾಧ್ಯಾಯರು ಅವಳನ್ನು ಬಯ್ಯದೆ ಅವಳಲ್ಲಿ ನಂಬಿಕೆಯಿಟ್ಟು ಆತ್ಮಾಭಿಮಾನ ಉಂಟಾಗುವಂತೆ ಮಾಡಿದ್ದು ಅವಳಲ್ಲಿ ಈ ಸಮಾಧಾನ ಮೂಡಲು ಮುಖ್ಯ ಕಾರಣವಾಗಿತ್ತು. ಆದರೆ ಇದನ್ನೆಲ್ಲಾ ಅರ್ಥಮಾಡಿಕೊಳ್ಳುವುದು ತೊತ್ತೊ-ಚಾನ್‌ಗೆ ಆಗ ಸಾಧ್ಯವಿರಲಿಲ್ಲ.

ತೊತ್ತೊ-ಚಾನ್‌ಳ ಇಂತಹ ಸ್ಥಿತಿಯನ್ನು ಗಮನಿಸಿದ ಯಾರೇ ಹಿರಿಯರು "ಅಯ್ಯೋ, ಏನು ಮಾಡ್ತಾ ಇದೀಯಾ ?" ಎಂತಲೋ "ನಿಲ್ಲು", "ತುಂಬಾ ಅಪಾಯ ?" ಎಂತಲೋ ಕೂಗಿಕೊಳ್ಳುತ್ತಿದ್ದರು. ಇಲ್ಲವೇ ತಾವೇ ಮುಂದೆ ಬಂದು ಸಹಾಯ ಮಾಡುತ್ತಿದ್ದರು.

"ಮಾಡಿದ್ದು ಮುಗಿದ ಮೇಲೆ ಎಲ್ಲಾ ಒಳಹಾಕಿ ಮುಚ್ಚುತೀಯಲ್ಲವೇ ?" ಎಂದಿದ್ದರು ಈ ಮುಖ್ಯೋಪಾಧ್ಯಾಯರು. "ಎಂತಹ ಅದ್ಭುತ ವ್ಯಕ್ತಿ!" ಉದ್ಗರಿಸಿದಳು ಅಮ್ಮ ತೊತ್ತೊ-ಚಾನ್‌ನಿಂದ ಎಲ್ಲ ಕತೆ ಕೇಳಿದಾಗ.

ಈ ಘಟನೆಯ ನಂತರ ತೊತ್ತೊ-ಚಾನ್ ಇನ್ನೆಂದೂ ಕಕ್ಕಸಿನಲ್ಲಿ ಬಗ್ಗಿ ನೋಡಲಿಲ್ಲ. ಮುಖ್ಯೋಪಾಧ್ಯಾಯರು ಸಂಪೂರ್ಣ ನಂಬಬಹುದಾದಂಥವರು ಎನಿಸಿ ಹಿಂದೆಂದಿಗಿಂತಲೂ ಹೆಚ್ಚು ಅವರನ್ನು ಇಷ್ಟಪಡತೊಡಗಿದಳು.

ತೊತ್ತೊ-ಚಾನ್ ತನ್ನ ಮಾತನ್ನು ನೆನಪಿನಲ್ಲಿರಿಸಿ ಎಲ್ಲವನ್ನೂ ಗುಂಡಿಯು ಒಳಹಾಕಿದಳು. ಹೊರತೆಗೆಯುವುದು ತುಂಬಾ ಕಷ್ಟದ ಕೆಲಸವಾಗಿತ್ತು. ಆದರೆ ಬಲುಬೇಗ ಒಳಹಾಕುವುದು ಸಾಧ್ಯವಾಯಿತು. ನೀರು ಹೀರಿಕೊಂಡ ನೆಲವನ್ನೂ ಸ್ವಲ್ಪ ಕೆರೆದು ಹಾಕಿದಳು. ಮುಚ್ಚಳವನ್ನು ಮುಚ್ಚಿ, ನೆಲವನ್ನು ಸಮಮಾಡಿ, ಸಟ್ಟುಗವನ್ನು ಕೊಂಡೊಯ್ದು ಶೆಡ್‌ನಲ್ಲಿಟ್ಟಳು.

ಆ ರಾತ್ರಿ ಮಲಗುವ ಮುನ್ನ ತೊತ್ತೊ-ಚಾನ್ ಕತ್ತಲೆಯ ಗವಿಯೊಳಕ್ಕೆ ಬೀಳಿಸಿಬಿಟ್ಟ ತನ್ನ ಪರ್ಸನ್ನೇ ನೆನಸಿಕೊಂಡಳು. ಪರ್ಸ್ ಕಳೆದುಹೋದದ್ದಕ್ಕೆ ಬೇಸರವಾದರೂ ಆ ದಿನದ ಕೆಲಸ ಅವಳನ್ನು ಎಷ್ಟು ದಣಿಸಿತ್ತೆಂದರೆ ತಲೆ ಕೆಳಹಾಕುತ್ತಿದ್ದಂತೆಯೇ ನಿದ್ರಾಲೋಕ ಸೇರಿದಳು. ಅವಳ ಪರ್ಸ್ ಮಾತ್ರ ಎಲ್ಲಿಯೋ ಹೇಗೋ ಸದ್ದಿಲ್ಲದೆ ಕುಳಿತಿತ್ತು.

## ತೊತ್ತೊ-ಚಾನ್ ಹೆಸರು

ತೊತ್ತೊ-ಚಾನ್‌ಳ ನಿಜವಾದ ಹೆಸರು ತೆತ್ಸುಕೊ. ಅವಳು ಹುಟ್ಟುವ ಮುನ್ನ ತಂದೆ-ತಾಯಿಗಳ ಸ್ನೇಹಿತರು, ಸಂಬಂಧಿಗಳು ಗಂಡೇ ಹುಟ್ಟುವುದೆಂದು ಖಾತ್ರಿ ಮಾಡಿಕೊಂಡಿದ್ದರು. ಅದು ಮೊದಲ ಮಗುವಾದ್ದರಿಂದ ಸಹಜವಾಗಿಯೇ ಹಾಗೆ ನಂಬಿಕೊಂಡಿದ್ದರು. ಹೀಗಾಗಿ ಹುಟ್ಟುವ ಮಗುವಿಗೆ 'ತೊರು' ಎಂದು ಹೆಸರಿಡುವುದಾಗಿ ನಿಶ್ಚಯವಾಗಿತ್ತು. ಹೆಣ್ಣು ಹುಟ್ಟಿದಾಗ ಅವರಿಗೆ ಸ್ವಲ್ಪ ನಿರಾಶೆಯೆನಿಸಿತು. ಆದರೆ ಅವರಿಬ್ಬರಿಗೂ ಚೀನಾ ಸಂಸ್ಕೃತಿಯಲ್ಲಿ ಬರುವ 'ತೊರು' ಎನ್ನುವ ಪಾತ್ರ ತುಂಬಾ ಹಿಡಿಸಿತ್ತು. ಈ ತೊರು ಎನ್ನುವುದರ ಅರ್ಥವೇ ಒಳಹೊಗುವ ಸಾಮರ್ಥ್ಯ, ಬಹುದೂರ ಕೊಂಡೊಯ್ಯುವ ಗುಣ, ಸ್ಪಷ್ಟ ಮತ್ತು ನಿರ್ಧಾರದ ದನಿ ಇತ್ಯಾದಿಗಳನ್ನು ಬಿಂಬಿಸುವಂಥದ್ದು. ಹೀಗಾಗಿ ಅವರು 'ತೊರು' ಎನ್ನುವ ಗಂಡು ಹೆಸರನ್ನು 'ತೆತ್ಸು' ಎಂಬ ಚೀನಾ ಶೈಲಿಯಲ್ಲಿ ಹೇಳಿ ಕೊನೆಯಲ್ಲಿ ಹೆಣ್ಣು ಎಂದು ಸೂಚಿಸುವ 'ಕೊ' ಎಂಬ ಪ್ರತ್ಯಯವನ್ನು ಸೇರಿಸಿದ್ದರು.

ಹೀಗೆ ಪ್ರತಿಯೊಬ್ಬರೂ ಅವಳನ್ನು ತೆತ್ಸುಕೊ-ಚಾನ್ ('ಚಾನ್' ಎನ್ನುವುದು ವ್ಯಕ್ತಿಯ ಹೆಸರಿನ ಮುಂದೆ ಸಾಮಾನ್ಯವಾಗಿ ಸೇರಿಸುವ 'ಸಾನ್' ಎಂಬುದರ ಜನಪ್ರಿಯ ರೂಪ) ಎಂದು ಕರೆಯುತ್ತಿದ್ದರು. ಆದರೆ ಅವಳಿಗೆ ಇದು ತೆತ್ಸುಕೊ-ಚಾನ್‌ನಂತೆ ಕೇಳಿಸುತ್ತಿರಲಿಲ್ಲ. ಯಾರಾದರೂ ಅವಳನ್ನು ಹೆಸರು ಕೇಳಿದರೆ ಅವಳು ತನ್ನ ಹೆಸರು 'ತೊತ್ತೊ-ಚಾನ್' ಎನ್ನುತ್ತಿದ್ದಳು. ಚಾನ್ ಎನ್ನುವುದು ತನ್ನ ಹೆಸರಿನ ಭಾಗವೇ ಎಂದು ಅವಳು ಭಾವಿಸಿಕೊಂಡಿದ್ದಳು.

ಅಪ್ಪ ಕೆಲಸಮಯ ಅವಳನ್ನು ಒಬ್ಬ ಹುಡುಗನೇನೋ ಎಂಬಂತೆ 'ತೊತ್ಸುಕೀ' ಎಂದು ಕರೆಯುತ್ತಿದ್ದರು. 'ತೊತ್ಸುಕೀ' ಬಾ ಇಲ್ಲಿ, ಗುಲಾಬಿಗಳ ಮೇಲೆಲ್ಲಾ ಹುಳುಗಳಿವೆ, ಸ್ವಲ್ಪ ತೆಗೆಯಲು ಸಹಾಯ ಮಾಡು ಎನ್ನುವರು. ಆದರೆ ಅಪ್ಪ ಮತ್ತು ರಾಕಿ ಇಬ್ಬರನ್ನು ಬಿಟ್ಟರೆ ಉಳಿದ ಎಲ್ಲರೂ ಅವಳನ್ನು ತೊತ್ತೊ-ಚಾನ್ ಎಂದೇ ಕರೆಯುತ್ತಿದ್ದರು. ಅವಳು ಶಾಲೆಯಲ್ಲಿ ನೋಟ್ ಪುಸ್ತಕಗಳ ಮೇಲೆ ತನ್ನ ಹೆಸರನ್ನು ತೆತ್ಸುಕೋ ಎಂದು ಬರೆದರೂ ತನ್ನ ಹೆಸರು ಮಾತ್ರ ತೊತ್ತೊ-ಚಾನ್ ಎಂದೇ ಅಂದುಕೊಂಡಿದ್ದಳು.

## ರೇಡಿಯೋ ನಗೆಹನಿಗಳು

ನಿನ್ನೆಯ ದಿನ ತೊತ್ತೊ-ಚಾನ್‌ಗೆ ತುಂಬಾ ಬೇಸರವಾಗಿತ್ತು. "ಇನ್ನು ಮೇಲೆ ನೀನು ರೇಡಿಯೋದಲ್ಲಿ ಯಾವ ನಗೆಹನಿಗಳನ್ನೂ ಕೇಳುವುದು ಬೇಡ" ಎಂದು ಅಮ್ಮ ತಾಕೀತು ಮಾಡಿದ್ದಳು.

ತೊತ್ತೊ-ಚಾನ್ ಸಣ್ಣ ಹುಡುಗಿಯಾಗಿದ್ದಾಗ ಇರುತ್ತಿದ್ದ ರೇಡಿಯೋಗಳು ಮರದಿಂದ ಮಾಡಿದ ದೊಡ್ಡ ರೇಡಿಯೋಗಳು. ಅವು ಬಹಳ ಸೊಗಸಾದ ರೇಡಿಯೋಗಳು. ಅವರ ಮನೆಯಲ್ಲಿದ್ದ ರೇಡಿಯೋ ಆಯತಾಕಾರವಾಗಿದ್ದು

ಮೇಲ್ಭಾಗದಲ್ಲಿ ಗುಂಡಾಗಿತ್ತು. ಮುಂದುಗಡೆ ಇದ್ದ ದೊಡ್ಡ ಸ್ಪೀಕರು ಗುಲಾಬಿ ಬಣ್ಣದ, ಬಗೆಬಗೆಯ ಚಿತ್ತಾರಗಳುಳ್ಳ ಸಿಲ್ಕಿನಿಂದ ಮುಚ್ಚಲ್ಪಟ್ಟಿತ್ತು. ಅದಕ್ಕೆ ಎರಡು ನಿಯಂತ್ರಣನಾಬು (ಗುಂಡಿ)ಗಳಿದ್ದವು.

ಶಾಲೆ ಪ್ರಾರಂಭಿಸುವ ಮುಂಚಿನಿಂದಲೂ ತೊತ್ತೊ-ಚಾನ್‌ಗೆ 'ರಾಕುಗೋ' ನಗೆಹನಿಗಳನ್ನು ಕೇಳುವುದೆಂದರೆ ಬಲು ಇಷ್ಟ. ಗುಲಾಬಿ ಸಿಲ್ಕಿಗೆ ಕಿವಿಯನ್ನು ಹಚ್ಚಿ ಕೇಳುವಳು. ಆ ನಗೆಹನಿಗಳು ಭಯಂಕರ ತಮಾಷೆಯಾಗಿವೆಯೆಂದು ಅವಳಿಗೆ ಅನಿಸುತ್ತಿತ್ತು. ನಿನ್ನೆಯವರೆಗೂ ಅಮ್ಮ ಇದನ್ನು ಕೇಳಬಾರದೆಂಬ ಯಾವ ಕಟ್ಟಪ್ಪಣೆಯನ್ನೂ ಅವಳಿಗೆ ಮಾಡಿರಲಿಲ್ಲ.

ನಿನ್ನೆಯ ದಿನ ಅಪ್ಪನ ಜತೆಯ ಸಂಗೀತಗಾರರು ಕೆಲವರು ಅಭ್ಯಾಸ ಮಾಡಲಿಕ್ಕೆಂದು ಇವರ ಮನೆಗೆ ಬಂದಿದ್ದರು. ಅವರೆಲ್ಲಾ ಮುಂದಿನ ವರಾಂಡದಲ್ಲಿ ಕುಳಿತಿದ್ದರು.

"ಸೆಲ್ಲೋ (ದೊಡ್ಡ ಪೀಟಿಲು) ನುಡಿಸುವ ತ್ಸುನೆಸಾದ ತಾಚಿಬಾನ ಅವರು ನಿನಗೆ ಬಾಳೆಹಣ್ಣು ತಂದಿದ್ದಾರೆ" ಎಂದು ಅಮ್ಮ ಹೇಳಿದಳು.

ತೊತ್ತೊ-ಚಾನ್‌ಗೆ ಆನಂದವಾಯಿತು. ಅವಳು ತಾಚಿಬಾನ ಅವರಿಗೆ ಗೌರವಸೂಚಕವಾಗಿ ಬಾಗಿ, ಧನ್ಯವಾದಗಳನ್ನು ತಿಳಿಸಿ ಅಮ್ಮನನ್ನು ಉದ್ದೇಶಿಸಿ "ಅಮ್ಮಾ ಇದೆಷ್ಟು ಚೆನ್ನಾಗಿದೆ ನೋಡಿದ್ಯಾ" ಎಂದಳು.

ಆದಾದ ನಂತರ ಅಮ್ಮ-ಅಪ್ಪ ಹೊರಗೆ ಹೋದಾಗ ಗುಟ್ಟಾಗಿ ನಗೆಹನಿಗಳನ್ನು ಕೇಳಬೇಕಾದ ಪರಿಸ್ಥಿತಿ ಬಂತು. ನಗೆಹನಿಗಳು ಚೆನ್ನಾಗಿದ್ದಾಗ ಬಿದ್ದುಬಿದ್ದು-ನಗುವಳು. ಯಾರಾದರೂ ದೊಡ್ಡವರು ನೋಡಿದ್ದರೆ, ಇಷ್ಟು ಸಣ್ಣ ಹುಡುಗಿಗೆ ಅಷ್ಟು ಕಷ್ಟದ ನಗೆಹನಿಗಳು ಹೇಗೆ ಅರ್ಥವಾದವು ಎಂದು ಆಶ್ಚರ್ಯಪಡುತ್ತಿದ್ದರು. ಆದರೆ ಮಕ್ಕಳಿಗೆ ಸ್ವಭಾವಸಿದ್ಧವಾದ ಗೇಲಿಗುಣ ಇರುತ್ತದೆಂಬುದರಲ್ಲಿ ಯಾವ ಅನುಮಾನವೂ ಇಲ್ಲ. ಅವರಷ್ಟೇ ಸಣ್ಣವರಾಗಿದ್ದಾಗ ಕೆಲವೊಂದು ವಿಚಾರಗಳು ತುಂಬಾ ತಮಾಷೆಯಾಗಿರುವುದನ್ನು ಅವರು ಸದಾ ಬಲ್ಲರು.

## ಇನ್ನೊಂದು ರೈಲುಬಂಡಿ ಬಂತು

"ರಾತ್ರಿ ಹೊಸ ರೈಲುಬಂಡಿ ಬರುತ್ತದಂತೆ" ಊಟದ ಸಮಯದಲ್ಲಿ ಮಿಯೋ-ಚಾನ್ ಹೇಳಿದಳು. ಹೆಡ್‌ಮಾಸ್ತರ ಮೂರನೇ ಮಗಳಾದ ಮಿಯೋ-ಚಾನ್ ತೊತ್ತೊ-ಚಾನ್ ತರಗತಿಯಲ್ಲಿದ್ದಳು.

ಈಗಾಗಲೇ ಶಾಲೆಯಲ್ಲಿ ಆರು ರೈಲುಬಂಡಿಗಳಿದ್ದು, ಈ ದಿನ ಮತ್ತೊಂದು ಬರುತ್ತಿತ್ತು. ಇಂದು ಬರುವ ಆ ಬಂಡಿ ಲೈಬ್ರರಿಗಾಗಿ ಎಂಬ ಮಾಹಿತಿಯನ್ನೂ ಮಿಯೋ-ಚಾನ್ ಒದಗಿಸಿದಳು. ಮಕ್ಕಳಿಗೆಲ್ಲ ಅಪಾರ ಆನಂದವಾಯಿತು.

"ನಮ್ಮ ಶಾಲೆಗೆ ಅದು ಯಾವ ದಾರಿ ಹಾದು ಬರುತ್ತದೋ?" ಯಾರೋ ಕೇಳಿದರು.

ಪ್ರಶ್ನೆ ನಿಜವಾಗಿಯೂ ಯೋಚಿಸುವಂತೆ ಮಾಡಿತ್ತು, ಕೆಲ ಹೊತ್ತು ಎಲ್ಲರೂ ಸುಮ್ಮನಾದರು.

"ಪ್ರಾಯಶಃ ಓಯಿಮಾಚಿ ಲೈನ್ ಗುಂಟಾ ಬಂದು, ನಂತರ ಲೆವಲ್ ಕ್ರಾಸಿಂಗ್ ಬಳಿ ಈ ಕಡೆ ತಿರುಗಿಕೊಳ್ಳುತ್ತದೆ ಅಂತ ಕಾಣುತ್ತೆ" ಮತ್ತಾರೋ ಹೇಳಿದರು.

"ಆಮೇಲೆ ಅದು ಕಂಬಿ ಬಿಡಬೇಕು" ಮತ್ತಾರೋ ಸೇರಿಸಿದರು.

"ಅದನ್ನು ಅಲ್ಲಿಂದ ಗಾಡಿಯ ಮೇಲೆ ಹಾಕಿಕೊಂಡು ತರುತ್ತಾರೇನೋ ?" ಇನ್ನ್ಯಾರದೋ ಅಭಿಪ್ರಾಯ.

"ಆ ರೈಲು ಬಂಡಿ ಹಿಡಿಸುವಷ್ಟು ದೊಡ್ಡ ಗಾಡಿ ಸಿಗಬೇಕಲ್ಲ" ಮತ್ತೊಬ್ಬರು ತಕ್ಷಣ ಹೇಳಿದರು.

"ಹೌದು ಸಿಗಲಿಕ್ಕಿಲ್ಲ."

ಒಂದೊಂದೇ ಆಲೋಚನೆಗಳು ಹೊರಬರತೊಡಗಿದವು. ಗಾಡಿಯಲ್ಲ, ಟ್ರಕ್ಕಿನಲ್ಲೂ ರೈಲುಬಂಡಿಯನ್ನು ಹಾಕಿಕೊಂಡು ಬರುವುದು ಸಾಧ್ಯವಿಲ್ಲ ಎಂಬುದನ್ನು ಮಕ್ಕಳು ತಾವೇ ಚರ್ಚಿಸಿ ಮನಗಂಡರು.

"ರೈಲು ಹಳಿಗಳು" ತೊತ್ತೊ-ಚಾನ್ ತುಂಬಾ ಯೋಚಿಸಿ ಹೇಳಿದಳು "ಅವರು ನಮ್ಮ ಸ್ಕೂಲಿನವರೆಗೂ ರೈಲು ಹಳಿಗಳನ್ನು ಹಾಸುತ್ತಾರೋ ಏನೋ ?"

"ಎಲ್ಲಿಂದ ಹಾಸ್ತಾರೆ ?" ಯಾರೋ ಕೇಳಿದರು.

"ಎಲ್ಲಿಂದ ಅಂದ್ರೆ ರೈಲು ಎಲ್ಲಿರುತ್ತೋ ಅಲ್ಲಿಂದ" ಎಂದ ತೊತ್ತೊ-ಚಾನ್ ತನ್ನ ಆಲೋಚನೆ ಅಷ್ಟೇನೂ ಗಹನವಾದುದಲ್ಲ ಎಂದು ಮನಗಂಡಳು. ರೈಲುಬಂಡಿ ಎಲ್ಲಿಂದ ಹೇಗೆ ಬಂದು ಸೇರುತ್ತೆ ಎನ್ನುವ ಊಹೆ ಅವಳಿಗಿರಲಿಲ್ಲ. ಆದರೆ ಸ್ಕೂಲಿನವರೆಗೂ ಹಳಿಗಳನ್ನು ಹಾಸಲು ಹಾದಿಗುಂಟ ಮನೆಗಳನ್ನು ಗಿಡಮರಗಳನ್ನು ಉರುಳಿಸುವುದಿಲ್ಲವಷ್ಟೆ ಎಂದುಕೊಂಡಳು.

ಒಂದೊಂದಾಗಿ ಎಲ್ಲ ಸಾಧ್ಯತೆಗಳನ್ನೂ ಚರ್ಚಿಸಿ ಏನೂ ಪ್ರಯೋಜನ ಕಾಣದೆ ಹೋದ ಮಕ್ಕಳು ಅಂದು ಶಾಲೆ ಮುಗಿದ ನಂತರ ಮನೆಗೆ ಹೋಗದೆ ಅಲ್ಲೇ ಇದ್ದು ರೈಲು ಬಂಡಿ ಹೇಗೆ ಬರುತ್ತದೆಂದು ನೋಡೇಬಿಡಬೇಕೆಂದು ತೀರ್ಮಾನಿಸಿಕೊಂಡರು. ತಾವೆಲ್ಲ ಅಲ್ಲೇ ಉಳಿದು ರಾತ್ರಿ ರೈಲು ಬರುವುದನ್ನು ನೋಡಬಹುದಾ ಎಂದು ತನ್ನ ತಂದೆಯಾದ ಮುಖ್ಯೋಪಾಧ್ಯಾಯರನ್ನು ಕೇಳಿಕೊಂಡು ಬರುವ ಕೆಲಸಕ್ಕೆ ಮಿಯೋ-ಚಾನ್‌ಳನ್ನು ಸರ್ವಾನುಮತದಿಂದ ಆರಿಸಿ ಕಳಿಸಲಾಯಿತು. ಕೆಲಸಮಯದಲ್ಲೇ ಅವಳು ಸುದ್ದಿ ತಂದಳು.

"ರೈಲುಬಂಡಿ ಬರೋದು ತುಂಬಾ ಹೊತ್ತಾಗುತ್ತಂತೆ. ಇಲ್ಲಿಂದ ಹೋಗುವ ಎಲ್ಲಾ ರೈಲುಗಾಡಿಗಳೂ ಹೋದ ಮೇಲೆ ಬರುತ್ತಂತೆ. ನೋಡಲೇಬೇಕು ಅನ್ನುವವರು ಮೊದಲು ಮನೆಗೆ ಹೋಗಿ ತಂದೆ-ತಾಯಿಗಳ ಒಪ್ಪಿಗೆ ತೆಗೆದುಕೊಂಡು ಬರಬೇಕಂತೆ. ರಾತ್ರಿ ಊಟ ಮಾಡಿಕೊಂಡು ಬೇಕಾದರೆ ಪೈಜಾಮ, ಹೊದಿಕೆ ತಗೊಂಡು ಬರಬೇಕಂತೆ" ಮಿಯೋ-ಚಾನ್ ಹೇಳಿದಳು.

"ವ್ಹಾ! ಮಕ್ಕಳಿಗೆ ಎಂದಿಲ್ಲದ ಸಡಗರ."

"ಪೈಜಾಮ ತಗೊಂಡು ಬರಲು ಹೇಳಿದರಾ ?"
"ಮತ್ತೆ ಹೊದಿಕೆ ಕೂಡ ?"



ಆ ಮಧ್ಯಾಹ್ನ ಯಾರೊಬ್ಬರಿಗೂ ಪಾಠದಲ್ಲಿ ಮನಸ್ಸಿಡಲಾಗಲಿಲ್ಲ. ಶಾಲೆಯ ನಂತರ ತೊತ್ತೊ-ಚಾನ್ ತರಗತಿಯ ಎಲ್ಲಾ ಮಕ್ಕಳೂ ನೆಟ್ಟಗೆ ಮನೆಗೆ ಹೋದರು. ರಾತ್ರಿ ತಮ್ಮ ಪೈಜಾಮ ಮತ್ತು ಹೊದಿಕೆಗಳ ಜತೆ ಮತ್ತೆ ಒಬ್ಬರನ್ನೊಬ್ಬರು ಸಂಧಿಸುತ್ತೇವೆಂಬ ಭರವಸೆ ಎಲ್ಲರಿಗೆ. ಮನೆ ಸೇರಿದ್ದೇ ತಡ ತೊತ್ತೊ-ಚಾನ್ ಅಮ್ಮನಿಗೆ ಹೇಳಿದಳು "ಶಾಲೆಗೆ ಮತ್ತೊಂದು ರೈಲುಬಂಡಿ ಬರುತ್ತಂತೆ. ಹೇಗೆ ಬರುತ್ತೋ ಗೊತ್ತಿಲ್ಲ. ಪೈಜಾಮ ಮತ್ತು ಹೊದಿಕೆ ತರಬೇಕಂತೆ. ನಾನು ಹೋಗಲಾ ?"

ಹೀಗೆ ಹೇಳಿದರೆ ಅಮ್ಮನಿಗೆ ಅರ್ಥವಾಗುವುದಾದರೂ ಹೇಗೆ ? ತೊತ್ತೊ-ಚಾನ್

ಏನು ಹೇಳುತ್ತಿದ್ದಾಳೆಂದು ಊಹಿಸುವುದು ಅಮ್ಮನಿಗೆ ಸಾಧ್ಯವಿರಲಿಲ್ಲ. ಆದರೆ ಮಗಳ ಮುಖದಲ್ಲಿದ್ದ ಗಾಂಭೀರ್ಯವನ್ನು ಗಮನಿಸಿ ಏನೋ ಗಹನವಾದದ್ದೇ ಇರಬೇಕೆಂದು ಊಹಿಸಿದಳು.

ಅಮ್ಮ ಬಗೆಬಗೆಯ ಪ್ರಶ್ನೆ ಕೇಳಿ ಕೊನೆಗೆ ನಿಜವೇನೆಂಬುದನ್ನು ಸಂಪೂರ್ಣ ತಿಳಿದುಕೊಂಡಳು. ತೊತ್ತೊ-ಚಾನ್‌ಗೆ ಅಂತಹ ಅವಕಾಶ ಸಿಗುವುದೋ ಇಲ್ಲವೋ. ಅವಳು ಹೋಗಿ ನೋಡಲಿ ಎಂದು ತೀರ್ಮಾನಿಸಿದಳು. ನಿಜ ಹೇಳಬೇಕೆಂದರೆ ಅವಳಿಗೇ ರೈಲು ಬಂಡಿ ಬರುವುದನ್ನು ಹೋಗಿ ನೋಡುವ ಆಸೆಯಾಯಿತು.

ಅಮ್ಮ ತೊತ್ತೊ-ಚಾನ್‌ಳ ಪೈಜಾಮ ಮತ್ತು ಹೊದಿಕೆಯನ್ನು ತೆಗೆದಿರಿಸಿ ಊಟದ ನಂತರ ಅವಳನ್ನು ಶಾಲೆಗೆ ಕರೆದೊಯ್ದಳು. ಆಗಲೇ ಹತ್ತು ಮಕ್ಕಳು ಅಲ್ಲಿದ್ದರು. ಇದರ ಬಗ್ಗೆ ತಿಳಿದುಕೊಂಡಿದ್ದ ಕೆಲವು ದೊಡ್ಡ ಮಕ್ಕಳೂ ಬಂದಿದ್ದರು. ಒಂದಿಬ್ಬರು ತಾಯಂದಿರೂ ತಮ್ಮ ಮಕ್ಕಳ ಸಂಗಡ ಬಂದಿದ್ದರು. ಅವರಿಗೂ ಉಳಿಯುವ ಆಸೆ ಇದ್ದಂತಿತ್ತು. ಆದರೂ ತಮ್ಮ ಮಕ್ಕಳನ್ನು ಮುಖ್ಯೋಪಾಧ್ಯಾಯರಲ್ಲಿ ಬಿಟ್ಟು ಮನೆಗೆ ನಡೆದರು.

"ಅದು ಬಂದಾಗ ನಾನು ನಿಮ್ಮನ್ನು ಎಬ್ಬಿಸುತ್ತೇನೆ" ಮಕ್ಕಳೆಲ್ಲ ಅಸೆಂಬ್ಲಿ ಹಾಲಿನಲ್ಲಿ ಹೊದ್ದು ಮಲಗುವಾಗ ಮುಖ್ಯೋಪಾಧ್ಯಾಯರು ಅವರಿಗೆ ಆಶ್ವಾಸನೆ ಕೊಟ್ಟರು. ರೈಲುಗಾಡಿ ಹೇಗೆ ಬರುತ್ತದೆಂಬ ಚಿಂತೆಯಲ್ಲೇ ತಮಗಾರಿಗೂ ನಿದ್ದೆ ಹತ್ತುವುದಿಲ್ಲದೆಂದು ಮಕ್ಕಳು ಭಾವಿಸಿಕೊಂಡರು. ಆದರೆ ಸಂಭ್ರಮದಿಂದ ಅವರೆಷ್ಟು ಬಳಲಿದ್ದರೆಂದರೆ ಮಲಗಿದ್ದೇ ತಡ, ನಿದ್ದೆ ಹೋದರು.

"ನನ್ನನ್ನೂ ಎಬ್ಬಿಸು" ಎಂದು ಹೇಳುವ ಮೊದಲೇ ನಿದ್ದೆಯಲ್ಲಿ ಮುಳುಗಿದರು.

"ಬಂತು, ಬಂತು"

ದನಿಯೊಂದು ಕಿವಿಗೆ ಬೀಳುತ್ತಿದ್ದಂತೆ ದಡಬಡಿಸಿ ಎದ್ದ ತೊತ್ತೊ-ಚಾನ್ ಶಾಲೆ ಮೈದಾನವನ್ನು ದಾಟಿಕೊಂಡು ಗೇಟಿನ ಕಡೆ ಓಡಿದಳು. ಮುಂಜಾವಿನ ಚುಮುಚುಮು ಬೆಳಕಿನಲ್ಲಿ ಒಂದು ದೊಡ್ಡ ರೈಲುಗಾಡಿ ಗೋಚರವಾಗುತ್ತಿತ್ತು. ಹಳಿಗಳಿಲ್ಲದೆಯೇ ರಸ್ತೆಯ ಮೇಲೆ ಸದ್ದು ಮಾಡದೆ ರೈಲುಬಂಡಿ ಬರುತ್ತಿದೆ! ಇದೇನು ಕನಸಾ? ಓಯಿಮಾಚಿ ಟ್ರೈನ್ ಡಿಪೋದಿಂದ ಅದನ್ನು ಬೃಹತ್ತಾದ ಟ್ರೇಲರ್ ಮೇಲೆ ಹೇರಿಕೊಂಡು ಟ್ರಾಕ್ಟರಿನ ಸಹಾಯದಿಂದ ಎಳೆದು ತರಲಾಗಿತ್ತು. ಎತ್ತಿನ ಗಾಡಿಗಿಂತ ದೊಡ್ಡದಾದ ಟ್ರೇಲರ್ ಎನ್ನುವುದೊಂದಿರುತ್ತದೆ. ಅದನ್ನು ಎಳೆತರುವ ಟ್ರಾಕ್ಟರ್ ಎನ್ನುವುದಿನ್ನೊಂದಿರುತ್ತದೆ ಎಂಬಿತ್ಯಾದಿಗಳನ್ನೆಲ್ಲಾ ತೊತ್ತೊ-ಚಾನ್ ಮತ್ತು ಸ್ನೇಹಿತರು ಇದೀಗ ಅರಿತುಕೊಂಡರು.

ಇದ್ದಕಿದ್ದಂತೆ ಏನೋ ಗಲಿಬಿಲಿ. ಟ್ರೇಲರಿನಿಂದ ರೈಲುಬಂಡಿಯನ್ನು ಹೊರತೆಗೆಯುವಂತಹ ಕ್ರೇನುಗಳು ಆ ಕಾಲದಲ್ಲಿ ಇರಲಿಲ್ಲ. ಹೀಗಾಗಿ ಶಾಲೆಯ ಮೈದಾನಕ್ಕೆ ಅದನ್ನು ಕೊಂಡೊಯ್ಯುವುದು ತುಂಬಾ ಕಷ್ಟವಾಗಿತ್ತು. ಅದನ್ನು ತಂದವರು ರೈಲು ಬಂಡಿಯ ಕೆಳಗೆ ಅನೇಕ ಮರದ ದಿಮ್ಮಿಗಳನ್ನು ಇಟ್ಟು ನಿಧಾನವಾಗಿ ಟ್ರೇಲರಿನಿಂದ ಅದನ್ನು ಕೆಳಗುರುಳಿಸಿ ಶಾಲಾ ಮೈದಾನಕ್ಕೆ ತರಬೇಕಾಯಿತು.

"ಸರಿಯಾಗಿ ನೋಡಿಕೊಳ್ಳಿ" ಮುಖ್ಯೋಪಾಧ್ಯಾಯರೆಂದರು. "ಇದನ್ನೇ ರೋಲರ್‌ಗಳು ಎನ್ನುವುದು. ಈ ದೊಡ್ಡ ರೈಲುಬಂಡಿಯನ್ನು ಜರುಗಿಸಲು ರೋಲಿಂಗ್ ಶಕ್ತಿಯನ್ನು ಬಳಸಲಾಗುತ್ತದೆ" ಮಕ್ಕಳೆಲ್ಲಾ ಬಿಟ್ಟ ಕಣ್ಣು ಬಿಟ್ಟಂತಿದ್ದರು.

"ಹೀ - ಹೋ, ಹೀ-ಹೋ" ಹೇಳುತ್ತಾ ಕೆಲಸಗಾರರು ಬಂಡಿ ಉರುಳಿಸ ತೊಡಗಿದರು. ಬೆಳಗಿನ ಸೂರ್ಯನೇ ಅವರ ಲಯಬದ್ಧತೆಗೆ ಎಚ್ಚೆತ್ತು ಕಣ್ಣು ತೆಗೆಯುತ್ತಿರುವಂತಿತ್ತು.

ಶಾಲೆಯಲ್ಲೇ ಈಗಾಗಲೇ ಇದ್ದ ಇತರ ಆರು ರೈಲುಬಂಡಿಗಳಂತೆ ಎಷ್ಟೋ ಜನರನ್ನು ಹೊತ್ತು ಪ್ರಯಾಣಿಸಿದ ಈ ರೈಲುಬಂಡಿಗೂ ಚಕ್ರಗಳನ್ನು ತೆಗೆದು ಹಾಕಲಾಗಿತ್ತು. ಅದರ ಪ್ರಯಾಣದ ಬದುಕು ಕೊನೆಗೊಂಡಿತ್ತು. ಇನ್ನು ಮೇಲೆ ಮಕ್ಕಳ ಕೇಕೆಯೇ ಅದರ ಜೀವಾಳ.

ಮುಂಜಾವಿನ ಎಳೆ ಬಿಸಿಲಲ್ಲಿ ತಮ್ಮ ಪೈಜಾಮುಗಳಲ್ಲಿ ಕಂಗೊಳಿಸುತ್ತಿದ್ದ ಮಕ್ಕಳು ಎಷ್ಟೊಂದು ಪುಳಕಿತರಾಗಿದ್ದರೆಂದರೆ ಕುಣಿದು ಕುಪ್ಪಳಿಸುತ್ತಾ ಮುಖ್ಯೋಪಾಧ್ಯಾಯರ ಭುಜಕ್ಕೆ ಕುತ್ತಿಗೆಗೆ ಜೋಲು ಬೀಳುತ್ತಿದ್ದರು. ಈ ಆಕ್ರಮಣದಿಂದ ತತ್ತರಿಸಿದ್ದ ಮುಖ್ಯೋಪಾಧ್ಯಾಯರು ಸಂತೋಷದಿಂದ ನಸುನಗುತ್ತಿದ್ದರು. ಅವರು ಪ್ರಸನ್ನರಾಗಿದ್ದನ್ನು ಕಂಡ ಮಕ್ಕಳೂ ಕೇಕೆ ಹಾಕತೊಡಗಿದರು. ಅವರಿಗೆಲ್ಲಾ, ಜೀವನಪರ್ಯಂತ ಮರೆಯಲಾಗದಂತಹ ಆನಂದದ ಒಂದು ಗಳಿಗೆ ಅದಾಗಿತ್ತು.

## ಈಜು ಕೊಳ

ಅದು ತೊತ್ತೊ-ಚಾನ್‌ಳ ಬಾಳಿನಲ್ಲಿ ಒಂದು ಮಹತ್ವದ ದಿನ. ಅವಳು ತನ್ನ ಜೀವಮಾನದಲ್ಲೇ ಮೊದಲ ಬಾರಿ ಕೊಳದಲ್ಲಿ ಈಜಿದ ದಿನ ಅದು. ಅದೂ ಮೈಮೇಲೆ ಚೂರು ಬಟ್ಟೆ ಇಲ್ಲದೆ. ಇದಾದದ್ದು ಮುಂಜಾವಿನಲ್ಲಿ. ಅಂದು ಮುಖ್ಯೋಪಾಧ್ಯಾಯರು "ಯಾಕೋ ಸೆಕೆ ಆಗ್ತಾ ಇದೆ. ಈಜು ಕೊಳವನ್ನಾದರೂ ತುಂಬುವಾ" ಎಂದು ಹೇಳಿದರು.

ವ್ಹಾ! ಮಕ್ಕಳೆಲ್ಲಾ ಜಿಗಿದರು. ತೊತ್ತೊ-ಚಾನ್ ಮತ್ತು ಅವಳ ತರಗತಿಯ ಮಕ್ಕಳು ಕೂಡ ಸಂಭ್ರಮದಿಂದ ಚೀರಾಡುತ್ತಾ ಕುಪ್ಪಳಿಸಿದರು. ತೊಮೊಯೆದ ಈಜುಕೊಳ ಸಾಮಾನ್ಯವಾಗಿ ಎಲ್ಲ ಈಜುಕೊಳಗಳಂತೆ ಆಯತಾಕಾರವಾಗಿರಲಿಲ್ಲ. ಅದರ ಒಂದು ತುದಿ ಇನ್ನೊಂದಕ್ಕಿಂತ ಕಿರಿದಾಗಿತ್ತು. ಹೆಚ್ಚು ಕಮ್ಮಿ ದೋಣಿಯಾಕಾರದಲ್ಲಿತ್ತು. ಬಹುಶಃ ಅಲ್ಲಿನ ಭೂಮಿಯ ವಿನ್ಯಾಸವೇ ಇದಕ್ಕೆ ಕಾರಣವಾಗಿರಬಹುದು. ಅದೇನೆ ಆದರೂ ಅದು ದೊಡ್ಡದಾಗಿ ಭವ್ಯವಾಗಿತ್ತು. ತರಗತಿಗಳಿಗೂ ಸಭಾಂಗಣಕ್ಕೂ ಮಧ್ಯೆ ಇತ್ತು.

ಪಾಠ ನಡೆಯುತ್ತಿರುವಾಗಲೇ ತೊತ್ತೊ-ಚಾನ್ ಮತ್ತು ಇತರ ಮಕ್ಕಳು ಕದ್ದು ಕದ್ದು ಈಜುಕೊಳದತ್ತ ನೋಡತೊಡಗಿದರು. ಖಾಲಿ ಇದ್ದಾಗ ಅದು ತರಗಿನಿಂದ

ತುಂಬಿಕೊಂಡು ಏನೇನೂ ಆಕರ್ಷಕವಾಗಿರುತ್ತಿರಲಿಲ್ಲ. ಈಗ ಅದು ಶುಚಿಗೊಂಡು ನೀರಿನಿಂದ ತುಂಬಿಕೊಳ್ಳುತ್ತಿರುವಾಗ ನಿಜವಾದ ಈಜುಕೊಳದಂತೆ ಕಾಣತೊಡಗಿತ್ತು.

ಕೊನೆಗೂ ಊಟದ ಸಮಯ ಬಂದೇ ಬಂತು. ಮಕ್ಕಳೆಲ್ಲ ಈಜುಕೊಳದ ಸುತ್ತ ಸೇರಿಕೊಂಡಾಗ ಮುಖ್ಯೋಪಾಧ್ಯಾಯರು ಹೇಳಿದರು "ನಾವು ಮೊದಲು ಸ್ವಲ್ಪ ವ್ಯಾಯಾಮ ಮಾಡಿ ಆಮೇಲೆ ಈಜುವಾ."

"ನನಗೆ ಈಜಲು ಈಜುಬಟ್ಟೆ ಬೇಡವೇ?" ತೊತ್ತೊ-ಚಾನ್ ಚಿಂತಿಸತೊಡಗಿದಳು. ಒಮ್ಮೆ ತಂದೆ-ತಾಯಿಯ ಜೊತೆ ಕಮಕುರಕ್ಕೆ ಹೋಗಿದ್ದಾಗ ಈಜುಬಟ್ಟೆ, ರಬ್ಬರಿನ ರಿಂಗು ಏನೆಲ್ಲ ತೆಗೆದುಕೊಂಡು ಹೋಗಿದ್ದಳು. ತಮ್ಮ ತರಗತಿಯ ಅಧ್ಯಾಪಕಿ ಈಜುಬಟ್ಟೆ ತರಲೇನಾದರೂ ಹೇಳಿದ್ದರಾ ಎಂದು ನೆನಪಿಸಿಕೊಳ್ಳಲು ಪ್ರಯತ್ನಿಸಿದಳು.

ಅವಳ ಇಂಗಿತವನ್ನು ಅರಿತವರಂತೆ ಮುಖ್ಯೋಪಾಧ್ಯಾಯರು ಹೇಳಿದರು.

"ಈಜು ಬಟ್ಟೆ ಬಗ್ಗೆ ಏನೂ ಯೋಚಿಸಬೇಡಿ. ಸಭಾಂಗಣದಲ್ಲಿ ಹೋಗಿ ನೋಡಿ"

ತೊತ್ತೊ-ಚಾನ್ ಮತ್ತು ಒಂದನೇ ತರಗತಿಯ ಇತರ ಮಕ್ಕಳು ಸಭಾಂಗಣಕ್ಕೆ ಹೋದಾಗ ದೊಡ್ಡ ಮಕ್ಕಳೆಲ್ಲಾ ಸ್ನಾನಕ್ಕೆ ಹೋಗುವವರಂತೆ ನಿರುಮ್ಮಳವಾಗಿ ತಮ್ಮ ಬಟ್ಟೆಗಳನ್ನು ಬಿಚ್ಚಿಡುತ್ತಿದ್ದರು. ಒಬ್ಬೊಬ್ಬರೇ ಬೆತ್ತಲೆಯಾಗಿ ಮೈದಾನಕ್ಕೆ ಓಡಿದರು. ತೊತ್ತೊ-ಚಾನ್ ಮತ್ತು ಸ್ನೇಹಿತರೂ ಕೂಡ ಅವಸರವಸರವಾಗಿ ಅವರಂತೆಯೇ ಮಾಡತೊಡಗಿದರು. ಬೆಚ್ಚಗಿನ ಗಾಳಿಯಲ್ಲಿ ಬಟ್ಟೆಯಿರದೇ ಇರುವುದು ಆಪ್ಯಾಯವೆನಿಸುತ್ತಿತ್ತು. ಸಭಾಂಗಣದ ಹೊರಗಡೆ ಕೊನೆಯ ಮೆಟ್ಟಿಲು ಏರುತ್ತಿದ್ದಂತೆ ಇತರರು ವ್ಯಾಯಾಮ ಮಾಡುತ್ತಿರುವುದನ್ನು ಇವರು ಗಮನಿಸಿದರು. ತೊತ್ತೊ-ಚಾನ್ ಮತ್ತು ಅವಳ ತರಗತಿಯವರು ಬರಿಗಾಲಿನಲ್ಲಿ ಮೆಟ್ಟಲಿಳಿದು ಓಡಿದರು.

ಈಜು ಕಲಿಸಿಕೊಡುತ್ತಿದ್ದವನು ಮಿಯೋ-ಚಾನ್‌ಳ ಅಣ್ಣ, ಜಿಮ್ನಾಸ್ಟಿಕ್ಸ್‌ನಲ್ಲಿ ನಿಪುಣನಾದ ಮುಖ್ಯೋಪಾಧ್ಯಾಯರ ಹಿರಿಮಗ. ಅವನು ತೊಮೊಯೆದಲ್ಲಿ ಮಾಸ್ತರನೇನೂ ಆಗಿರಲಿಲ್ಲ. ಆದರೆ ವಿಶ್ವವಿದ್ಯಾಲಯದ ಈಜು ತಂಡದಲ್ಲಿದ್ದ ಆತನ ಹೆಸರೂ ಶಾಲೆಯ ಹೆಸರೂ ತೊಮೊಯೆ. ತೊಮೊಯೆ-ಚಾನ್ ಈಜು ಉಡುಗೆಯಲ್ಲಿದ್ದ.

ವ್ಯಾಯಾಮದ ನಂತರ ತಣ್ಣನೆ ನೀರು ಮೈಮೇಲೆ ಸುರಿಯುತ್ತಿದ್ದಂತೆ ಮಕ್ಕಳೆಲ್ಲ ಚೀರಾಡುತ್ತಾ ಈಜುಕೊಳಕ್ಕೆ ಧುಮುಕಿದರು. ತೊತ್ತೊ-ಚಾನ್ ತಕ್ಷಣ ನೀರಿಗಿಳಿಯದೆ ಇತರರನ್ನು ನೋಡತೊಡಗಿದಳು. ಅವರಿಗೆ ನಿಲ್ಲಲು ಸಾಧ್ಯವಾಗುತ್ತದೆಂದು ಖಚಿತಗೊಂಡ ಮೇಲೆ ಅವಳು ನೀರಿಗಿಳಿದಳು. ನೀರು ಬಿಸಿ ಇರಲಿಲ್ಲ. ಕೊಳ ದೊಡ್ಡದಾಗಿದ್ದು ಕೈಬೀಸಿದಷ್ಟೂ ಬರೀ ನೀರೇ ನೀರು.

ತೆಳ್ಳನೆಯ, ದಪ್ಪನೆಯ ಹುಡುಗರು, ಹುಡುಗಿಯರೆಲ್ಲಾ ಕೇಕೇ ಹಾಕುತ್ತಾ, ಚೀರಾಡುತ್ತಾ ತಮ್ಮ ಹುಟ್ಟುಡುಗೆಯಲ್ಲಿ ಕಂಗೊಳಿಸುತ್ತಿದ್ದರು.

ಎಂಥ ಮಜಾ, ಎಂದುಕೊಂಡ ತೊತ್ತೊ-ಚಾನ್ ರಾಕಿಗೆ ಈ ಅವಕಾಶ

ಸಿಗಲಿಲ್ಲವಲ್ಲ ಎಂದು ನೊಂದುಕೊಂಡಳು. ಈಜು ಬಟ್ಟೆ ಹಾಕಬೇಕಾಗಿಲ್ಲವೆಂದು ಗೊತ್ತಿದ್ದರೆ ರಾಕಿ ಖಂಡಿತಾ ನೀರಿಗಿಳಿಯುತ್ತಿತ್ತು ಎಂದುಕೊಂಡಳು.

ಮುಖ್ಯೋಪಾಧ್ಯಾಯರು ಮಕ್ಕಳನ್ನು ಬೆತ್ತಲೆ ಈಜಲು ಬಿಡುವುದಾದರೂ ಏಕೆಂದು ಆಶ್ಚರ್ಯವಾಗಬಹುದು. ಅದರ ಬಗ್ಗೆ ನಿಯಮಗಳೇನೂ ಇರಲಿಲ್ಲ. ಯಾರಾದರೂ ಈಜುಬಟ್ಟೆ ತಂದಿದ್ದು ತೊಟ್ಟುಕೊಳ್ಳಬಯಸಿದರೆ ಅದಕ್ಕೇನೂ ಅಡ್ಡಿ ಇರಲಿಲ್ಲ. ಈ ದಿನದಂತೆ ಬೆತ್ತಲೆಯಾಗಿ ನೀರಿಗಿಳಿದರೆ ಅದೂ ಸರಿಯೇ. ಆದರೆ ಆತ ಮಕ್ಕಳನ್ನು ಬೆತ್ತಲೆ ಈಜಾಡಿಸಲು ಕಾರಣ ಗಂಡು ಮತ್ತು ಹೆಣ್ಣು ಮಕ್ಕಳು ಪರಸ್ಪರ ದೇಹದಲ್ಲಿನ ವ್ಯತ್ಯಾಸಗಳ ಬಗ್ಗೆ ಸಲ್ಲದ ಕುತೂಹಲ ಬೆಳೆಸಿಕೊಳ್ಳುವುದು ಸರಿಯಲ್ಲ ಎಂಬ ಅವರ ಭಾವನೆಯಾಗಿತ್ತು. ಅಲ್ಲದೆ ತನ್ನ ದೇಹವನ್ನು ಮುಚ್ಚಿಟ್ಟುಕೊಳ್ಳಲು ಮಗುವೊಂದು ಪೇಚಾಡುವುದೂ ತೀರ ಅಸಹಜವೆಂದು ಆತ ನಂಬಿದ್ದರು.

ಎಲ್ಲ ದೇಹಗಳಿಗೂ ಸೌಂದರ್ಯವಿದೆ ಎಂದು ಮಕ್ಕಳಿಗೆ ಆತ ಕಲಿಸಬಯಸುತ್ತಿದ್ದರು. ತೊಮೊಯೆದಲ್ಲಿ ಯಾಸುಕೀ-ಚಾನ್‌ನಂತರ ಪೋಲಿಯೋ ಪೀಡಿತರು, ತುಂಬಾ ಕುಳ್ಳಗಿನವರು, ಅಂಗವಿಕಲರು ಎಲ್ಲಾ ಇದ್ದರು. ಈ ಮಕ್ಕಳೆಲ್ಲ ಬೆತ್ತಲಾಗಿ ಬೇರೆ ಮಕ್ಕಳ ಜತೆ ಆಡತೊಡಗಿದಾಗ ಅವರಲ್ಲಿನ ಸಂಕೋಚ ನಾಶವಾಗಿ ಕೀಳರಿಮೆ ಬೆಳೆಯುವುದು ತಪ್ಪುತ್ತದೆ ಎಂದು ಯೋಚಿಸುತ್ತಿದ್ದರು ಅವರು. ಹಾಗೆಯೇ ಆಯಿತು. ಮೊದಮೊದಲು ಸಂಕೋಚದಿಂದ ಮುದುರಿಕೊಳ್ಳುತ್ತಿದ್ದ ಅಂಗವಿಕಲ ಮಕ್ಕಳು ಕ್ರಮೇಣ ಬೆರೆಯತೊಡಗಿ ಕೊನೆಗೆ ಸಂಪೂರ್ಣ ನಾಚಿಕೆ ಬಿಟ್ಟರು.

ಅನೇಕ ತಂದೆತಾಯಿಯರಿಗೆ ಇದು ಹಿಡಿಸದೆ ತಮ್ಮ ಮಕ್ಕಳಿಗೆ ಈಜುಡುಪುಗಳನ್ನು ತಂದುಕೊಟ್ಟು ಅದನ್ನು ತೊಟ್ಟುಕೊಂಡೇ ಈಜಬೇಕೆಂದು ಕಟ್ಟಪ್ಪಣೆ ಮಾಡಿದ್ದರು. ಮಕ್ಕಳು ಅದನ್ನು ಬಳಸುವುದೇ ಅಪರೂಪ ಎಂಬ ಬಗ್ಗೆ ಮಾತ್ರ ಅವರಿಗೆ ತಿಳಿದಿರಲಿಲ್ಲ. ಮೊದಲಿನಿಂದಲೂ ಹುಟ್ಟುಡುಗೆಯಲ್ಲೇ ಈಜಲು ನಿರ್ಧರಿಸಿದ್ದ ತೊತ್ತೊ-ಚಾನ್‌ನಂಥವರನ್ನೂ ಮತ್ತು ಈಜುಡುಗೆ ತರಲು ಮರೆತು ಬೆತ್ತಲೆ ನೀರಿಗಿಳಿದವರನ್ನೂ ಕಂಡು ಇತರ ಮಕ್ಕಳಿಗೂ ಬೆತ್ತಲೆಯಾಗಿ ಈಜುವುದೇ ಹೆಚ್ಚು ಮಜ ಎಂಬುದು ಮನದಟ್ಟಾಯಿತು. ಹೀಗಾಗಿ ಅವರೆಲ್ಲ ತಮ್ಮ ಒದ್ದೆಯಾದ ಈಜುಡುಗೆಗಳನ್ನು ಮಾತ್ರ ಮನೆಗೆ ಕೊಂಡೊಯ್ಯುತ್ತಿದ್ದರು ಅಷ್ಟೇ! ಪರಿಣಾಮವಾಗಿ ತೊಮೊಯೆದಲ್ಲಿನ ಮಕ್ಕಳೆಲ್ಲಾ ಚೆರ್‍ರಿಯಂತೆ ಕಂದುಬಣ್ಣಕ್ಕೆ ತಿರುಗಿದರೇ ವಿನಃ ಈಜುಡುಗೆಯ ಬಿಳೀ ಕಲೆ ಅವರ ದೇಹದಲ್ಲಿ ಮೂಡಲೇ ಇಲ್ಲ.

## ಪ್ರಗತಿ ಪತ್ರ

ಅಕ್ಕಪಕ್ಕ ಎಲ್ಲೂ ನೋಡದೆ ಬ್ಯಾಗನ್ನು ಬೆನ್ನಿಗೆ ಹೇರಿಕೊಂಡು ತೊತ್ತೊ-ಚಾನ್ ಸ್ಟೇಷನ್‌ನಿಂದ ಮನೆಗೆ ಓಡುತ್ತಾ ನಡೆದಳು. ಯಾರಾದರೂ ನೋಡಿದವರು ಏನೋ ಅನಾಹುತವಾಗಿರಬೇಕೆಂದುಕೊಳ್ಳುವಂತಿತ್ತು ಅವಳ ರೀತಿ. ಶಾಲೆಯ ಗೇಟಿನಿಂದಲೇ

ಅವಳು ಓಡಲು ಪ್ರಾರಂಭಿಸಿದಳು. ಮನೆಗೆ ಬಂದಿದ್ದೇ ಬಾಗಿಲು ತೆಗೆದು "ನಾನು ಬಂದಾಯಿತು" ಎಂದು ಕೂಗಿ ರಾಕಿಯನ್ನು ಹುಡುಕಿಕೊಂಡು ಹೊರಟಳು. ಅದು ಪಡಸಾಲೆಯಲ್ಲಿ ಮೈಚೆಲ್ಲಿ ಆರಾಮವಾಗಿ ಮಲಗಿತ್ತು. ತೊತ್ತೊ-ಚಾನ್ ಏನೊಂದು ಮಾತನಾಡಲಿಲ್ಲ. ರಾಕಿಯ ಮುಂದೆ ಕುಳಿತು ಬೆನ್ನಿನಿಂದ ಬ್ಯಾಗನ್ನು ತೆಗೆದು ಅದರೊಳಗಿಂದ ರಿಪೋರ್ಟ್ ಕಾರ್ಡನ್ನು ಹೊರತೆಗೆದಳು. ಅದವಳ ಮೊಟ್ಟಮೊದಲ ರಿಪೋರ್ಟ್ ಕಾರ್ಡ್. ರಾಕಿ ತನ್ನ ಅಂಕಗಳನ್ನು ಸರಿಯಾಗಿ ನೋಡಲಿ ಎಂದು ಅದನ್ನು ತೆರೆದು ತೋರಿಸಿದಳು.

"ನೋಡು" ಹೆಮ್ಮೆಯಿಂದ ಹೇಳಿದಳು. ಅದರಲ್ಲಿ 'ಎ' 'ಬಿ' ಮುಂತಾದ ಅನೇಕ ಗ್ರೇಡುಗಳಿದ್ದವು. 'ಎ' ಯು 'ಬಿ'ಗಿಂತ ಒಳ್ಳೆಯದೋ ಅಥವಾ 'ಬಿ'ಯು 'ಎ'ಗಿಂತ ಒಳ್ಳೆಯದೋ ಎಂಬುದು ತೊತ್ತೊ-ಚಾನ್‌ಗೆ ತಿಳಿದಿರಲಿಲ್ಲ. ಇನ್ನು ರಾಕಿಗೆ ಹೇಗೆ ತಿಳಿಯಬೇಕು. ಆದರೆ ತನ್ನ ರಿಪೋರ್ಟ್ ಕಾರ್ಡನ್ನು ಎಲ್ಲರಿಗಿಂತ ಮುಂಚೆ ರಾಕಿಗೆ ತೋರಿಸಬೇಕೆಂದು ತೊತ್ತೊ-ಚಾನ್ ಬಯಸಿದ್ದಳು. ರಾಕಿ ಅದನ್ನು ಕಂಡು ಖುಷಿಯಾಗುತ್ತಾನೆ ಎನ್ನುವುದರಲ್ಲಿ ಅವಳಿಗೆ ಅನುಮಾನವೇ ಇರಲಿಲ್ಲ.

ತನ್ನ ಮುಂದೆ ಪೇಪರನ್ನು ಹಿಡಿದಾಗ ರಾಕಿ ಅದನ್ನು ಮೂಸಿನೋಡಿತು, ಮತ್ತೆ ಹಾಗೆಯೇ ಅವಳತ್ತ ದಿಟ್ಟಿಸಿತು.

"ನಿನಗೆ ಖುಷಿಯಾಗಿದೆ, ತಾನೇ ?" ತೊತ್ತೊ-ಚಾನ್ ಕೇಳಿದಳು.

"ಆದರೆ ಅದರ ತುಂಬಾ ಕಷ್ಟದ ಪದಗಳೇ ಇವೆ. ನಿನಗೆ ಅದೆಲ್ಲಾ ಓದಲು ಕಷ್ಟವಾಗಬಹುದು." ರಾಕಿ ಮತ್ತೊಮ್ಮೆ ಕಾರ್ಡನ್ನು ಸರಿಯಾಗಿ ನೋಡುವಂತೆ ಕತ್ತನ್ನು ಕೊಂಕಿಸಿತು. ಮತ್ತೆ ತೊತ್ತೊ-ಚಾನ್‌ಳ ಕೈ ನೆಕ್ಕಿತು.

"ಗುಡ್" ಎನ್ನುತ್ತಾ ಆಕೆ ಮೇಲೆದ್ದಳು. "ಈಗ ಇದನ್ನು ಅಮ್ಮನಿಗೆ ತೋರಿಸುತ್ತೇನೆ." ತೊತ್ತೊ-ಚಾನ್ ಹೋದ ನಂತರ ರಾಕಿ ಎದ್ದು ತಣ್ಣಗಿನ ಜಾಗವನ್ನು ಹುಡುಕತೊಡಗಿತು. ಮತ್ತೆ ಹಾಗೆಯೇ ಮಲಗಿ ಕಣ್ಣು ಮುಚ್ಚಿತು. ರಾಕಿ ಕಣ್ಣು ಮುಚ್ಚಿದ್ದ ರೀತಿ ಅದು ಪ್ರಗತಿ ಪತ್ರವನ್ನೇ ಕುರಿತು ಯೋಚಿಸುತ್ತಿರುವಂತೆ ತೊತ್ತೊ-ಚಾನ್‌ಳಿಗೆ ಮಾತ್ರವಲ್ಲ, ಅದನ್ನು ನೋಡಿದ ಯಾರಿಗಾದರೂ ಅನಿಸುವಂತಿತ್ತು.

## ಬೇಸಿಗೆ ರಜೆ

"ನಾಳೆ ನಾವು ಕ್ಯಾಂಪು ಹಾಕುತ್ತೇವೆ. ಸಂಜೆ ಹೊದಿಕೆ ಮತ್ತು ಪೈಜಾಮುಗಳನ್ನು ತೆಗೆದುಕೊಂಡು ಶಾಲೆಗೆ ಬನ್ನಿ" ಎಂದು ಮುಖ್ಯೋಪಾಧ್ಯಾಯರು ಕಳಿಸಿದ್ದ ಸಂದೇಶವನ್ನು ತೊತ್ತೊ-ಚಾನ್ ಮನೆಗೆ ತಂದು ಅಮ್ಮನಿಗೆ ತೋರಿಸಿದಳು. ಮರುದಿನದಿಂದಲೇ ಬೇಸಿಗೆಯ ರಜೆ ಪ್ರಾರಂಭವಾಗುವುದಿತ್ತು.

"ಕ್ಯಾಂಪು ಹಾಕುವುದೆಂದರೆ ಏನಮ್ಮಾ" ? ತೊತ್ತೊ-ಚಾನ್ ಅಮ್ಮನ್ನು ಕೇಳಿದಳು. ಅಮ್ಮನಿಗೂ ಅಷ್ಟೇನೂ ಗೊತ್ತಿರಲಿಲ್ಲ. ಆದರೂ ಹೇಳಿದಳು "ಹೊರಗಡೆ ಎಲ್ಲೋ

ಟೆಂಟುಗಳನ್ನು ಹಾಕಿ ಅಲ್ಲಿ ಮಲಗುವುದೆಂದಿರಬೇಕು. ಟೆಂಟಿನಲ್ಲಿ ಮಲಗಿದಾಗ ಚಂದ್ರ ಮತ್ತು ನಕ್ಷತ್ರಗಳನ್ನೆಲ್ಲಾ ನೋಡಬಹುದು. ಟೆಂಟುಗಳನ್ನು ಎಲ್ಲಿ ಹಾಕುತ್ತಾರೋ ಏನೋ, ಆ ಬಗ್ಗೆ ಏನೂ ಹೇಳಿಲ್ಲ. ಪ್ರಾಯಶಃ ಶಾಲೆಯ ಹತ್ತಿರವೇ ಎಲ್ಲೋ ಹಾಕುತ್ತಾರೇನೋ."

ಆ ರಾತ್ರಿ ಮಲಗಿದ ತೊತ್ತೊ-ಚಾನ್‌ಗೆ ನಿದ್ದೆಯೇ ಹತ್ತದು. ಕ್ಯಾಂಪು ಹಾಕುವ ವಿಚಾರ ಅವಳಲ್ಲಿ ಸ್ವಲ್ಪ ದಿಗಿಲನ್ನೇ ಹುಟ್ಟಿಸಿತು. ಅದೊಂದು ದೊಡ್ಡ ಸಾಹಸದಂತೆನಿಸಿ ಎದೆ ಹೊಡೆದುಕೊಳ್ಳತೊಡಗಿತು.

ಮಾರನೆಯ ಮುಂಜಾನೆ ಎದ್ದದ್ದೇ ತಡ ಬಟ್ಟೆಬರೆ ಜೋಡಿಸಿಕೊಳ್ಳತೊಡಗಿದಳು. ಆದರೆ ಆ ಸಂಜೆ ಪೈಜಾಮ, ಹೊದಿಕೆಗಳನ್ನೆಲ್ಲಾ ಜೋಡಿಸಿಕೊಂಡು ಚೀಲವನ್ನು ಹಿಡಿದು ಎಲ್ಲರಿಗೂ ಹೋಗಿಬರುತ್ತೇನೆಂದು ಹೇಳಿ ಹೊರಟ ಮೇಲೆ ಅವಳಿಗೆ ತಾನು ತುಂಬಾ ಸಣ್ಣವಳಂತೆ ಎನಿಸಿ ಭಯವಾಗತೊಡಗಿತು.

ಮಕ್ಕಳೆಲ್ಲಾ ಶಾಲೆಯಲ್ಲಿ ಸೇರಿದಾಗ ಮುಖ್ಯೋಪಾಧ್ಯಾಯರು ಹೇಳಿದರು "ಈಗ ಎಲ್ಲಾ ಸಭಾಂಗಣಕ್ಕೆ ಬನ್ನಿ." ಅವರೆಲ್ಲಾ ಅಲ್ಲಿಗೆ ಬಂದ ನಂತರ ಆತ ಕೈಯಲ್ಲಿ ಗರಿಗರಿಯಾದ ಎಂಥದೋ ಬಟ್ಟೆ ಹಿಡಿದು ಸ್ಟೇಜಿನ ಮೇಲೆ ಹೋದರು. ಅದೇ ಹಸಿರು ಬಣ್ಣದ ಟೆಂಟು.

"ಟೆಂಟನ್ನು ಹೇಗೆ ಹಾಕಬೇಕೆಂದು ನಾನೀಗ ನಿಮಗೆ ತೋರಿಸುತ್ತೇನೆ" ಎನ್ನುತ್ತಾ ಆತ ಅದನ್ನು ಬಿಚ್ಚತೊಡಗಿದರು. "ಸರಿಯಾಗಿ ನೋಡಿಕೊಳ್ಳಿ" ಎಂದು ಹರಡತೊಡಗಿದರು.

ಒಬ್ಬರೇ ಏದುಸಿರು ಬಿಡುತ್ತಾ ಕಂಬವನ್ನು ನೆಟ್ಟು, ಹಗ್ಗವನ್ನು ಕಟ್ಟಿ ಆಚೀಚೆ ಹಿಡಿದೆಳೆದರು. ಮಕ್ಕಳು ನೋಡು ನೋಡುತ್ತಿದ್ದಂತೆಯೇ ಸುಂದರವಾದ ಟೆಂಟನ್ನು ಎಬ್ಬಿಸಿ ನಿಲ್ಲಿಸಿದರು.

"ಈಗ ಬನ್ನಿ" ಮಕ್ಕಳನ್ನು ಕರೆದರು. "ಈಗ ನೀವು ಸಭಾಂಗಣದಲ್ಲಿ ಟೆಂಟುಗಳನ್ನು ಹಾಕಿ ನಿಮ್ಮ ಕ್ಯಾಂಪನ್ನು ಪ್ರಾರಂಭಿಸಿ."

ಟೆಂಟನ್ನು ಹೊರಗೆಲ್ಲೋ ಹಾಕಬಹುದೆಂದು ಅಮ್ಮ ಸಹಜವಾಗೇ ಯೋಚಿಸಿದ್ದಳು. ಆದರೆ ಮುಖ್ಯೋಪಾಧ್ಯಾಯರ ಆಲೋಚನೆಯೇ ಬೇರೆ ಆಗಿತ್ತು. ಅಸೆಂಬ್ಲಿ ಹಾಲ್‌ನಲ್ಲಾದರೆ ಮಧ್ಯದಲ್ಲೆಲ್ಲಾದರೂ ಮಳೆ ಬಂದರೂ, ಚಳಿಯಾದರೂ ಮಕ್ಕಳು ಸುರಕ್ಷಿತವಾಗಿರುತ್ತಾರೆಂಬುದು ಆತನ ಯೋಚನೆ.

"ಕ್ಯಾಂಪು ಹಾಕುತ್ತೇವೆ, ಕ್ಯಾಂಪು ಹಾಕುತ್ತೇವೆ" ಎಂದು ಕೇಕೆ ಹಾಕುತ್ತಾ ಮಕ್ಕಳೆಲ್ಲಾ ಗುಂಪುಗಳಲ್ಲಿ ಬೇರ್ಪಟ್ಟು ಇತರ ಶಿಕ್ಷಕರ ಸಹಾಯದಿಂದ ಬೇಕಾಗಿದ್ದಷ್ಟು ಟೆಂಟುಗಳನ್ನು ಹಾಕಿಯೇ ಬಿಟ್ಟರು. ಒಂದೊಂದು ಟೆಂಟಿನಲ್ಲಿ ಮೂವರು ಮಲಗಬಹುದಾಗಿತ್ತು. ತೊತ್ತೊ-ಚಾನ್ ಬೇಗ ಬೇಗ ತನ್ನ ಪೈಜಾಮ ತೊಟ್ಟುಕೊಂಡಳು. ಟೆಂಟುಗಳೊಳಗೆ ಸೇರಿಕೊಂಡ ಮಕ್ಕಳು ಆಚೀಚೆ ಸರಿದಾಡುತ್ತಾ ಒಮ್ಮೊಮ್ಮೆ ಇತರರ ಟೆಂಟಿಗೂ ಹೋಗಿಬರತೊಡಗಿದರು. ಎಲ್ಲ ಮಕ್ಕಳೂ ತಮ್ಮ ಪೈಜಾಮಗಳನ್ನು ಹಾಕಿಕೊಂಡ ನಂತರ ಮುಖ್ಯೋಪಾಧ್ಯಾಯರು ಪ್ರತಿಯೊಬ್ಬರಿಗೂ

ಕಾಣುವಂತೆ ಅವರ ಮಧ್ಯದಲ್ಲೇ ಕುಳಿತು ತನ್ನ ಹೊರ ದೇಶದ ಪ್ರವಾಸಗಳ ಬಗ್ಗೆ ಹೇಳತೊಡಗಿದರು.

ಕೆಲವರು ಸರಿಯಾಗಿ ಕುಳಿತುಕೊಂಡಿದ್ದರೆ ಮತ್ತೆ ಕೆಲವರು ಟೆಂಟಿನೊಳಗೆ ಮಲಗಿಕೊಂಡು ತಲೆಯನ್ನು ಮಾತ್ರ ಹೊರಚಾಚಿದ್ದರು. ಕೆಲ ಮಕ್ಕಳು ಬೇರೆಯವರ ತೊಡೆಯ ಮೇಲೆ ತಲೆ ಇಟ್ಟುಕೊಂಡು ಮಲಗಿ ತಾವೆಂದೂ ಕಂಡು, ಕೇಳಿರದ ಹೊರದೇಶದ ಕತೆಗಳನ್ನು ಕೇಳತೊಡಗಿದರು. ಮುಖ್ಯೋಪಾಧ್ಯಾಯರ ಕತೆಗಳು ಎಷ್ಟೊಂದು ಮೋಹಕವಾಗಿದ್ದುವೆಂದರೆ ಅವರು ವಿವರಿಸುತ್ತಿದ್ದ ಸಾಗರದಾಚೆಯ ಮಕ್ಕಳೆಲ್ಲಾ ತಮ್ಮ ಸ್ನೇಹಿತರಂತೆ ಅವರಿಗೆ ಅನಿಸತೊಡಗಿತ್ತು.

ಹೀಗೆ ಸಭಾಂಗಣದ ಟೆಂಟಿನಲ್ಲಿ ಮಲಗಿದ ಈ ಸಣ್ಣ ಘಟನೆ ಮಕ್ಕಳಿಗೆ ಎಂದೆಂದೂ ಮರೆಯಲಾಗದ ಸುಂದರ, ಅಮೂಲ್ಯ ಅನುಭವದ ವಿಷಯವಾಗಿ ಪರಿಣಮಿಸಿತು. ಮಕ್ಕಳನ್ನು ಹೇಗೆ ಖುಷಿಪಡಿಸಬೇಕೆಂಬುದು ಮುಖ್ಯೋಪಾಧ್ಯಾಯರಿಗೆ ಸಿದ್ಧಿಸಿದ್ದ ಕಲೆ.

ಮುಖ್ಯೋಪಾಧ್ಯಾಯರು ಮಾತನಾಡುವುದನ್ನು ನಿಲ್ಲಿಸಿ ಅಸೆಂಬ್ಲಿ ಹಾಲಿನ ಲೈಟುಗಳನ್ನೆಲ್ಲಾ ಆರಿಸಿದ ಮೇಲೆ ಮಕ್ಕಳೆಲ್ಲಾ ತಮ್ಮ ತಮ್ಮ ಟೆಂಟುಗಳೊಳಗೆ ತೂರಿಕೊಂಡರು. ಒಂದು ಟೆಂಟಿನಿಂದ ಕಿಲಕಿಲ ನಗು ಕೇಳಿಬಂದರೆ ಇನ್ನೊಂದರಲ್ಲೇನೋ ಗುಸುಗುಸು. ಕೊನೆಯ ಟೆಂಟಿನಲ್ಲಿ ಎಂಥದೋ ನೂಕುನುಗ್ಗಲು. ಕ್ರಮೇಣ ಎಲ್ಲ ತಣ್ಣಗಾಗಿ ಮೌನ ಆವರಿಸಿತು.

ಈ ಕ್ಯಾಂಪಿನಲ್ಲಿ ಚಂದ್ರ ನಕ್ಷತ್ರಗಳೇನೂ ಇರದಿದ್ದರೂ ಮಕ್ಕಳಂತೂ ಸಾಕಷ್ಟು ಮಜಾ ಮಾಡಿದ್ದರು. ಆ ಸಣ್ಣ ಸಭಾಂಗಣದ ಹಾಲೇ ಅವರಿಗೆ ಕ್ಯಾಂಪು ಹಾಕುವ ಮೈದಾನವಾಗಿ ಪರಿಣಮಿಸಿ ಅಂದಿನ ಅವರ ಅನುಭವ ಚಂದ್ರನ ತಂಪಿನಲ್ಲಿ, ನಕ್ಷತ್ರಗಳ ಕಾಂತಿಯಲ್ಲಿ ಶಾಶ್ವತವಾಗಿ ಸೇರಿಹೋಯಿತು.

## ಆ ಮಹಾ ಸಾಹಸ

ಸಭಾಂಗಣದಲ್ಲಿ ಕ್ಯಾಂಪು ಹಾಕಿದ ಎರಡನೇ ದಿನ ತೊತ್ತೊ-ಚಾನ್‌ಳ ಆ ಮಹಾ ಸಾಹಸದ ಕನಸು ನನಸಾಯಿತು. ಆ ದಿನ ಅವಳಿಗೆ ಯಾಸುಕೀ-ಚಾನ್‌ನೊಡನೆ ಏನೋ ಕೆಲಸವಿತ್ತು. ಈ ಗುಟ್ಟು ಅವಳ ತಂದೆ-ತಾಯಿಗಳಿಗಾಗಲಿ ಯಾಸುಕೀ-ಚಾನ್‌ನ ತಂದೆ-ತಾಯಿಗಳಿಗಾಗಲೀ ತಿಳಿದಿರಲಿಲ್ಲ. ಆ ದಿನ ಅವಳು ಯಾಸುಕೀ-ಚಾನ್‌ನನ್ನು ತನ್ನ ಮರಹತ್ತಲು ಆಹ್ವಾನಿಸಿದ್ದಳು.

ತೊಮೊಯೆದಲ್ಲಿ ಪ್ರತಿಯೊಬ್ಬ ಮಕ್ಕಳಿಗೂ ಒಂದೊಂದು ಮರ ಇದ್ದು ಅದನ್ನವರು ತಾವು ಮಾತ್ರ ಹತ್ತಬಹುದಾದ ಮರವೆಂದೇ ಪರಿಗಣಿಸಿದ್ದರು. ತೊತ್ತೊ-ಚಾನ್‌ಳ ಮರ ಬೇಲಿಯ ಬದಿಗೇ ಕುಹೊನ್‌ಬುತ್ಸ್‌ಗೆ ಹೋಗುವ ದಾರಿಯಲ್ಲಿ ಇತ್ತು. ಸ್ವಲ್ಪ ಜಾರುತ್ತಿದ್ದ ದೊಡ್ಡ ಮರ ಅದು. ಆದರೆ ಸ್ವಲ್ಪ ಜಾಣತನದಿಂದ ಹತ್ತಿದರೆ ಒಮ್ಮೆಗೇ ನೆಲದಿಂದ ಆರಡಿ ಮೇಲೇರಿ ಬಿಡಬಹುದಾಗಿತ್ತು.

ಅದು ಕವಲೊಡೆಯುವ ಜಾಗ ವಿಸ್ತಾರವಾಗಿದ್ದು ಆರಾಮವಾಗಿ ಕುಳಿತುಕೊಳ್ಳಬಹುದಾಗಿತ್ತು. ತೊತ್ತೊ-ಚಾನ್ ಸಮಯವಿದ್ದಾಗಲೆಲ್ಲಾ ಮತ್ತು ಶಾಲೆಯಿಂದ ಮನೆಗೆ ಬರುವ ಮುನ್ನ ಅದನ್ನು ಹತ್ತಿ ಕುಳಿತು ನೆಲಮುಗಿಲುಗಳನ್ನೆಲ್ಲಾ, ಹೋಗಿಬರುವ ಜನರನ್ನೆಲ್ಲಾ ನೋಡುವಳು. ಮಕ್ಕಳು ತಮ್ಮ ಮರಗಳನ್ನು ತಮ್ಮದೇ 'ಸ್ವಂತ ಆಸ್ತಿ' ಎಂಬಂತೆ ನೋಡಿಕೊಳ್ಳುತ್ತಿದ್ದರು. ಬೇರೆಯವರಾರಾದರೂ ತಮ್ಮ ಮರ ಹತ್ತಬೇಕಾದರೆ ತುಂಬಾ ನಮ್ರವಾಗಿ 'ಕ್ಷಮಿಸಿ, ನಾನು ಸಹ ಬರಬಹುದಾ ?' ಎಂದು ಅಪ್ಪಣೆ ಕೇಳಬೇಕೆಂಬ ನಿಯಮವಿತ್ತು.

ಪೋಲೀಯೋ ಪೀಡಿತನಾದ ಯಾಸುಕೀ-ಚಾನ್‌ನು ತನ್ನ ಜೀವನದಲ್ಲೇ ಮರ ಹತ್ತಿಲ್ಲವಾದ್ದರಿಂದ ಅವನಿಗೆ ತನ್ನದೆನ್ನುವ ಮರ ಇರಲಿಲ್ಲ. ಆದ್ದರಿಂದಲೇ ತೊತ್ತೊ-ಚಾನ್ ಅವನನ್ನು ತನ್ನ ಮರಕ್ಕೆ ಆಹ್ವಾನಿಸಿದ್ದಳು. ಇದು ಯಾರಿಗಾದರೂ ಗೊತ್ತಾದರೆ ಸುಮ್ಮನೆ ಗಲಿಬಿಲಿ ಮಾಡುತ್ತಾರೆಂದು ಯಾರಿಗೂ ಹೇಳದೆ ವಿಷಯವನ್ನು ಗುಟ್ಟಾಗಿ ಇಟ್ಟಿದ್ದರು.

ತೊತ್ತೊ-ಚಾನ್ ಮನೆ ಬಿಟ್ಟಾಗ ಅಮ್ಮನಿಗೆ ತಾನು ದೆನೆನ್‌ಚೊಫುನಲ್ಲಿ ಯಾಸುಕೀ-ಚಾನ್‌ನನ್ನು ನೋಡಲು ಹೋಗುತ್ತಿರುವುದಾಗಿ ಹೇಳಿದಳು. ಸುಳ್ಳು ಹೇಳುತ್ತಿರುವುದರಿಂದ ಅಮ್ಮನ ಮುಖ ನೋಡದೆ ಬೂಟಿನ ಲೇಸುಗಳಲ್ಲೇ ಕಣ್ಣು ಹುದುಗಿಸಿದಳು. ಆದರೆ ಸ್ಟೇಷನ್ನಿನವರೆಗೂ ಬಿಡಲು ಬಂದ ರಾಕಿಯ ಹತ್ತಿರ ಮಾತ್ರ ನಿಜ ಬಾಯಿಬಿಟ್ಟಳು.

"ನಾನಿವತ್ತು ಯಾಸುಕೀ-ಚಾನ್‌ನನ್ನು ನನ್ನ ಮರಕ್ಕೆ ಹತ್ತಿಸುತ್ತೇನೆ" ಎಂದಳು.

ರೈಲು ಪಾಸನ್ನು ಕತ್ತಿಗೆ ಜೋತಾಡಿಸಿಕೊಂಡು ತೊತ್ತೊ-ಚಾನ್ ಶಾಲೆ ಸೇರಿದಾಗ ಯಾಸುಕೀ-ಚಾನ್ ಆಗಲೇ ಹೂತೋಟದಲ್ಲಿ ಕುಳಿತಿದ್ದ. ಬೇಸಿಗೆ ರಜೆಯಾದ್ದರಿಂದ ಆರೈಕೆಯಿಲ್ಲದ ಹೂಗಿಡಗಳು ಒಣಗಿಕೊಂಡಿದ್ದವು. ತೊತ್ತೊ-ಚಾನ್‌ಗಿಂತ ಒಂದೇ ವರ್ಷಕ್ಕೆ ದೊಡ್ಡವನಾದರೂ ಯಾಸುಕೀ-ಚಾನ್ ಮಾತನಾಡುವಾಗಲೆಲ್ಲಾ ತುಂಬಾ ದೊಡ್ಡವನಂತೆ ಅನಿಸುತ್ತಿತ್ತು.

ತೊತ್ತೊ-ಚಾನ್‌ಳನ್ನು ಕಂಡದ್ದೇ ತಡ ಯಾಸುಕೀ-ಚಾನ್ ಕಾಲೆಳೆದುಕೊಂಡು ಅವಸರದಿಂದ ಅವಳ ಕಡೆಗೆ ಧಾವಿಸಿದ. ಸಮತೋಲನ ಸಿಗಲೆಂದು ಕೈಗಳನ್ನು ಮುಂಚಾಚಿ ಹಿಡಿದಿದ್ದ. ತಾವು ಮಾಡಲಿರುವ ಕೆಲಸವನ್ನು ನೆನೆದು ರೋಮಾಂಚಿತಳಾದ ತೊತ್ತೊ-ಚಾನ್ ಮುಸಿಮುಸಿ ನಕ್ಕಳು. ಯಾಸುಕೀ-ಚಾನ್‌ನೂ ಅವಳಂತೆಯೇ ನಕ್ಕ.

ತೊತ್ತೊ-ಚಾನ್ ಯಾಸುಕೀ-ಚಾನ್‌ನನ್ನು ತನ್ನ ಮರದ ಹತ್ತಿರಕ್ಕೆ ಕರೆದೊಯ್ದು ಕಳೆದ ರಾತ್ರಿಯೇ ಯೋಜಿಸಿಕೊಂಡಿದ್ದಂತೆ ಕಾವಲುಗಾರನ ಶೆಡ್ಡಿಗೆ ಹೋಗಿ ಒಂದು ಏಣಿಯನ್ನು ಎಳೆತಂದಳು. ಕವಲೊಡೆಯುವ ಭಾಗವನ್ನು ತಲುಪುವಂತೆ ಅದನ್ನು ಮರಕ್ಕೆ ಆನಿಸಿ ಇಟ್ಟಳು. ತಾನು ಬೇಗ ಬೇಗ ಏಣಿಯನ್ನು ಹತ್ತಿ ಮೇಲ್ಭಾಗದಿಂದ ಗಟ್ಟಿಯಾಗಿ ಹಿಡಿದುಕೊಂಡು ಯಾಸುಕೀ-ಚಾನ್‌ನನ್ನು ಕರೆದಳು "ಸರಿಯಾಗಿದೆ, ಮೆಲ್ಲಗೆ ಹತ್ತು."

ಪೋಲೀಯೋ ಪೀಡಿತನಾದ ಯಾಸುಕೀ-ಚಾನ್‌ನ ಕೈಕಾಲುಗಳು ಎಷ್ಟೊಂದು ದುರ್ಬಲವಾಗಿದ್ದವೆಂದರೆ ಏಣಿ ಹತ್ತುವುದಿರಲಿ, ಮೊದಲ ಮೆಟ್ಟಲಿಗೆ ಕಾಲಿಡುವುದೂ ಅವನಿಗೆ ಸಾಧ್ಯವಾಗಲಿಲ್ಲ. ತೊತ್ತೊ-ಚಾನ್ ಕೆಳಗಿಳಿದು ಯಾಸುಕೀ-ಚಾನ್ ಏಣಿ ಹತ್ತಲು ಸಹಾಯವಾಗುವಂತೆ ಹಿಂದಿನಿಂದ ಅವನನ್ನು ತಳ್ಳತೊಡಗಿದಳು. ಆದರೆ ತೊತ್ತೊ-ಚಾನ್ ತುಂಬಾ ಸಣ್ಣವಳು. ಏಣಿಯನ್ನು ಬೀಳದಂತೆ ಹಿಡಿದುಕೊಂಡು ಯಾಸುಕೀ-ಚಾನ್‌ನನ್ನು ತಳ್ಳುವ ಈ ಪ್ರಯತ್ನವೆಲ್ಲ ವ್ಯರ್ಥ. ಈಗ ಯಾಸುಕೀ-ಚಾನ್ ಮೆಟ್ಟಿಲ ಮೇಲಿಟ್ಟಿದ್ದ ಕಾಲನ್ನು ಕೆಳಗಿಳಿಸಿ ನೆಲ ನೋಡುತ್ತಾ ನಿಂತುಬಿಟ್ಟ. ತಾನಂದುಕೊಂಡದ್ದಕ್ಕಿಂತ ಕಷ್ಟವಾದ ಕೆಲಸ ಇದು ಎಂಬುದು ತೊತ್ತೊ-ಚಾನ್‌ಳಿಗೆ ಮೊದಲ ಬಾರಿಗೆ ಮನವರಿಕೆಯಾಯಿತು. ಅವಳಾದರೂ ಏನು ಮಾಡಿಯಾಳು ?



ಯಾಸುಕೀ-ಚಾನ್‌ನನ್ನು ಮರ ಹತ್ತಿಸಬೇಕೆಂದು ಅವಳು ತೀವ್ರವಾಗಿ ಬಯಸಿದ್ದಳು. ಈಗವನ ಮುಂದೆ ಹೋಗಿ ಮುಖಕ್ಕೆ ಮುಖ ಕೊಟ್ಟಳು. ತೀರಾ ಖಿನ್ನನಾದಂತೆ ನಿಂತುಬಿಟ್ಟಿದ್ದ ಅವನನ್ನು ನಗಿಸಲು ಗಲ್ಲಗಳಲ್ಲಿ ಗಾಳಿ ತುಂಬಿಕೊಂಡು ಚಿತ್ರವಿಚಿತ್ರ ಮುಖಭಂಗಿಯಿಂದ ಅವನ ಗಮನ ಸೆಳೆಯಲು ಪ್ರಯತ್ನಿಸಿದಳು.

"ಸ್ವಲ್ಪ ಇರು, ನನಗೊಂದು ಉಪಾಯ ಹೊಳೆಯಿತು."

ಕಾವಲುಗಾರನ ಶೆಡ್ಡಿಗೆ ಓಡಿ ಹೋಗಿ ಸಹಾಯವಾಗುವಂಥದ್ದೇನಾದರೂ ಸಿಗಬಹುದಾ ಎಂದು ಒಂದೊಂದೇ ವಸ್ತುಗಳನ್ನು ಹೊರಗೆಳೆದು ಹಾಕತೊಡಗಿದಳು. ಈಗವಳಿಗೆ ಒಂದು ಅಗಲವಾದ ಮೆಟ್ಟಿಲುಗಳುಳ್ಳ ಏಣಿ ಸಿಕ್ಕಿತು. ಅದು ಗಟ್ಟಿಯಾಗಿ ನಿಲ್ಲುವಂಥದಾದ್ದರಿಂದ ಅದನ್ನು ಅವಳು ಹಿಡಿದುಕೊಳ್ಳುವ ಅವಶ್ಯಕತೆ ಇರಲಿಲ್ಲ.

ತನ್ನ ಶಕ್ತಿಗೆ ಅಚ್ಚರಿಗೊಳ್ಳುತ್ತಾ ಏಣಿಯನ್ನು ಎಳೆತಂದಳು. ಅದು ಮರದ ಕವಲೊಡೆಯುವ ಭಾಗಕ್ಕೆ ಸರಿಯಾಗಿ ತಲುಪುತ್ತಿರುವುದನ್ನು ಕಂಡು ಖುಷಿಗೊಂಡಳು.

"ಈಗ ಹೆದರೋದೇ ಬೇಡ" ಎತ್ತರದ ದನಿಯಲ್ಲಿ ಹೇಳಿದಳು "ಇದು ಒಂಚೂರೂ ಅಲ್ಲಾಡೋದಿಲ್ಲ."

ಯಾಸುಕೀ-ಚಾನ್ ದಿಗಿಲಿನಿಂದ ಏಣಿಯ ಕಡೆ ನೋಡಿದ. ಮತ್ತೆ ಬೆವರಿನಿಂದ ತೊಯ್ದು ನಿಂತ ತೊತ್ತೊ-ಚಾನ್‌ಳನ್ನು ನೋಡಿದ. ಅವನೂ ಧಾರಾಳವಾಗಿ ಬೆವರಿದ್ದ. ತಲೆ ಎತ್ತಿ ಮರವನ್ನೊಮ್ಮೆ ನೋಡಿದ. ಆತ್ಮವಿಶ್ವಾಸದಿಂದ ಕಾಲನ್ನು ಎತ್ತಿ ತಕ್ಷಣ ಮೆಟ್ಟಲ ಮೇಲಿಟ್ಟ.

ಏಣಿಯ ತುತ್ತತುದಿಯ ಮೆಟ್ಟಿಲು ತಲುಪಲು ಯಾಸುಕೀ-ಚಾನ್ ತೆಗೆದುಕೊಂಡ ಸಮಯದ ಪರಿವೆ ಇಬ್ಬರಿಗೂ ಇರಲಿಲ್ಲ. ಬಿಸಿಲಿನ ಝಳ ತೀಕ್ಷ್ಣವಾಗಿದ್ದರೂ ಅವರಿಗೆ ಅದರ ಗಮನವಿರಲಿಲ್ಲ. ಅವರ ಗುರಿ ಇದ್ದದ್ದು ಯಾಸುಕೀ-ಚಾನ್ ಮರಹತ್ತುವ ಕಡೆಗೆ ಮಾತ್ರ. ತೊತ್ತೊ-ಚಾನ್ ಯಾಸುಕೀ-ಚಾನ್‌ನ ಕೆಳಗೆ ನಿಂತು ಅವನ ಕುಂಡೆಗೆ ತನ್ನ ತಲೆಯನ್ನು ಆಧಾರಕೊಟ್ಟು ಅವನ ಕಾಲನ್ನು ಎತ್ತಿ ಒಂದೊಂದೇ ಮೆಟ್ಟಿಲ ಮೇಲೇರಿಸುತ್ತಿದ್ದಳು. ಯಾಸುಕೀ-ಚಾನ್ ಒದ್ದಾಡುತ್ತಾ, ಹೆಣಗುತ್ತಾ ಕೊನೆಗೆ ಏಣಿಯ ತುದಿ ತಲುಪಿಯೇ ಬಿಟ್ಟ.

"ವಾಹ್ವಾ !"

ಆದರೆ ಏನೂ ಪ್ರಯೋಜನವಾಗಲಿಲ್ಲ. ತೊತ್ತೊ-ಚಾನ್ ಮರಕ್ಕೆ ಜಿಗಿದಳು. ಆದರೆ ಎಷ್ಟೆಲ್ಲಾ ಪ್ರಯತ್ನಿಸಿದರೂ ಯಾಸುಕೀ-ಚಾನ್‌ನನ್ನು ಮರಕ್ಕೆ ಎಳೆದುಕೊಳ್ಳಲು ಸಾಧ್ಯವಾಗಲಿಲ್ಲ. ಏಣಿಯನ್ನು ಗಟ್ಟಿಹಿಡಿದು ಯಾಸುಕೀ-ಚಾನ್ ತೊತ್ತೊ-ಚಾನ್‌ಳತ್ತ ನೋಡಿದ. ಅವಳಿಗೆ ಆ ಕ್ಷಣ ಅಳುವೇ ಬಂದುಬಿಟ್ಟಿತು. ಯಾಸುಕೀ-ಚಾನ್‌ನನ್ನು ತನ್ನ ಮರಕ್ಕೆ ಕರೆದೊಯ್ದು ಅವನಿಗೆ ಏನೆಲ್ಲಾ ತೋರಿಸಬೇಕೆಂದಿದ್ದಳು. ಆದರೆ ಅವಳು ಅಳಲಿಲ್ಲ. ತಾನು ಅತ್ತರೆ ಯಾಸುಕೀ-ಚಾನ್‌ನೂ ಅಳಲು ಶುರು ಮಾಡುತ್ತಾನೆಂಬುದು ಅವಳಿಗೆ ಗೊತ್ತು.

ಈಗವಳು ಪೋಲಿಯೋದಿಂದ ಅಂಟಿಕೊಂಡ ಅವನ ಕೈಬೆರಳುಗಳನ್ನು ತನ್ನ ಕೈಯಲ್ಲಿ ತೆಗೆದುಕೊಂಡು ದಿಟ್ಟಿಸಿದಳು. ಅವನ ಕೈ ಅವಳದಕ್ಕಿಂತ ದೊಡ್ಡದಾಗಿತ್ತು. ಬೆರಳುಗಳು ನೀಳವಾಗಿದ್ದುವು. ತುಂಬಾ ಹೊತ್ತು ಅವನ ಕೈ ಹಿಡಿದುಕೊಂಡೇ ಇದ್ದಳು. ಮತ್ತೆ ಹೇಳಿದಳು "ನೀನು ಏಣಿಯ ಮೇಲೆ ಮಲಗಿಕೋ. ನಾನು ನಿನ್ನನ್ನು ಹೇಗಾದರೂ ಎಳೆದುಕೊಳ್ಳುತ್ತೇನೆ."

ಮರದ ಮೇಲೆ ನಿಂತ ತೊತ್ತೊ-ಚಾನ್, ಏಣಿಯ ಮೇಲೆ ಬೋರಲಾಗಿ ಮಲಗಿದ್ದ ಯಾಸುಕೀ-ಚಾನ್‌ನನ್ನು ಎಳೆದುಕೊಳ್ಳುತ್ತಿರುವ ಈ ದೃಶ್ಯವನ್ನು ಯಾರಾದರೂ ದೊಡ್ಡವರು ನೋಡಿದ್ದರೆ ಚೀರಿಬಿಡುತ್ತಿದ್ದರು. ಅದೊಂದು ಭಯಂಕರ ಅಪಾಯಕಾರಿ ಕೆಲಸದಂತೆ ಕಂಡುಬರುತ್ತಿತ್ತು.

ಆದರೆ ಯಾಸುಕೀ-ಚಾನ್ ತೊತ್ತೊ-ಚಾನ್‌ಳನ್ನು ಸಂಪೂರ್ಣ ನಂಬಿಬಿಟ್ಟ. ತೊತ್ತೊ-ಚಾನ್ ತನ್ನ ಪ್ರಾಣವನ್ನೇ ಒತ್ತೆಯಿಟ್ಟು ಈ ಕೆಲಸಕ್ಕೆ ಇಳಿದಿದ್ದಳು. ತನ್ನ ಪುಟ್ಟ ಕೈಗಳಿಂದ ಅವನನ್ನು ಗಟ್ಟಿಯಾಗಿ ಹಿಡಿದುಕೊಂಡು, ಶಕ್ತಿಮೀರಿ ಎಳೆದಳು. ಇವರ ಮೇಲೆ ಕರುಣೆ ತೋರುವಂತೆ ಆಗಸೆಗ ಮೋಡಗಳು ಸುಡುವ ಸೂರ್ಯನನ್ನು ಮರೆಮಾಡುತ್ತಿದ್ದವು.

ಅಂತೂ ಕೊನೆಗೆ ಇಬ್ಬರೂ ಮರದ ಮೇಲೆ ಎದುರುಬದುರಾಗಿ ನಿಂತರು. ತನ್ನ ಕೂದಲನ್ನು ಹಿಂದಕ್ಕೆ ತಳ್ಳಿಕೊಳ್ಳುತ್ತಾ ತೊತ್ತೊ-ಚಾನ್ ಬಾಗಿ ಮೃದುವಾಗಿ ಹೇಳಿದಳು "ನನ್ನ ಮರಕ್ಕೆ ನಿನಗೆ ಸ್ವಾಗತ."

ಯಾಸುಕೀ-ಚಾನ್ ಮರಕ್ಕೆ ಒರಗಿ ನಿಂತು ತುಸು ಸಂಕೋಚದಿಂದ ಮುಗುಳ್ನಕ್ಕು "ಕ್ಷಮಿಸು, ನಾನು ಒಳಕ್ಕೆ ಬರಬಹುದಾ ?" ಎಂದು ಕೇಳಿದ.

ಯಾಸುಕೀ-ಚಾನ್ ತಾನು ಹಿಂದೆಂದೂ ನೋಡಿರದಂತಹ ದೃಶ್ಯಗಳನ್ನು ಮರದ ಮೇಲಿಂದ ಮೊದಲ ಬಾರಿಗೆ ಕಂಡ. "ಮರ ಹತ್ತುವುದೆಂದರೆ ಹೀಗಿರುತ್ತೆ ಅಲ್ವಾ" ಎಂದ ಪುಳಕಗೊಂಡು. ಅವರು ಸಾಕಷ್ಟು ಹೊತ್ತು ಮರದ ಮೇಲೆ ಕುಳಿತಿದ್ದು ಅದೂ ಇದೂ ಮಾತನಾಡಿಕೊಂಡರು.

"ಅಮೆರಿಕಾದಲ್ಲಿರೋ ನನ್ನ ಅಕ್ಕ ಅಲ್ಲಿ ಟೆಲಿವಿಷನ್ ಅನ್ನುವ ಎಂಥದ್ದೋ ಇದೆಯೆಂದು ಹೇಳುತ್ತಾಳೆ" ಎಂದ ಯಾಸುಕೀ-ಚಾನ್ ಉತ್ಸುಕತೆಯಿಂದ. "ಅದು ಜಪಾನಿಗೂ ಬಂದರೆ ಸುಮೋಕುಸ್ತಿಯನ್ನು ಮನೆಯಲ್ಲಿ ಕುಳಿತೇ ನೋಡಬಹುದಂತೆ, ಅದೊಂದು ಪೆಟ್ಟಿಗೆಯ ಹಾಗಿರುತ್ತಂತೆ."

ಹೊರಗಡೆ ಹೇಗೆಂದರೆ ಹಾಗೆ ಅಡ್ಡಾಡಲಾಗದ ಯಾಸುಕೀ-ಚಾನ್‌ನಿಗೆ ಮನೆಯಲ್ಲಿ ಕುಳಿತು ಇಂಥದೆಲ್ಲಾ ನೋಡುವುದರ ಪ್ರಾಮುಖ್ಯತೆ ಎಷ್ಟು ಎಂಬುದರ ಊಹೆ ತೊತ್ತೊ-ಚಾನ್‌ಳಿಗೆ ಆಗ ಇರಲಿಲ್ಲ.

ಸುಮೋ ಕುಸ್ತಿಗಾರರಂತಹ ದಢೂತಿಗಳು ಮನೆಯಲ್ಲಿನ ಒಂದು ಪೆಟ್ಟಿಗೆಯೊಳಕ್ಕೆ ಹೇಗೆ ಹೋಗುತ್ತಾರೆಂಬುದು ಮಾತ್ರ ಅವಳಿಗೆ ಅರ್ಥವಾಗಲಿಲ್ಲ. ಆದರೆ ಎಲ್ಲವೂ ಬಲು ಆಕರ್ಷಕವಾಗಿ ಕಂಡಿತು. ಆ ದಿನಗಳಲ್ಲಿ ಯಾರಿಗೂ ಟೆಲಿವಿಷನ್ ಬಗ್ಗೆ ಗೊತ್ತಿರಲಿಲ್ಲ. ಅದರ ಬಗ್ಗೆ ತೊತ್ತೊ-ಚಾನ್ ಇವತ್ತೇ ಮೊಟ್ಟಮೊದಲು ಯಾಸುಕೀ-ಚಾನ್ ನಿಂದ ಕೇಳಿದ್ದು.

ಹಕ್ಕಿಗಳು ತಮ್ಮಷ್ಟಕ್ಕೇ ಎಲ್ಲೋ ಉಲಿಯುತ್ತಿದ್ದವು. ಮಕ್ಕಳಿಬ್ಬರ ಆನಂದ ಮೇರೆ ಮೀರಿತ್ತು. ಯಾಸುಕೀ-ಚಾನ್ ತನ್ನ ಜೀವನದಲ್ಲೇ ಮೊದಲು ಮತ್ತು ಕೊನೆಯ ಬಾರಿಗೆ ಮರ ಹತ್ತಿದನು.

## ಸಾಹಸದ ಪರೀಕ್ಷೆ

"ಭಯ ಹುಟ್ಟಿಸುತ್ತೆ, ಕೆಟ್ಟ ವಾಸನೆಯಿರುತ್ತೆ, ಆದರೆ ಬಲು ರುಚಿ, ಇದು ಏನು ?" ಅರ್ಥ ಗೊತ್ತಿದ್ದರೂ ಮಕ್ಕಳಿಗೆಲ್ಲಾ ಈ ಒಗಟೆಂದರೆ ಪ್ರಾಣ. ಈ ಒಗಟನ್ನು ಒಬ್ಬರಿಗೊಬ್ಬರು ಕೇಳಿಕೊಳ್ಳುವುದರಲ್ಲಿ ತೊತ್ತೊ-ಚಾನ್ ಮತ್ತು ಸ್ನೇಹಿತರಿಗೆಲ್ಲಾ ಮುಗಿಯದ ಉತ್ಸಾಹ.

ಇದರ ಉತ್ತರವೆಂದರೆ "ಕಕ್ಕಸಿನಲ್ಲಿ ಒಂದು ದೆವ್ವ ಕುಳಿತು ಜಾಮ್ ಹೆಚ್ಚಿದ ಬನ್ನು ತಿನ್ನುವುದು."

ತೊಮೊಯೆದಲ್ಲಿನ ಸಾಹಸದ ಪರೀಕ್ಷೆ ಮುಗಿದ ರೀತಿ ಕೂಡ ಒಂದು ಒಗಟೇ ಆಗಬಲ್ಲುದು. "ಭಯ ಹುಟ್ಟಿಸುತ್ತದೆ, ನವೆಯಾಗುತ್ತೆ, ನಗಿಸುತ್ತೆ ಇದು ಏನು ?" ಶಾಲೆಯಲ್ಲಿ ಟೆಂಟ್ ಹಾಕಿದ ರಾತ್ರಿಯೇ ಮುಖ್ಯೋಪಾಧ್ಯಾಯರು ಘೋಷಿಸಿದರು."ಒಂದು ರಾತ್ರಿ ನಾವು, ಕುಹೊನ್‌ಬುತ್ಸು ದೇವಸ್ಥಾನದಲ್ಲಿ ಧೈರ್ಯದ ಪರೀಕ್ಷೆ ಇಡೋಣ. ಯಾರು ದೆವ್ವ ಆಗಲಿಕ್ಕೆ ಇಷ್ಟಪಡುತ್ತಾರೋ ಅವರು ಕೈಯೆತ್ತಿ."

ಏಳು ಜನ ಹುಡುಗರು ಕೈಯೆತ್ತಿದರು. ಗೊತ್ತುಪಡಿಸಿದಂತೆ ಮಕ್ಕಳೆಲ್ಲಾ ಶಾಲೆಯಲ್ಲಿ ಸೇರಿದ ಮೇಲೆ ದೆವ್ವವಾಗಲಿದ್ದ ಹುಡಗರು ತಾವೇ ಮಾಡಿದ ಮುಖವಾಡಗಳನ್ನು ಎತ್ತಿಕೊಂಡು ದೇವಸ್ಥಾನದ ಮೈದಾನದಲ್ಲಿ ಅಡಗಿಕೊಳ್ಳಲು ಹೋದರು.

ಹೋಗುವಾಗ "ಸಾಯುವಂತೆ ಹೆದರಿಸುತ್ತೀವಿ, ನಿಮ್ಮನ್ನು" ಎಂದು ಹೇಳುತ್ತಾ ಹೋದರು. ಉಳಿದ ಮೂವತ್ತು ಮೂವತ್ತೈದು ಮಕ್ಕಳು ಸಣ್ಣ ಸಣ್ಣ ಗುಂಪುಗಳಲ್ಲಿ ವಿಭಾಗಗೊಂಡು, ಒಂದೊಂದೇ ಗುಂಪಾಗಿ ಸ್ವಲ್ಪ ಸ್ವಲ್ಪ ಸಮಯದ ಅಂತರದಲ್ಲಿ ದೇವಸ್ಥಾನದ ಕಡೆಗೆ ಹೋದರು. ಅವರು ದೇವಸ್ಥಾನದ ಸುತ್ತೆಲ್ಲಾ, ಸ್ಮಶಾನವನ್ನೂ ಸೇರಿದಂತೆ ಸುತ್ತು ಹೊಡೆದು ಶಾಲೆಗೆ ವಾಪಸ್ಸು ಬಂದು ಸೇರಬೇಕಿತ್ತು.

ಇದು ಮಕ್ಕಳ ಧೈರ್ಯದ ಪರೀಕ್ಷೆಯಾಗಿದ್ದರೂ ಯಾರಾದರೂ ಹಾಗೆಯೇ ವಾಪಸ್ಸು ಬರಬಯಸಿದರೆ ಖಂಡಿತಾ ಬರಬಹುದೆಂದು ಮುಖ್ಯೋಪಾಧ್ಯಾಯರು ಹೇಳಿದ್ದರು. ತೊತ್ತೊ-ಚಾನ್ ಹತ್ತಿರ ಅಮ್ಮನಿಂದ ಪಡೆದುಕೊಂಡಿದ್ದ ಫ್ಲಾಷ್ ಲೈಟಿತ್ತು. "ಕಳೆಯಬೇಡ" ಎಂದು ಹೇಳಿ ಕೊಟ್ಟಿದ್ದಳು ಅಮ್ಮ.

ಕೆಲ ಹುಡುಗರು ದೆವ್ವಗಳನ್ನು ಹಿಡಿದು ಹಾಕುತ್ತೇವೆಂದು ಚಿಟ್ಟೆಬಲೆಗಳನ್ನು ತಂದಿದ್ದರೆ ಮತ್ತೆ ಕೆಲವರು ದೆವ್ವಗಳನ್ನು ಕಟ್ಟಿಹಾಕುತ್ತೇವೆಂದು ಹಗ್ಗಗಳನ್ನು ತಂದಿದ್ದರು.

ಅವರೆಲ್ಲಾ ಏನು ಮಾಡಬೇಕೆಂದು ಮುಖ್ಯೋಪಾಧ್ಯಾಯರು ವಿವರಿಸುವ ವೇಳೆಗೆ

ಕತ್ತಲಾಗಿತ್ತು. "ಕಲ್ಲು, ಕಾಗದ, ಕತ್ತರಿ" ಹೆಸರಿನ ಬೇರೆ ಬೇರೆ ಗುಂಪುಗಳಾದರು. ಸಡಗರದಿಂದ ಮೊದಲ ಗುಂಪು ಗೇಟನ್ನು ದಾಟಿ ನಡೆಯಿತು. ಕೊನೆಗೂ ತೊತ್ತೊ-ಚಾನ್ ಗುಂಪು ಹೋಗುವ ಸರದಿ ಬಂತು.

ಅವರೆಲ್ಲಾ ದೇವಸ್ಥಾನ ಸೇರುವವರೆಗೂ ಯಾವ ದೆವ್ವವೂ ಬರುವುದಿಲ್ಲ ಎಂದು ಮುಖ್ಯೋಪಾಧ್ಯಾಯರು ಹೇಳಿದ್ದರೂ ಮಕ್ಕಳಿಗೆ ನಂಬಿಕೆಯಿರಲಿಲ್ಲ. ಅವರು ದಿಗಿಲಿನಿಂದಲೇ ನಡೆದು ದೇವಸ್ಥಾನ ತಲುಪಿದರು. ಚಂದ್ರ ಹುಟ್ಟಿದ್ದರೂ ದೇವಸ್ಥಾನದ ಸುತ್ತಮುತ್ತ ಕಗ್ಗತ್ತಲು ತುಂಬಿಕೊಂಡಂತಿತ್ತು. ಹಗಲಲ್ಲಿ ತನ್ನ ವಿಸ್ತಾರತೆಯಿಂದ ಭವ್ಯವಾಗಿ ಆಪ್ಯಾಯವೆನಿಸುತ್ತಿದ್ದ ಈ ಸ್ಥಳ ಈಗ ಯಾವ ಸಮಯದಲ್ಲಾದರೂ ದೆವ್ವವನ್ನು ಎದುರ್ಗೊಳ್ಳುವ ಸಾಧ್ಯತೆ ಹೊಂದಿ ಅಪಾರ ಭಯ ಹುಟ್ಟಿಸುವಂತಿತ್ತು. ಗಾಳಿ ಬೀಸಿ ಮರವೊಂದು ಸದ್ದು ಮಾಡಿದಾಗ ಮಕ್ಕಳು "ಓ" ಎಂದು ಚೀರುವರು. ಏನಾದರೂ ಮೆತ್ತಗಿನದನ್ನು ತುಳಿದಾಗ "ಅಯ್ಯೋ ದೆವ್ವ ಇಲ್ಲಿ" ಎಂದು ಕೂಗಿಕೊಳ್ಳುವರು. ಕೊನೆ ಕೊನೆಗೆ ತಾವು ಹಿಡಿದುಕೊಂಡಿರುವ ಸ್ನೇಹಿತರ ಕೈಯೇ ದೆವ್ವದ ಕೈ ಎನಿಸತೊಡಗಿತು. ಸ್ಮಶಾನದವರೆಗೆ ಹೋಗುವುದು ಬೇಡವೇ ಬೇಡ ಎಂದು ತೊತ್ತೊ-ಚಾನ್ ತೀರ್ಮಾನಿಸಿದ್ದಳು. ದೆವ್ವಗಳು ಸ್ಮಶಾನದಲ್ಲಿ ಕಾಯುತ್ತಿದ್ದು, ಈ ಧೈರ್ಯದ ಪರೀಕ್ಷೆ ಏನೆಂಬುದು ಈಗಾಗಲೇ ತಿಳಿದು ಹೋಗಿದ್ದರಿಂದ ಸುಮ್ಮನೆ ವಾಪಸ್ಸು ಹೋಗುವುದೆಂದುಕೊಂಡಳು. ಈಗಾಗಲೇ ಅವಳ ಗುಂಪಿನ ಇತರರೂ ಇದೇ ತೀರ್ಮಾನಕ್ಕೆ ಬಂದಿದ್ದರಿಂದ ಎಲ್ಲರೂ ಕೂಡಿ ಎಷ್ಟು ಸಾಧ್ಯವೋ ಅಷ್ಟು ವೇಗವಾಗಿ ಶಾಲೆಯ ಕಡೆಗೆ ಓಡತೊಡಗಿದರು.

ಅವರು ಶಾಲೆ ಸೇರಿದಾಗ ತಮಗಿಂತ ಮುಂಚೆ ಹೋಗಿದ್ದ ಗುಂಪಿನವರೆಲ್ಲ ಈಗಾಗಲೇ ಅಲ್ಲಿ ಇರುವುದು ಕಂಡುಬಂತು. ಯಾರಿಗೂ ಸ್ಮಶಾನದವರೆಗೆ ಹೋಗುವ ಧೈರ್ಯವಾಗಿರಲಿಲ್ಲ ಎಂಬುದು ತಿಳಿಯಿತು.

ಅಷ್ಟರಲ್ಲೇ ತಲೆಯ ಮೇಲೆ ಬಿಳಿ ಬಟ್ಟೆ ಹೊದ್ದುಕೊಂಡಿದ್ದ ಹುಡುಗನೊಬ್ಬ ಅಳುತ್ತಾ ಅಧ್ಯಾಪಕರೊಬ್ಬರ ಜತೆ ಬಂದ. ದೆವ್ವವಾಗಿದ್ದ ಈತ ಸ್ಮಶಾನದಲ್ಲಿ ಎಷ್ಟು ಹೊತ್ತು ಅಡಗಿ ಕುಳಿತರೂ ಒಬ್ಬರೂ ಆ ಕಡೆ ಬರದೆ ಹೋದದ್ದರಿಂದ ವಿಪರೀತ ಭಯವಾಗಿ ರಸ್ತೆಗೆ ಓಡಿ ಬಂದಿದ್ದ. ಅಳುತ್ತಾ ನಿಂತಿದ್ದ ಅವನನ್ನು ಅಧ್ಯಾಪಕರು ಕಂಡು ಕರೆದುಕೊಂಡು ಬಂದಿದ್ದರು. ಉಳಿದ ಮಕ್ಕಳೆಲ್ಲಾ ಅವನನ್ನು ಸಮಾಧಾನ ಮಾಡುತ್ತಿದ್ದಾಗ ಎರಡನೇ ದೆವ್ವ ಮತ್ತೊಬ್ಬ ಹುಡುಗನ ಕೈಹಿಡಿದುಕೊಂಡು ಬಂದ. ಇಬ್ಬರೂ ಅಳುತ್ತಿದ್ದರು. ದೆವ್ವವಾಗಿದ್ದ ಹುಡುಗ ಅಡಗಿ ಕುಳಿತಿದ್ದಾಗ ಯಾರೋ ಆ ಕಡೆಗೇ ಓಡಿ ಬರುತ್ತಿರುವ ಶಬ್ದವಾಗಿ ಹೆದರಿಸಲು ಈತನೂ ಎದ್ದು ಓಡಿದಾಗ ಎದುರು ಬದುರಾದ ಇಬ್ಬರೂ ಪರಸ್ಪರ ತಲೆಗೆ ಡಿಕ್ಕಿ ಹೊಡೆದುಕೊಂಡಿದ್ದರು. ನೋವಿನ ಜತೆಗೆ ಪ್ರಾಣ ಹೋಗುವಷ್ಟು ಭಯದಿಂದ ಅವರಿಬ್ಬರೂ ಅಳುತ್ತಾ ಓಡಿ ಬಂದಿದ್ದರು. ಶಾಲೆ ಸೇರಿ ಭಯವೆಲ್ಲ ಹೋದ ಮೇಲೆ ಉಳಿದ ಮಕ್ಕಳ ಜತೆ ಇವರೂ ಬಿದ್ದು ಬಿದ್ದು ನಕ್ಕಿದ್ದರು, ಅಳುತ್ತಲೇ. ಅಷ್ಟರಲ್ಲೇ ತೊತ್ತೊ-ಚಾನ್ ತರಗತಿಯ ಮಿಗಿಟ ಎಂಬ ಅಡ್ಡ ಹೆಸರಿನ ಹುಡುಗ ಬಂದು ಸೇರಿದನು. ದಿನಪತ್ರಿಕೆಯಿಂದ

ಮಾಡಿದ್ದ ದೆವ್ವದ ಮುಖವಾಡ ಧರಿಸಿದ್ದ ಅವನು ಸ್ಮಶಾನದ ಕಡೆ ಯಾರೊಬ್ಬರೂ ಬರದೇ ಹೋದದ್ದಕ್ಕೆ ಕೋಪದಿಂದ ಕುದಿಯುತ್ತಿದ್ದನು.

"ನಾನಲ್ಲಿ ಎಷ್ಟು ಹೊತ್ತು ಕಾಯುತ್ತಾ ಕುಳಿತಿದ್ದೆ." ಸೊಳ್ಳೆ ಕಚ್ಚಿಸಿಕೊಂಡ ಕೈಕಾಲುಗಳನ್ನು ಪರಪರ ಕೆರೆಯುತ್ತಾ ದೂರಿದ.

"ದೆವ್ವಕ್ಕೆ ಸೊಳ್ಳೆ ಕಚ್ಚಿಬಿಟ್ಟಿದೆ!" ಎಂದು ಯಾರೋ ಅಂದಾಗ ಎಲ್ಲರೂ ಪುನಃ ನಗಲು ಪ್ರಾರಂಭಿಸಿದರು.

"ಇನ್ನು ಸಾಕು, ನಾನು ಹೋಗಿ ಎಲ್ಲ ದೆವ್ವಗಳನ್ನೂ ಕರೆತರುತ್ತೇನೆ" ಎಂದು ಐದನೇ ತರಗತಿಯ ಮಾರೂಯಾಮಾ ಎಂಬ ಉಪಾಧ್ಯಾಯರು ಹೊರಟರು. ರಸ್ತೆ ದೀಪಗಳಡಿ ಕಂಗಾಲಾಗಿ ನಿಂತಿದ್ದ ದೆವ್ವಗಳನ್ನೆಲ್ಲಾ ಅವರು ಕರೆದುಕೊಂಡರು. ಕೆಲ ದೆವ್ವಗಳಂತೂ ಹೆದರಿಕೆ ತಾಳಲಾರದೆ ಮನೆಗೇ ಹೋಗಿಬಿಟ್ಟಿದ್ದವು. ಅವರನ್ನೆಲ್ಲಾ ಅವರು ಶಾಲೆಗೆ ಕರೆತಂದರು.

ಆ ರಾತ್ರಿಯ ನಂತರ ತೊಮೊಯೆದ ಮಕ್ಕಳಿಗೆ ದೆವ್ವವೆಂದರೆ ಭಯವೇ ಆಗುತ್ತಿರಲಿಲ್ಲ. ಯಾಕೆಂದರೆ ದೆವ್ವಗಳೂ ಹೆದರಿಕೊಳ್ಳುತ್ತವಲ್ಲ! ಅಲ್ಲವೇ?

## ಅಭ್ಯಾಸ ಕೋಣೆ

ತೊತ್ತೊ-ಚಾನ್ ಗಂಭೀರವಾಗಿ ನಡೆಯುತ್ತಿದ್ದಳು. ರಾಕಿಯೂ ಅವಳಂತೆಯೇ ನಡೆದಿತ್ತು. ಅವಳನ್ನೇ ಪದೇ ಪದೇ ನೋಡುತ್ತಾ ಅವರಿಬ್ಬರೂ ತಂದೆಯ ಅಭ್ಯಾಸ ಕೋಣೆಗೆ ಹೋಗುತ್ತಿದ್ದರು ಎಂಬುದು ಇದರರ್ಥ. ಸಾಮಾನ್ಯವಾಗಿ ತೊತ್ತೊ-ಚಾನ್ ಎಲ್ಲಾದರೂ ಹೋಗುವಾಗ ಎಷ್ಟು ಸಾಧ್ಯವೋ ಅಷ್ಟು ವೇಗವಾಗಿ ಓಡುವುದು, ತಾನು ಬೀಳಿಸಿಬಿಟ್ಟಿದ್ದ ಏನನ್ನೋ ಹುಡುಕುತ್ತಾ ಅತ್ತ ಇತ್ತ ನಡೆಯುವುದು, ಇಲ್ಲ ಬೇಲಿ ಕೆಳಗೆ ನುಸುಳುತ್ತಾ ಒಂದಾದ ಮೇಲೊಂದರಂತೆ ಅವರಿವರ ತೋಟಕ್ಕೆ ನುಗ್ಗುವುದು ಇದೆಲ್ಲಾ ವಾಡಿಕೆ.

ಅವಳ ತಂದೆಯ ಅಭ್ಯಾಸ ಕೋಣೆಗೆ ಅವರ ಮನೆಯಿಂದ ಐದು ನಿಮಿಷದ ಹಾದಿ. ಇವಳ ತಂದೆ ಆರ್ಕೆಸ್ಟ್ರಾದಲ್ಲಿ ವಯೋಲಿನ್ ನುಡಿಸುತ್ತಿದ್ದರು. ಅವರು ಒಮ್ಮೆ ತೊತ್ತೊ-ಚಾನ್‌ಳನ್ನು ಸಂಗೀತ ಕಛೇರಿಯೊಂದಕ್ಕೆ ಕರೆದೊಯ್ದಿದ್ದರು. ಕಛೇರಿ ಮುಗಿದು ಜನರೆಲ್ಲಾ ಚಪ್ಪಾಳೆ ಹಾಕಿದ ಮೇಲೆ, ಬೆವರಿಹೋಗಿದ್ದ ಆ ಕಲಾವಿದರು ಪ್ರೇಕ್ಷಕರತ್ತ ನೋಡಿ ಕುಳಿತಲ್ಲಿಂದ ಎದ್ದು ಇಳಿದು ಬಂದು ವಯೋಲಿನ್ ನುಡಿಸುತ್ತಿದ್ದ ತಂದೆಯ ಕೈಕುಲುಕುತ್ತಿದ್ದರು. ಇದು ತೊತ್ತೊ-ಚಾನ್‌ಳ ಕುತೂಹಲಕ್ಕೆ ಕಾರಣವಾಗಿತ್ತು. ಬಳಿಕ ಅವಳ ತಂದೆ ಎದ್ದು ನಿಂತರು. ಜತೆಗೇ ಆರ್ಕೆಸ್ಟ್ರಾದ ಎಲ್ಲರೂ ಎದ್ದು ನಿಂತರು. "ಅವರೇಕೆ ಹಾಗೆ ಕೈ ಕುಲುಕುತ್ತಾರೆ?" ತೊತ್ತೊ-ಚಾನ್ ಮೆಲ್ಲಗೆ ಕೇಳಿದಳು.

"ಆರ್ಕೆಸ್ಟ್ರಾದವರು ಚೆನ್ನಾಗಿ ವಾದ್ಯ ನುಡಿಸಿದ್ದಕ್ಕೆ ಅವರಿಗೆ ಧನ್ಯವಾದ ಹೇಳಲು ಅವರು ಹಾಗೆ ಮಾಡಿದರು. ಅವರೆಲ್ಲರ ಪ್ರತಿನಿಧಿಯಾಗಿ ನಿಮ್ಮ ತಂದೆಯ ಕೈ

ಕುಲುಕಿದರು'' ಎಂದು ಅಮ್ಮ ವಿವರಿಸಿದಳು.

ಅಭ್ಯಾಸ ಕೋಣೆಗೆ ಹೋಗಲು ತೊತ್ತೊ-ಚಾನ್ ಇಷ್ಟಪಡಲು ಕಾರಣವೆಂದರೆ, ಅಲ್ಲಿ ತನ್ನ ಶಾಲೆಯಂತೆ ಬರೀ ಮಕ್ಕಳಿರದೆ ಎಲ್ಲ ದೊಡ್ಡವರೇ ಇರುತ್ತಿದ್ದು ಅವರೆಲ್ಲಾ ವಿಧ ವಿಧದ ವಾದ್ಯಗಳನ್ನು ನುಡಿಸುತ್ತಿದ್ದರು. ಅಲ್ಲದೆ ಮುಖ್ಯ ಕಲಾವಿದ ರೋಸೆನ್‌ಸ್ಟಾಕ್ ಮಾತಾಡುತ್ತಿದ್ದ ಜಪಾನೀ ಭಾಷೆ ತುಂಬಾ ತಮಾಷೆಯಾಗಿರುತ್ತಿತ್ತು.

ಜೋಸೆಫ್ ರೋಸೆನ್‌ಸ್ಟಾಕ್ ಅವರು ಯುರೋಪಿನ ತುಂಬಾ ದೊಡ್ಡ ಕಲಾವಿದರೆಂದೂ, ಆದರೆ ಹಿಟ್ಲರ್ ಎನ್ನುವ ಮನುಷ್ಯ ಅಲ್ಲಿ ತುಂಬಾ ಕಾಟ ಕೊಡುತ್ತಿದ್ದರಿಂದ ಅವರು ಅಲ್ಲಿಂದ ತಪ್ಪಿಸಿಕೊಂಡು ಸಂಗೀತ ಮುಂದುವರಿಸಲು ಜಪಾನಿನವರೆಗೂ ಬಂದಿದ್ದಾರೆಂದು ಅವಳ ತಂದೆ ಹೇಳುತ್ತಿದ್ದರು. ರೋಸೆನ್‌ಸ್ಟಾಕರನ್ನು ತಾನು ತುಂಬಾ ಮೆಚ್ಚಿಕೊಂಡಿರುವುದಾಗಿ ಆತ ಹೇಳುತ್ತಿದ್ದರು. ಪ್ರಪಂಚದ ಸ್ಥಿತಿಗತಿಗಳೆಲ್ಲ ತೊತ್ತೊ-ಚಾನ್‌ಗೆ ಅರ್ಥವಾಗುತ್ತಿರಲಿಲ್ಲ. ಆದರೆ ಆ ಸಮಯದಲ್ಲಿ ಹಿಟ್ಲರ್‌ನು ಯಹೂದ್ಯರ ಕಗ್ಗೊಲೆ ಪ್ರಾರಂಭಿಸಿದ್ದನು. ಹಾಗಿಲ್ಲದೆ ಹೋಗಿದ್ದರೆ ರೋಸೆನ್‌ಸ್ಟಾಕ್ ಎನ್ನುವ ಆ ಮಹಾನ್ ಕಲಾವಿದ ಜಪಾನಿಗೆ ಬರುತ್ತಲೂ ಇರಲಿಲ್ಲ, ಮತ್ತು ಕೋಸಾಕ್ ಯಮದ ಎನ್ನುವವರು ಸ್ಥಾಪಿಸಿದ ಈ ವಾದ್ಯಗೋಷ್ಠಿ ಅಷ್ಟೊಂದು ಕಡಿಮೆ ಸಮಯದಲ್ಲಿ ಅಂತಹ ಪ್ರಗತಿಯನ್ನು ಸಾಧಿಸುತ್ತಲೂ ಇರಲಿಲ್ಲ. ರೋಸೆನ್‌ಸ್ಟಾಕ್‌ರು ಯೂರೋಪಿನ ಅತ್ಯುತ್ತಮ ವಾದ್ಯಗೋಷ್ಠಿಯಲ್ಲಿ ನಿರೀಕ್ಷಿಸುತ್ತಿದ್ದಂತಹ ಮಟ್ಟವನ್ನೇ ಈ ವಾದ್ಯಗೋಷ್ಠಿಯಲ್ಲಿಯೂ ಬಯಸುತ್ತಿದ್ದರು. ಆದ್ದರಿಂದಲೇ ಅವರು ಪ್ರತಿ ಅಭ್ಯಾಸದ ಕೊನೆಯಲ್ಲಿ ಅಳುತ್ತಿದ್ದರು. "ನಾನೆಷ್ಟು ಕಷ್ಟಪಟ್ಟು ಪ್ರಯತ್ನಿಸುತ್ತೇನೆ, ನೀವು ಸ್ಪಂದಿಸುವುದೇ ಇಲ್ಲ." "ನಾವು ನಮ್ಮಿಂದ ಎಷ್ಟು ಸಾಧ್ಯವೋ ಅಷ್ಟನ್ನೂ ಮಾಡುತ್ತಿದ್ದೇವೆ. ಆದರೆ ನಮ್ಮ ತಂತ್ರ ಅಷ್ಟು ಉತ್ತಮವಾಗಿಲ್ಲ. ಹಾಗಾಗಿ ನಮ್ಮ ಸೋಲು ಉದ್ದೇಶ ಪೂರ್ವಕವಲ್ಲ ಎಂದು ನಾನು ಸ್ಪಷ್ಟಪಡಿಸುತ್ತೇನೆ" ತುಂಬಾ ಚೆನ್ನಾಗಿ ಜರ್ಮನ್ ಭಾಷೆ ಮಾತನಾಡುತ್ತಿದ್ದ ಹಿಡಿಯೋಸೇಟೋ ಎಂಬ ವಾದ್ಯಗಾರ ಎಲ್ಲರ ಪರವಾಗಿ ಉತ್ತರಿಸಿದರು.

ತೊತ್ತೊ-ಚಾನ್‌ಗೆ ಇದೆಲ್ಲ ತಲೆಬುಡ ಅರ್ಥವಾಗದಿದ್ದುದರಿಂದ ಸನ್ನಿವೇಶದಿಂದ ಬಚಾವಾದಳು. ಆದರೂ ಕೆಲಸಮಯ ರೋಸೆನ್‌ಸ್ಟಾಕ್‌ರು ಎಷ್ಟು ರೇಗಾಡುತ್ತಿದ್ದರೆಂದರೆ ಅವರ ತಲೆ ಆವಿಯಾಡುತ್ತಿದೆಯೇನೋ ಎನಿಸುವಂತಿತ್ತು. ಮತ್ತವರು ಜರ್ಮನ್ ಭಾಷೆಯಲ್ಲಿ ಕೂಗಾಡುತ್ತಿದ್ದರು. ಅಂತಹ ಸಮಯುಗಳಲ್ಲಿ ತೊತ್ತೊ-ಚಾನ್ ತಾನು ತುಂಬಾ ಇಷ್ಟಪಟ್ಟು ನಿಲ್ಲುತ್ತಿದ್ದ ಕಿಟಕಿಯ ಬಳಿಯಿಂದ ದೂರ ಸರಿದು ರಾಕಿಯು ಜೊತೆ ನೆಲದಲ್ಲಿ ಮುದುರಿ ಕೂರುವಳು. ಉಸಿರು ಬಿಗಿಹಿಡಿದು ಮತ್ತೆ ಸಂಗೀತ ಪ್ರಾರಂಭವಾಗುವವರೆಗೆ ಕಾಯುವಳು. ಆದರೆ ವಾಸ್ತವದಲ್ಲಿ ರೋಸೆನ್‌ಸ್ಟಾಕ್‌ರು ತುಂಬಾ ಒಳ್ಳೆಯವರಾಗಿದ್ದು ಅವರು ಮಾತನಾಡುತ್ತಿದ್ದ ಜಪಾನೀ ಭಾಷೆ ವಿಚಿತ್ರವಾಗಿರುತ್ತಿತ್ತು.

"ವೆರಿ ಗುಡ್, ಕುರೋಯಾಂಗಿ ಸಾನ್'' ಅವರು ಚೆನ್ನಾಗಿ ವಾದ್ಯ ನುಡಿಸಿದಾಗ



ವಿಚಿತ್ರ ಉಚ್ಚಾರಣೆಯಲ್ಲಿ ಹೇಳುವರು. ಅದಿಲ್ಲದಿದ್ದರೆ "ವಂಡರ್‌ಫುಲ್" ಎನ್ನುವರು. ತೊತ್ತೊ-ಚಾನ್ ಅಭ್ಯಾಸ ಕೋಣೆಯ ಒಳಗೆ ಹೋದದ್ದೇ ಇಲ್ಲ. ಅವಳು ಕಿಟಕಿ ಹೊರಗಿನಿಂದ ಇಣುಕುತ್ತಾ ಸಂಗೀತ ಕೇಳುತ್ತಿದ್ದಳು. ಅವರು ಮಧ್ಯದಲ್ಲಿ ನಿಲ್ಲಿಸಿ ಸಿಗರೇಟು ಕುಡಿಯಲೆಂದು ಹೊರಗಡೆ ಬಂದಾಗೆಲ್ಲ ಅಪ್ಪ ಇವಳನ್ನು ನೋಡುತ್ತಿದ್ದರು.

"ಓಹೋ ನೀನಿಲ್ಲಿದ್ದಿಯಾ ತಾತ್‌ಸ್ಕಿ" ಎನ್ನುವರು.

ರೋಸೆನ್‌ಸ್ಟಾಕ್‌ರು, ಇವಳನ್ನು ಕಂಡಾಗ "ಗುಡ್ ಮಾರ್ನಿಂಗ್" ಅಥವಾ "ಗುಡ್‌ಡೇ" ಎಂದು ವಿಚಿತ್ರ ಉಚ್ಚಾರಣೆಯಿಂದ ಹೇಳುತ್ತಿದ್ದರು. ಈಗವಳು ದೊಡ್ಡವಳಾಗಿದ್ದರೂ ಸಣ್ಣವಳಿದ್ದಾಗ ಮಾಡುತ್ತಿದ್ದ ರೀತಿಯಲ್ಲಿಯೇ ಅವಳನ್ನು ಎತ್ತಿಕೊಂಡು ಕೆನ್ನೆಗೆ ಕೆನ್ನೆ ಸವರುತ್ತಿದ್ದರು. ಅವಳಿಗೆ ಕೊಂಚ ಮುಜುಗರವಾದರೂ ರೋಸೆನ್‌ಸ್ಟಾಕ್‌ರೆಂದರೆ ಅವಳಿಗೆ ಇಷ್ಟ. ಅವರು ಬೆಳ್ಳಿಯ ಕಟ್ಟಿನ ಕನ್ನಡಕ ಹಾಕಿಕೊಳ್ಳುತ್ತಿದ್ದರು. ತುಂಬ ಎತ್ತರದ ಆಸಾಮಿಯೇನೂ ಅಲ್ಲದ ಅವರ ಮೂಗು ಉದ್ದವಾಗಿತ್ತು. ಆದರೆ ಕಲಾವಿದನೆಂದು ಗುರುತಿಸಬಹುದಾದ ಮುಖ ಸೌಂದರ್ಯ ಅವರಿಗಿತ್ತು.

ಅಭ್ಯಾಸ ಕೋಣೆಯೆಂದರೆ ತೊತ್ತೊ-ಚಾನ್‌ಳಿಗೆ ಇಷ್ಟ. ಪಾಶ್ಚಾತ್ಯ ಶೈಲಿಯಲ್ಲಿದ್ದ ಅದು ಕೊಂಚ ಶಿಥಿಲಗೊಂಡಿತ್ತು. ಸೆನ್‌ಜೋಕು ಕೊಳದಿಂದಬೀಸಿದ ತಂಗಾಳಿ ರಿಹರ್ಸಲ್ ಹಾಲಿನಿಂದ ತುಂಬಾ ದೂರದವರೆಗೆ ಸಂಗೀತವನ್ನು ಕೊಂಡೊಯ್ಯುತ್ತಿತ್ತು. ಕೆಲ ಸಮಯ ಮೀನು ಮಾರುವವನ ದನಿ ಕೂಡ ಇದರೊಂದಿಗೆ ಸೇರಿಹೋಗುತ್ತಿತ್ತು.




## ಬಿಸಿನೀರಿನ ಬುಗ್ಗೆಗೆ ಪ್ರವಾಸ

ಬೇಸಿಗೆಯ ರಜೆ ಕೊನೆಗೊಂಡಿತ್ತು. ಬಿಸಿನೀರಿನ ಬುಗ್ಗೆಗೆ ಪ್ರಯಾಣ ಹೋಗುವ ದಿನ ಬಂದೇ ಬಂತು. ತೊಮೊಯೆದ ಮಕ್ಕಳಿಗೆ ಇದೊಂದು ಮಹತ್ವದ ಸಂಗತಿ. ತೊತ್ತೊ-ಚಾನ್ ಒಂದು ದಿನ ಶಾಲೆಯಿಂದ ಬಂದು "ನಾನು ಎಲ್ಲರ ಜತೆ ಬಿಸಿ ನೀರಿನ ಬುಗ್ಗೆಗೆ ಪ್ರವಾಸ ಹೋಗಲಾ?" ಎಂದು ಕೇಳಿದಾಗ ಅಮ್ಮನಿಗೆ ಎಲ್ಲಿಲ್ಲದ ಆಶ್ಚರ್ಯ. ವಯಸ್ಸಾದವರು ಗುಂಪುಗುಂಪಾಗಿ ಬಿಸಿನೀರಿನ ಬುಗ್ಗೆಗೆ ಹೋಗುವುದನ್ನು ಆಕೆ ಕೇಳಿದ್ದರೇ ವಿನಃ ಒಂದನೇ ತರಗತಿಯ ಪುಟ್ಟ ಮಕ್ಕಳು ಅಲ್ಲ. ಆದರೆ ಮುಖ್ಯೋಪಾಧ್ಯಾಯರ ಪತ್ರವನ್ನು ಎಚ್ಚರಿಕೆಯಿಂದ ಓದಿದ ನಂತರ ಅದೊಂದು ಸುಂದರ ಆಲೋಚನೆಯಂತೆ ಕಂಡು ಮೆಚ್ಚುಗೆಯೆನಿಸಿತು. ಅವರೀಗ ಹೋಗುತ್ತಿದ್ದದ್ದು ಸಿಸುವೋಕ ಎನ್ನುವ ಪ್ರದೇಶದಲ್ಲಿನ ಇಸೂ ದ್ವೀಪಕಲ್ಪದ ತಾಯ್ ಎಂಬ ಜಾಗಕ್ಕೆ. ಸಮುದ್ರದ ಮಧ್ಯದಲ್ಲೇ ಬಿಸಿನೀರಿನ ಬುಗ್ಗೆ ಏಳುತ್ತಿದ್ದು ಇಲ್ಲಿ ಮಕ್ಕಳು ಈಜಬಹುದಿತ್ತು, ಸ್ನಾನವನ್ನೂ ಮಾಡಬಹುದಾಗಿತ್ತು. ಇದಕ್ಕೆ ಮೂರು ಹಗಲು ಮತ್ತು ಎರಡು ರಾತ್ರಿಯ ಪ್ರವಾಸ. ತೊಮೊಯೆದ ವಿದ್ಯಾರ್ಥಿಯೊಬ್ಬರ ತಂದೆಗೆ ಅಲ್ಲೊಂದು ವಿಶ್ರಾಂತಿ ಗೃಹವಿದ್ದು ತೊಮೊಯೆದ ಎಲ್ಲಾ ಐವತ್ತು ಮಕ್ಕಳೂ ಅಲ್ಲಿ ಉಳಿಯಬಹುದಿತ್ತು. ತೊತ್ತೊ-ಚಾನ್ ತಾಯಿ ಮರುಮಾತಿಲ್ಲದೆ ಒಪ್ಪಿಕೊಂಡಳು.

ಗೊತ್ತುಪಡಿಸಿದ ದಿನ ಹೊರಡುವ ಮುನ್ನ ಎಲ್ಲ ಮಕ್ಕಳೂ ಶಾಲೆಯಲ್ಲಿ ಸೇರಿದರು.

ಎಲ್ಲ ಸೇರಿದ ನಂತರ ಮುಖ್ಯೋಪಾಧ್ಯಾಯರು ಹೇಳಿದರು "ನಾವೀಗ ಮೊದಲು ರೈಲಿನಲ್ಲಿ ಹೋಗಿ ನಂತರ ಹಡಗಿನಲ್ಲಿ ಹೋಗಬೇಕು. ಯಾರೂ ತಪ್ಪಿಸಿಕೊಳ್ಳಬಾರದು. ಗೊತ್ತಾಯ್ತಾ, ನಡೀರಿ ಹೋಗೋಣ." ಅವರು ಕೊಟ್ಟ ಆದೇಶ ಅಷ್ಟೇ. ಆದರೆ ಜಿಯುಗವೋಕದಲ್ಲಿ ಟೋಕಿಯೋ ರೈಲನ್ನು ಹತ್ತಿದಾಗ ಮಕ್ಕಳೆಲ್ಲಾ ಆಶ್ಚರ್ಯವಾಗುವಷ್ಟು ಚೆನ್ನಾಗಿ ನಡೆದುಕೊಂಡರು. ಯಾರೂ ಬೋಗಿಯಲ್ಲಿ ಅತ್ತಿತ್ತ ಓಡಲಿಲ್ಲ. ಪಕ್ಕದಲ್ಲಿ ಕುಳಿತವರ ಜತೆ ಮಾತ್ರ ಮೆಲುದನಿಯಲ್ಲಿ ಮಾತನಾಡಿಕೊಳ್ಳುತ್ತಿದ್ದರು. ಸರತಿಯ ಸಾಲಿನಲ್ಲಿ ನೆಟ್ಟಗೆ ಹೋಗಬೇಕು, ರೈಲಿನಲ್ಲಿ ಗಲಾಟೆ ಮಾಡಬಾರದು, ತಿಂದಾಗ ಕಾಗದ ಇತ್ಯಾದಿಗಳನ್ನು

ಅಲ್ಲಲ್ಲೇ ಹಾಕಬಾರದು ಎಂಬುದನ್ನೆಲ್ಲಾ ತೊಮೊಯೆದ ಮಕ್ಕಳಿಗೆ ಯಾರೂ ಎಂದೂ ಹೇಳಿರಲಿಲ್ಲ. ಆದರೆ ತಮಗಿಂತ ಸಣ್ಣವರನ್ನು – ದುರ್ಬಲರನ್ನು ತಳ್ಳಬಾರದು, ಮನಬಂದಂತೆ ನಡೆದುಕೊಳ್ಳಬಾರದು, ಆ ರೀತಿ ನಡೆದುಕೊಳ್ಳುವುದು ಅಪಮಾನಕರ, ಕಸಕಡ್ಡಿಗಳನ್ನು ಕಂಡಾಗ ತೆಗೆದುಹಾಕಬೇಕು, ಇತರರಿಗೆ ಕಿರಿಕಿರಿಯಾಗುವಂತಹ, ತೊಂದರೆ ಕೊಡುವಂತಹ ಏನನ್ನೂ ಮಾಡಕೂಡದು ಎಂಬುದನ್ನು ಅವರ ದಿನನಿತ್ಯದ ಶಾಲಾ ಬದುಕು ಅವರಿಗೆ ಕಲಿಸಿತ್ತು. ಇವೆಲ್ಲಕ್ಕಿಂತ ಆಶ್ಚರ್ಯವಾಗುವಂತಹದ್ದೆಂದರೆ ತನ್ನ ಹಳೆಯ ಶಾಲೆಯಲ್ಲಿ ತರಗತಿಯ ಮಧ್ಯದಲ್ಲಿ ಕಿಟಕಿಯಿಂದ ಬೀದಿ ಸಂಗೀತಗಾರರ ಜತೆ ಮಾತನಾಡುತ್ತಾ ತೊಂದರೆ ಮಾಡುತ್ತಿದ್ದ ತೊತ್ತೊ-ಚಾನ್ ಈ ಶಾಲೆಯಲ್ಲಿ ಮೊದಲ ದಿನದಿಂದಲೇ ತನ್ನ ಡೆಸ್ಕಿನಲ್ಲಿ ಕುಳಿತು ಪಾಠಗಳನ್ನು ಸರಿಯಾಗಿ ಕಲಿಯತೊಡಗಿದ್ದಳು. ಈಗ ರೈಲಿನಲ್ಲಿ ಬೇರೆ ಮಕ್ಕಳ ಜತೆ ಸದ್ದಿಲ್ಲದೆ ಕುಳಿತಿದ್ದ ಅವಳನ್ನು ಹಳೆಯ ಶಾಲೆಯ ಶಿಕ್ಷಕರೇನಾದರೂ ನೋಡಿದ್ದರೆ, "ಅದು ಯಾರೋ ಬೇರೆ ಬಿಡಿ" ಎನ್ನುತ್ತಿದ್ದರೇನೋ.

ಸುಮಾಸುವಿನಲ್ಲಿ ಅವರೆಲ್ಲಾ ಹಡಗಿಗೆ ಹತ್ತಿಕೊಂಡರು. ಅದು ಥೇಟ್ ಇವರೆಲ್ಲಾ ಚಿತ್ರಿಸಿಕೊಂಡಂತೆಯೇ ಇತ್ತು. ಅದೇನೂ ಅಷ್ಟು ದೊಡ್ಡ ಹಡಗಲ್ಲವಾದರೂ ಸಂಭ್ರಮಗೊಂಡ ಮಕ್ಕಳು ಅದರ ಮೂಲೆ ಮೂಲೆಗಳನ್ನೂ ಅಳೆದು ಸುರಿದು ಪರೀಕ್ಷಿಸತೊಡಗಿದರು. ಕಂಡದ್ದನ್ನೆಲ್ಲಾ ಮುಟ್ಟಿ ನೋಡುವರು. ಕೈಗೆ ಸಿಕ್ಕಿದ್ದಕ್ಕೆಲ್ಲಾ ಜೋತುಬಿದ್ದು ತೂಗಾಡುವರು. ಹಡಗು ತೇಲಲು ಪ್ರಾರಂಭಿಸಿದಾಗ ದಡದಲ್ಲಿದ್ದವರಿಗೆಲ್ಲ ವಿದಾಯ ಹೇಳಿದರು. ಮಳೆ ಹನಿಯತೊಡಗಿದಾಗ ಎಲ್ಲರೂ ಒಳ ಸೇರಿಕೊಂಡರು. ಕ್ರಮೇಣ ಸಮುದ್ರ ಒಗಟಿನಂತಾಗತೊಡಗಿತು. ತೊತ್ತೊ-ಚಾನ್ ಮತ್ತು ಇತರ ಅನೇಕರಿಗೆ ದೇಹದಲ್ಲಿ ಎಂಥದೋ ಕಸಿವಿಸಿಯಾಗತೊಡಗಿತು.

ಅವರಲ್ಲಿ ಹಿರಿಯನಾದ ಒಬ್ಬ ಹುಡುಗ ಎದ್ದು ಎಲ್ಲರ ಮಧ್ಯೆ ನಿಂತು ಹುಟ್ಟುಹಾಕುವವನಂತೆ ನಟಿಸತೊಡಗಿದ. ಹಡಗು ಕುಲುಕಾಡಿದಾಗ ಒಂದು ಬದಿಗೆ ಓಡಿ "ಅಯ್ಯೋ" ಎಂದು ಕೂಗುವನು. ಮತ್ತೆ ಕುಲುಕಿದಾಗ ಇನ್ನೊಂದು ಮೂಲೆಗೆ ಓಡಿ ಪುನಃ "ಅಯ್ಯೋ" ಎಂದು ಕೂಗುವನು. ಅವನ ಈ ನಟನೆ ಎಷ್ಟು ತಮಾಷೆಯಾಗಿತ್ತೆಂದರೆ ದೇಹಾಲಸ್ಯವಿದ್ದ ಮಕ್ಕಳೂ ಬಿದ್ದುಬಿದ್ದು ನಗತೊಡಗಿದರು. ನಗು ನಗುತ್ತಿದ್ದಂತೆಯೇ ಬಂದುಬಿಟ್ಟಿತ್ತು – ತಾಯ್. ಕುತೂಹಲವೆಂದರೆ ಎಲ್ಲರೂ ದಡ ಸೇರಿ ಆರಾಮವಾಗಿದ್ದಾಗ, ಅಷ್ಟೊತ್ತೂ ನಗಿಸುತ್ತಿದ್ದ ಹುಡುಗನಿಗೆ ಏನೋ ಆಲಸ್ಯ ಪ್ರಾರಂಭವಾಗಿತ್ತು.

ತಾಯ್‌ಸ್ಸಾ ಹಸಿರು ಬೆಟ್ಟಗಳಿಂದಾವೃತವಾಗಿದ್ದ ಸಮುದ್ರ ತೀರದ ಮೇಲಿನ ಒಂದು ಸುಂದರ ಹಳ್ಳಿ. ಸ್ವಲ್ಪ ಹೊತ್ತು ವಿಶ್ರಮಿಸಿದ ನಂತರ ಶಿಕ್ಷಕರೆಲ್ಲಾ ಮಕ್ಕಳನ್ನು ಸಮುದ್ರದೆಡೆಗೆ ಕರೆದೊಯ್ದರು. ಅದು ಶಾಲೆಯ ಈಜುಕೊಳದಂತೆ ಇರಲಿಲ್ಲವಾದ್ದರಿಂದ ಅವರೆಲ್ಲ ಈಜುಡುಗೆಗಳನ್ನು ತೊಟ್ಟುಕೊಂಡರು.

ಸಮುದ್ರದಲ್ಲಿದ್ದ ಆ ಬಿಸಿ ನೀರಿನ ಬುಗ್ಗೆ ತುಂಬಾ ಅಪರೂಪದ್ದು. ಆ ಬಿಸಿನೀರಿನ

ಬುಗ್ಗೆಯನ್ನು ಉಳಿದ ಸಮುದ್ರದ ನೀರಿನಿಂದ ಪ್ರತ್ಯೇಕಿಸುವಂತಹ ಯಾವುದೇ ಚಿಹ್ನೆಗಳು ಅಲ್ಲಿರಲಿಲ್ಲ. ಅದಿರುವ ಜಾಗದಲ್ಲಿ ಕವುಚಿ ಕುಳಿತರೆ ಬಿಸಿನೀರು ಕುತ್ತಿಗೆಯವರೆಗೂ ಬಂದು ಬಿಸಿ ನೀರಿನಲ್ಲಿ ಸ್ನಾನ ಮಾಡುತ್ತಿರುವಂತೆ ತುಂಬಾ ಹಿತಕರವೆನಿಸುತ್ತಿತ್ತು. ಬಿಸಿ ನೀರಿನ ಬುಗ್ಗೆಯಿಂದ ಸಮುದ್ರಕ್ಕೆ ಹೋಗಬೇಕೆಂದರೆ ಸುಮ್ಮನೆ ಹದಿನೈದು ಅಡಿಗಳಷ್ಟು ದೂರ ಪಕ್ಕಕ್ಕೆ ನಡೆದರೆ ಸಾಕು. ನೀರು ಕ್ರಮೇಣ ತಣ್ಣಗಾಗುತ್ತಿತ್ತು. ಹಾಗೆ ಹೋಗುತ್ತಾ ಹೋಗುತ್ತಾ ನೀರು ತಣ್ಣಗಾಗುತ್ತಾ ಬಂದು ಕೊನೆಗೆ ಸಮುದ್ರದಲ್ಲಿರುವುದು ಭಾಸವಾಗುತ್ತಿತ್ತು. ಹೀಗಾಗಿ, ಸಮುದ್ರದಲ್ಲಿ ಈಜುತ್ತಾ ಚಳಿಯಾಗತೊಡಗಿದರೆ ಬಿಸಿನೀರಿನ ಬುಗ್ಗೆಗೆ ಓಡಿ ಕತ್ತಿನವರೆಗೆ ಬಿಸಿ ನೀರಿನ ಸ್ನಾನ ಮಾಡಿದರಾಯಿತು. ಮನೆಯಲ್ಲಿ ಸ್ನಾನ ಮಾಡಿದಂತೆಯೇ ಎನಿಸುವುದು. ಇದೆಲ್ಲಾ ತುಂಬಾ ಮಜವಾಗಿತ್ತು. ಕೆಲ ಮಕ್ಕಳು ಸಮುದ್ರದಲ್ಲಿ ಈಜುತ್ತಿದ್ದರೆ ಬಿಸಿನೀರಿನ ಬುಗ್ಗೆಯಲ್ಲಿ ಇದ್ದ ಮಕ್ಕಳು ವರ್ತುಲಾಕಾರದಲ್ಲೇ ಗುಂಪು ಕಟ್ಟಿಕೊಂಡು ಮಾಮೂಲಿ ಸ್ನಾನ ಮಾಡುತ್ತಿರುವವರಂತೆ ಆರಾಮವಾಗಿ ಹರಟೆಕೊಚ್ಚುತ್ತಿದ್ದರು. "ದೊಡ್ಡವರಂತೆಯೇ ಆಡುತ್ತಾರೆ" ಎನ್ನುತ್ತಿದ್ದರೇನೋ, ಯಾರಾದರೂ ನೋಡಿದವರು.

ಆ ದಿನಗಳಲ್ಲಿ ಸಮುದ್ರ ತೀರ ಎಷ್ಟೊಂದು ಪ್ರಶಾಂತವಾಗಿರುತ್ತಿತ್ತೆಂದರೆ ಅಲ್ಲಿ ಹೋದವರಿಗೆ ಅದು ತಮ್ಮದೇ ಖಾಸಗಿ ಜಾಗ ಎನಿಸುತ್ತಿತ್ತು. ಮಕ್ಕಳು ಈ ಅಪರೂಪದ ಆ ಬಿಸಿನೀರಿನ ಬುಗ್ಗೆಯ ಸ್ನಾನವನ್ನು ಸಂಪೂರ್ಣ ಆನಂದಿಸಿದ್ದರು. ನೀರಿನಲ್ಲಿ ಬಹುಕಾಲ ಇದ್ದು ಸಂಜೆ ಮನೆಗೆ ಮರಳಿದಾಗ ಅವರ ಬೆರಳುಗಳೆಲ್ಲಾ ಸುಕ್ಕುಗಟ್ಟಿದ್ದುವು.

ಪ್ರತಿರಾತ್ರಿ ಮಲಗಿದ ನಂತರವೂ ಒಬ್ಬರಾದ ಮೇಲೆ ಒಬ್ಬರಂತೆ ದೆವ್ವದ ಕತೆಗಳನ್ನು ಹೇಳುವರು. ತೊತ್ತೊ-ಚಾನ್ ಮತ್ತು ಅವಳ ಒಂದನೇ ತರಗತಿಯ ಮಕ್ಕಳೆಲ್ಲ ಭಯದಿಂದ ನಡುಗಿ ಅಳತೊಡಗಿದರು. ಅಳುತ್ತಲೇ ಮತ್ತೆ ಕೇಳುವರು "ಆಮೇಲೇನಾಯ್ತು ?"

ಶಾಲೆಯಲ್ಲಿ ಟೆಂಟ್ ಹಾಕಿದ್ದ ಮತ್ತು ಸಾಹಸದ ಪರೀಕ್ಷೆಗಳಂತಲ್ಲದ ತಾಯ್‌ಸ್ವಾದಲ್ಲಿನ ಈ ಮೂರು ದಿನದ ತಂಗುವಿಕೆ ಯಥಾರ್ಥ ಜೀವನಾನುಭವವನ್ನು ತಂದುಕೊಟ್ಟಿತ್ತು. ಉದಾಹರಣೆಗೆ, ಅವರು ಸರತಿಯಲ್ಲಿ ಮಾರ್ಕೆಟ್ಟಿಗೆ ಹೋಗಿ ಅಡಿಗೆಗೆ ತರಕಾರಿಯನ್ನೂ, ಮೀನನ್ನೂ ತರಬೇಕಾಗಿತ್ತು. ಯಾರಾದರೂ ದಾರಿಯಲ್ಲಿ "ನಿಮ್ಮೂರು ಯಾವುದು ? ನೀನೆಲ್ಲಿ ಶಾಲೆಗೆ ಹೋಗುತ್ತೀಯಾ ?" ಎಂದೇನಾದರೂ ಕೇಳಿದರೆ ವಿನಯದಿಂದ ಉತ್ತರಿಸ ಬೇಕಾಗಿತ್ತು. ಕೆಲವರಂತೂ "ಕಾಡಿನಲ್ಲಿ ಕಳೆದೇ ಹೋದಂತಾಗಿದ್ದರು. ಇನ್ನು ಕೆಲವರು ತಮಗೇ ಗೊತ್ತಿಲ್ಲದೆ ತುಂಬಾ ದೂರ ಈಜಿಕೊಂಡು ಹೋಗಿ ವಾಪಸ್ಸು ಬರಲಾಗದೆ ಇತರರಿಗೆ ದಿಗಿಲು ಹುಟ್ಟಿಸಿದ್ದರು. ಇನ್ನು ಕೆಲವರು ತೀರದ ಮರಳಿನಲ್ಲಿ ಬಿದ್ದಿದ್ದ ಗಾಜಿನ ಚೂರುಗಳಿಂದ ಕಾಲು ಕೊಯ್ದುಕೊಂಡಿದ್ದರು. ಹೀಗೆ ಆದಾಗಲೆಲ್ಲಾ ಉಳಿದವರು ಸಹಾಯ ಮಾಡಲು ಹೆಣಗುತ್ತಿದ್ದರು.

ಆದರೂ ಒಟ್ಟಿನಲ್ಲಿ ಅದೊಂದು ರೀತಿ ಮಜವಾಗಿತ್ತು. ಅಲ್ಲಿ ಮಿಡತೆಗಳಿಂದ ತುಂಬಿ ಹೋಗಿದ್ದ ಕಾಡೊಂದಿತ್ತು. ಅಲ್ಲೊಂದು ಅಂಗಡಿಯಲ್ಲಿ ತಣ್ಣಗಿನ ಲಾಲಿಪಪ್ ಸಿಗುತ್ತಿತ್ತು. ಅಲ್ಲೇ ಮರಳಿನ ಮೇಲೆ ವ್ಯಕ್ತಿಯೊಬ್ಬ ಕುಳಿತು ಒಬ್ಬನೇ ಮರದಿಂದ ದೋಣಿಯನ್ನು ಮಾಡುತ್ತಿದ್ದ. ಅದಾಗಲೇ ದೋಣಿಯ ಆಕಾರ ರೂಪುಗೊಂಡಿತ್ತು. ಆ ಮನುಷ್ಯ ತೊತ್ತೊ-ಚಾನ್‌ಗೆ ಒಂದು ಉದ್ದನೆಯ ಸುರುಳಿ ಸುರುಳಿಯಾಗಿದ್ದ ಮರದ ತುಂಡನ್ನು ಕೊಟ್ಟನು.

"ಇಲ್ಲಿನ ನೆನಪಿಗೆ ಎಲ್ಲ ಸೇರಿ ಒಂಡು ಫೋಟೋ ತೆಗೆದುಕೊಳ್ಳೋಣವಾ ?" ಅವರೆಲ್ಲ ಅಲ್ಲಿಂದ ಹೊರಡುವ ದಿನ ಮುಖ್ಯೋಪಾಧ್ಯಾಯರು ಹೇಳಿದರು. ಈ ಮೊದಲು ಅವರೆಲ್ಲ ಸೇರಿ ಫೋಟೋ ತೆಗೆಸಿಕೊಂಡಿರಲಿಲ್ಲವಾದ್ದರಿಂದ ಮಕ್ಕಳಿಗೆ ಆ ಯೋಚನೆ ತುಂಬಾ ಹಿಡಿಸಿತು. ಆದರೆ ಉಪಾಧ್ಯಾಯರು ಯಾರೋ ತಮ್ಮ ಕ್ಯಾಮೆರಾ ಕ್ಲಿಕ್ಕಿಸಲು ಸಿದ್ಧರಾಗುವಾಗ ಯಾರೋ ಶೌಚಕ್ಕೆ ಹೋಗಿದ್ದರು. ಆತ ಬರುವ ವೇಳೆಗೆ ಶೂ ಅನ್ನು ತಪ್ಪು ತಪ್ಪಾಗಿ ಹಾಕಿಕೊಂಡಿದ್ದ ಮತ್ತೊಬ್ಬ ಹುಡುಗ ಅದನ್ನು ಸರಿಪಡಿಸಿಕೊಳ್ಳತೊಡಗಿದ್ದನು. ಉಪಾಧ್ಯಾಯರು ಕೊನೆಗೆ "ಎಲ್ಲರೂ ರೆಡೀನಾ ?" ಎಂದು ಕೇಳುವ ವೇಳೆಗೆ ಅಷ್ಟೊತ್ತೂ ಒಂದೇ ಭಂಗಿಯಲ್ಲಿ ನಿಂತು ಸುಸ್ತಾಗಿದ್ದ ಒಂದಿಬ್ಬರು ಬಿದ್ದೇ ಹೋಗಿದ್ರು. ಅಂತೂ ಅದೊಂದು ರಾಮಾಯಣವೇ ಆಯಿತು.

ಸಮುದ್ರವನ್ನು ಹಿನ್ನೆಲೆಯಲ್ಲಿ ಹೊಂದಿದ್ದು ಪ್ರತಿ ಮಕ್ಕಳೂ ತಮ್ಮ ಇಚ್ಛಾನುಸಾರದ ಭಂಗಿಯಲ್ಲಿದ್ದ ಆ ಫೋಟೋ ಮಾತ್ರ ಅವರ ಅನುದಿನದ ಆಸ್ತಿಯಾಯಿತು. ಅದನ್ನು ನೋಡುತ್ತಿದ್ದಂತೆಯೇ ಅವರಿಗೆಲ್ಲಾ ನೆನಪಾಗುವುದು ಹಡಗಿನ ಯಾನ, ಬಿಸಿನೀರಿನ ಬುಗ್ಗೆ, ದೆವ್ವದ ಕತೆಗಳು ಮತ್ತು ನಗಿಸಿದ ಹುಡುಗ. ತೊತ್ತೊ-ಚಾನ್ ಈ ಮೊದಲ ಬೇಸಿಗೆಯ ಪ್ರವಾಸವನ್ನು ಮರೆಯಲಾರಳು.

ಆ ದಿನಗಳಲ್ಲಿ ಟೋಕಿಯೋದಲ್ಲಿ ಮನೆಗಳ ಹತ್ತಿರದ ಕೊಳಗಳಲ್ಲಿ ಮುಳ್ಳುನಳ್ಳಿಗಳು ಇರುತ್ತಿದ್ದವು.ಕಸ ತೆಗೆಯುವವರು ದೊಡ್ಡ ಎತ್ತಿನ ಗಾಡಿಗಳನ್ನು ಬಳಸುತ್ತಿದ್ದರು.

## ಸಂಗೀತ ವ್ಯಾಯಾಮ

ಬೇಸಿಗೆ ರಜೆ ಮುಗಿದು ಎರಡನೇ ಸೆಮಿಸ್ಟರ್ ಪ್ರಾರಂಭವಾಗಿತ್ತು. ಜಪಾನಿನಲ್ಲಿ ಶಾಲಾವರ್ಷ ಪ್ರಾರಂಭವಾಗುವುದು ಏಪ್ರಿಲ್‌ನಿಂದ. ಆ ವೇಳೆಗೆ ತೊತ್ತೊ-ಚಾನ್ ತನ್ನ ತರಗತಿಯ ಮಕ್ಕಳಲ್ಲದೆ ಎಲ್ಲ ತರಗತಿಯ ದೊಡ್ಡ ಹುಡುಗರು ಹುಡುಗಿಯರ ಸ್ನೇಹ ಬೆಳೆಸಿದ್ದಳು. ಬೇಸಿಗೆ ರಜೆಯ ವಿವಿಧ ಸ್ನೇಹಕೂಟಗಳಲ್ಲಿ ಇದು ಸಾಧ್ಯವಾಗಿತ್ತು. ಈಗವಳು ತೊಮೊಯೆ ಗಾಕುಯಿನ್‌ಅನ್ನು ಮತ್ತಷ್ಟು ಹಚ್ಚಿಕೊಂಡಿದ್ದಳು.

ತೊಮೊಯೆದಲ್ಲಿನ ಪಾಠಗಳು ಇತರ ಮಾಮೂಲಿ ಶಾಲೆಗಳಿಗಿಂತ ಭಿನ್ನವಾಗಿರುತ್ತಿದ್ದುದರ ಜತೆಗೆ ಸಂಗೀತಕ್ಕೆ ಬಹಳಷ್ಟು ಸಮಯ ಕೊಡಲಾಗುತ್ತಿತ್ತು.

ಬಗೆಬಗೆಯ ಸಂಗೀತದ ಪಾಠಗಳು ಇರುತ್ತಿದ್ದವು. ಅಂತಹ ಸಂಗೀತ ಪಾಠಗಳಲ್ಲಿ ಸಂಗೀತ ವ್ಯಾಯಾಮವೂ ಒಂದು. ಲಯಬದ್ಧವಾದ ಈ ಚಟುವಟಿಕೆಗಳನ್ನು ಎಮೊಲಿ ಜೇಕ್ವೆಸ್-ಡಾಲ್‌ಕ್ರೋಸ್ ಎನ್ನುವ ಸ್ವಿಸ್ ಸಂಗೀತಗಾರರೊಬ್ಬರು ರೂಪಿಸಿದ್ದರು. ಇದು ಮೊಟ್ಟ ಮೊದಲಿಗೆ 1904ರಲ್ಲಿ ಬೆಳಕಿಗೆ ಬಂತು. ಇವರ ಈ ವಿಧಾನವು ಬೇಗನೇ ಯುರೋಪು ಮತ್ತು ಅಮೇರಿಕಗಳಾದ್ಯಂತ ಬಳಕೆಗೆ ಬಂತು. ಅಲ್ಲದೆ ಎಲ್ಲ ಕಡೆ ತರಬೇತಿ ಮತ್ತು ಸಂಶೋಧನಾ ಸಂಸ್ಥೆಗಳು ಹುಟ್ಟಿಕೊಂಡವು. ತೊಮೊಯೆದಲ್ಲಿ ಡಾಲ್‌ಕ್ರೋಸ್‌ರ ಸಂಗೀತ ವ್ಯಾಯಾಮ ಬಳಕೆಗೆ ಬಂದ ಕತೆ ಹೀಗಿದೆ.

ತೊಮೊಯೆ ಗಾಕುಯಿನ್ ಅನ್ನು ಪ್ರಾರಂಭಿಸುವ ಮುನ್ನ ಮುಖ್ಯೋಪಾಧ್ಯಾಯ ಸೊಸಾಕು ಕೊಬಾಯಾಶಿಯವರು ಬೇರೆ ದೇಶಗಳಲ್ಲಿ ಮಕ್ಕಳಿಗೆ ಹೇಗೆ ಶಿಕ್ಷಣ ಕೊಡಲಾಗುತ್ತದೆಂದು ನೋಡಲು ಯುರೋಪಿಗೆ ಹೋದರು. ಅನೇಕಾನೇಕ ಎಲಿಮೆಂಟರಿ ಶಾಲೆಗಳನ್ನು ಸಂದರ್ಶಿಸಿ ಶಿಕ್ಷಣ ತಜ್ಞರ ಬಳಿ ಚರ್ಚಿಸಿದರು. ಪ್ಯಾರಿಸ್‌ನಲ್ಲಿ ಅದ್ಭುತ ಸಂಗೀತ ನಿರ್ದೇಶಕರೂ ಮತ್ತು ಶಿಕ್ಷಣ ತಜ್ಞರೂ ಆದ ಡಾಲ್‌ಕ್ರೋಸ್‌ರನ್ನು ಸಂಧಿಸಿದರು.

ಮಕ್ಕಳು ಕೇವಲ ಸಂಗೀತವನ್ನು ಕಿವಿಯಲ್ಲಿ ಕೇಳಿಬಿಟ್ಟುಬಿಡುವುದಕ್ಕಿಂತ ಮನಸ್ಸಿನಿಂದ ಸಂವೇದಿಸುವ ರೀತಿಯಲ್ಲಿ ಅವರಿಗೆ ಹೇಗೆ ಕಲಿಸಬೇಕು, ಸಂಗೀತ ಚೈತನ್ಯ ಹೀನವಾಗಿರದೆ ಅದರ ಚಲನಶೀಲ ಅನುಭವವನ್ನು ಹಿಡಿದಿಡುವುದು ಹೇಗೆ ? ಮತ್ತು ಇದರ ಸಹಾಯದಿಂದ ಮಗುವಿನ ಸೂಕ್ಷ್ಮತೆಯನ್ನು ಹೇಗೆ ಚುರುಕುಗೊಳಿಸಬಹುದು ಎಂಬಿತ್ಯಾದಿಗಳ ಬಗ್ಗೆ ಡಾಲ್‌ಕ್ರೋಸ್‌ರು ತುಂಬಾ ಸಮಯ ಚಿಂತಿಸುತ್ತಾ ಕಾಲ ಕಳೆದಿದ್ದರು. ಕೊನೆಗೆ ಮಕ್ಕಳು ಕುಪ್ಪಳಿಸುವ ಮತ್ತು ನೆಗೆಯುವ ರೀತಿಗಳನ್ನು ಪರಿಶೀಲಿಸುವಾಗ ಅದನ್ನನುಸರಿಸಿ ಲಯಬದ್ಧವಾದ ಚಟುವಟಿಕೆಗಳನ್ನು ರೂಪಿಸುವ ವಿಚಾರ ಅವರಿಗೆ ಹೊಳೆದಿತ್ತು. ಅದನ್ನವರು ಸಂಗೀತ ವ್ಯಾಯಾಮ ಎಂದು ಕರೆದರು.

ಕೊಬಾಯಾಶಿಯವರು ಪ್ಯಾರಿಸ್‌ನಲ್ಲಿನ ಡಾಲ್‌ಕ್ರೋಸ್‌ರ ಶಾಲೆಯಲ್ಲಿ ಒಂದು ವರ್ಷ ಇದ್ದು, ಈ ವಿಧಾನವನ್ನು ಅಭ್ಯಾಸ ಮಾಡಿಕೊಂಡರು. ಅನೇಕ ಜಪಾನೀಯರು ಡಾಲ್‌ಕ್ರೋಸ್‌ರಿಂದ ಪ್ರಭಾವಿತರಾಗಿದ್ದರು. ಅವರೆಂದರೆ, ಜಪಾನಿ ಸಂಗೀತಗಾರ ಕೊಸ್ಸಾಕ್ ಯಾಮಾದ, ಜಪಾನಿನಲ್ಲಿ ಆಧುನಿಕ ನೃತ್ಯದ ನೇತಾರ ಬಕು ಇಸಹಿ, ಕುಬುಕಿ ನಟ ಇಚಿಕಾವ ಸದನಜಿ, ಆಧುನಿಕ ರಂಗಭೂಮಿಯ ಜನಕ ಕಾವೋರು ಓಸನ್ನಾಯ್, ನೃತ್ಯಪಟು ಮಿಚಿಯೋ ಇತೋ ಮುಂತಾದವರು. ಡಾಲ್‌ಕ್ರೋಸ್‌ರ ವಿಚಾರಗಳು ಅನೇಕ. ಜಪಾನಿನಲ್ಲಿ ಪ್ರಾಥಮಿಕ ಶಾಲಾ ಶಿಕ್ಷಣದಲ್ಲಿ ಇದನ್ನು ಅಳವಡಿಸಿಕೊಂಡರರಲ್ಲಿ ಸೊಸಾಕು ಕೊಬಾಯಾಶಿಯೇ ಮೊದಲಿಗರು.

ಸಂಗೀತ ವ್ಯಾಯಾಮವೆಂದರೇನೆಂದು ಆತನನ್ನೇನಾದರೂ ಕೇಳಿದರೆ, "ದೇಹದ ಕಾರ್ಯವ್ಯೂಹವನ್ನು ಪರಿಶುದ್ಧಗೊಳಿಸುವ ಒಂದು ಆಟ, ದೇಹವನ್ನು ಹೇಗೆ ಬಳಸಬೇಕು ಮತ್ತು ನಿಯಂತ್ರಿಸಬೇಕು ಎಂದು ಮಿದುಳಿಗೆ ಕಲಿಸುವ ಒಂದು ಆಟ,

ದೇಹ ಮತ್ತು ಮಿದುಳುಗಳೆರಡಕ್ಕೂ ಲಯವನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗಿಸುವ ಒಂದು ಆಟ'' ಎಂದು ಹೇಳುತ್ತಿದ್ದರು. ''ಸಂಗೀತ ವ್ಯಾಯಾಮದ ಅಭ್ಯಾಸದಿಂದ ವ್ಯಕ್ತಿತ್ವಕ್ಕೊಂದು ಲಯಬದ್ಧತೆ ದೊರೆಯುತ್ತದೆ. ಪ್ರಕೃತಿ ನಿಯಮವನ್ನು ಪಾಲಿಸುವ ಮತ್ತು ಅದರೊಟ್ಟಿಗೆ ಸಾಮರಸ್ಯ ಸಾಧಿಸುವ ಒಂದು ಲಯಬದ್ಧವಾದ ವ್ಯಕ್ತಿತ್ವ ಸುಂದರವೂ ಬಲಿಷ್ಠವೂ ಆಗಿರುತ್ತದೆ'' ಎಂದು ಉತ್ತರಿಸುತ್ತಿದ್ದರು.

ದೇಹಕ್ಕೆ ಲಯವನ್ನು ಅರ್ಥಮಾಡಿಸುವ ತರಬೇತಿಯಿಂದಲೇ ತೊತ್ತೊ-ಚಾನ್‌ಳ ತರಗತಿಗಳು ಪ್ರಾರಂಭವಾದದ್ದು. ಮುಖ್ಯೋಪಾಧ್ಯಾಯರು ಸಭಾಂಗಣದ ಸಣ್ಣ ವೇದಿಕೆಯ ಮೇಲೆ ಕುಳಿತು ಪಿಯಾನೋ ನುಡಿಸುವರು. ಮತ್ತು ಮಕ್ಕಳು ತಾವಿರುವಲ್ಲಿಂದಲೇ ಸಂಗೀತಕ್ಕೆ ಹೊಂದಿಕೊಂಡು ನಡೆಯತೊಡಗುವರು. ಅವರು ಹೇಗೆ ಬೇಕೋ ಹಾಗೆ ನಡೆಯಬಹುದಾಗಿತ್ತು. ಆದರೆ ಹಾಗೆ ಮಾಡುವಾಗ ಮತ್ತೊಬ್ಬರಿಗೆ ಢಿಕ್ಕಿ ಹೊಡೆಯಬಾರದು ಎಂದು ವೃತ್ತಾಕಾರವಾಗಿ ನಡೆಯುತ್ತಿದ್ದರು. ಸಂಗೀತವು ಎರಡು ತಾಳದ ಲಯದಲ್ಲಿದ್ದರೆ ಅವರು ತಮ್ಮ ಕೈಗಳನ್ನು ಕಂಡೆಕ್ಟರ್‌ನಂತೆ ಮೇಲಕ್ಕೂ ಕೆಳಕ್ಕೂ ಬೀಸುತ್ತಾ ನಡೆಯುವರು. ಅವರು ಹೆಜ್ಜೆಗಳನ್ನು ತುಂಬಾ ಊರಿ ನಡೆಯಬೇಕಾಗಿರಲಿಲ್ಲ. ಹಾಗೆಂದ ಮಾತ್ರಕ್ಕೆ ಬ್ಯಾಲೆಯ ರೀತಿಯಲ್ಲಿ ತುದಿಗಾಲಲ್ಲಿ ನಡೆಯಬೇಕೆಂದೂ ಅಲ್ಲ. ಸಂಪೂರ್ಣ ಆರಾಮವಾಗಿ ಹೆಜ್ಜೆಗಳಿಗೆ ಸ್ವಲ್ಪವೂ ತ್ರಾಸ ಕೊಡದೆ ನಡೆಯಬೇಕೆಂದು ಅವರಿಗೆ ಹೇಳಲಾಗುತ್ತಿತ್ತು. ಅಲ್ಲಿ ಸಹಜತೆ ಬಹುಮುಖ್ಯ. ಹೀಗಾಗಿ ಅವರು ತಮಗೆ ಸರಿ ಕಾಣುವ ರೀತಿಯಲ್ಲಿ ನಡೆಯಬಹುದಾಗಿತ್ತು. ತಾಳ ಎರಡರಿಂದ ಮೂರಕ್ಕೆ ಏರಿದರೆ ಅದಕ್ಕೆ ಸರಿಹೊಂದುವ ರೀತಿಯಲ್ಲಿ ಬೀಸುವಿಕೆಯನ್ನು ಅಳವಡಿಸಿಕೊಳ್ಳುತ್ತಾ ಹಾಗೆಯೇ ನಡಿಗೆಯನ್ನು ನಿಧಾನಗೊಳಿಸಿಯೋ, ಚುರುಕುಗೊಳಿಸಿಯೋ ಲಯಕ್ಕೆ ಹೊಂದಿಸಿಕೊಳ್ಳಬೇಕು. ಆರು ತಾಳದ ಲಯದವರೆಗೂ ಹೊಂದಿಕೊಳ್ಳುವಂತೆ ಕೈಯನ್ನು ಏರಿಸುವುದನ್ನು ಅವರು ಕಲಿಯಬೇಕಾಗಿತ್ತು. ನಾಲ್ಕು ತಾಳದ್ದು ಸರಳ. ''ಮೊದಲು ಕೆಳಗೆ, ನಂತರ ಸುತ್ತಲೂ, ನಂತರ ಪಕ್ಕಗಳಿಂದ ಮೇಲಕ್ಕೆ.''

ಆದರೆ ಐದು ತಾಳಗಳಿಗೆ ಬಂದಾಗ:

''ಕೆಳಗೆ, ಸುತ್ತಲೂ, ಮುಂದಿನಿಂದ ತಂದು ಪಕ್ಕಗಳಿಗೆ ಮತ್ತು ಅಲ್ಲಿಂದ ಮೇಲಕ್ಕೆ ಹೋಗಬೇಕು.''

ಆರು ತಾಳಕ್ಕೆ ಬಂದಾಗ ಕೈಗಳ ಚಲನೆ ಹೀಗಿರುತ್ತದೆ:

''ಕೆಳಗೆ, ಸುತ್ತಲೂ, ಮುಂದಿನಿಂದ ಹೊರಚಾಚಿ, ಪುನಃ ಸುತ್ತಲೂ ತಂದು ಪಕ್ಕಗಳಿಂದ ಹೊರತಂದು ಮೇಲಕ್ಕೆ ಒಯ್ಯಬೇಕು.''

ಹೀಗಾಗಿ ತಾಳಗಳು ಬದಲಾಗುತ್ತಾ ಹೋಗುವಾಗ ಸಾಕಷ್ಟು ಕಷ್ಟವೇ ಆಗುತ್ತಿತ್ತು. ಅದಕ್ಕಿಂತಲೂ ಕಷ್ಟವಾದ್ದೆಂದರೆ ''ನಾನು ಪಿಯಾನೋದಲ್ಲಿ ತಾಳವನ್ನು ಬದಲಾಯಿಸಿದಾಗಲೂ, ನಾನು ಹೇಳುವವರೆಗೂ ನೀವು ನಡಿಗೆ ಬದಲಾಯಿಸಕೂಡದು'' ಎಂದು ಮುಖ್ಯೋಪಾಧ್ಯಾಯರು ಹೇಳುತ್ತಿದ್ದುದು.

ಮಕ್ಕಳು ಎರಡು ತಾಳದ ಲಯದಲ್ಲಿ ನಡೆಯುತ್ತಿದ್ದಾರೆ ಎಂದಿಟ್ಟುಕೊಳ್ಳೋಣ. ಲಯವು ಮೂರು ತಾಳಕ್ಕೆ ಬದಲಾದರೂ ಅದನ್ನು ಕೇಳುತ್ತಲೇ ಅವರು ಎರಡು ತಾಳದ ಲಯದಲ್ಲಿ ನಡೆಯಬೇಕು. ಇದು ಬಲು ಕಷ್ಟವಾಗಿತ್ತು. ಆದರೆ ಮಕ್ಕಳ ಏಕಾಗ್ರತೆಯನ್ನು ಬೆಳೆಸಲು ಅದು ತುಂಬಾ ಮುಖ್ಯ ಎಂದು ಮುಖ್ಯೋಪಾಧ್ಯಾಯರು ಹೇಳುತ್ತಿದ್ದರು.

ಕೊನೆಗೆ ಅವರು ಕೂಗಿ ಹೇಳುತ್ತಿದ್ದರು "ಈಗ ಬದಲಾಯಿಸಿ." ಮಕ್ಕಳಿಗೆ ನಿರಾಳವೆನಿಸಿ ತಕ್ಷಣ ತಾಳದ ಲಯಕ್ಕೆ ಬದಲಾಯಿಸುತ್ತಿದ್ದರು. ಆದರೆ ಆ ಸಮಯದಲ್ಲಿ ಅವರು ಅಪಾರ ಜಾಗರೂಕತೆಯಿಂದ ಇರಬೇಕು. ಎರಡು ತಾಳದ ಲಯದಿಂದ ಮೂರು ತಾಳದ ಲಯಕ್ಕೆ ಹೊಂದಿಕೊಳ್ಳುವಂತೆ ಮಾಂಸಖಂಡಗಳಿಗೆ ಆದೇಶಿಸಬೇಕು. ಅಷ್ಟರಲ್ಲೇ ಲಯವು ನಾಲ್ಕು ತಾಳಕ್ಕೋ, ಐದು ತಾಳಕ್ಕೋ ಏರಬಹುದು. ಮೊದಮೊದಲಿಗೆ ಅವರ ಕೈಕಾಲುಗಳು ಚಡಪಡಿಸಿ ಹೋಗುತ್ತಿದ್ದವು. ಆದೇಶಗಳನ್ನು ಪಾಲಿಸಲಾಗದೆ "ತಡೆಯಿರಿ" "ತಡೆಯಿರಿ" ಎಂದು ಬೇಡುವರು. ಕ್ರಮೇಣ ಅಭ್ಯಾಸದಿಂದ ಚಲನೆಗಳು ರೂಢಿಯಾಗಿ ಎಂತಹ ಲಯವನ್ನಾದರೂ ಆನಂದಿಸುವ ಹಂತಕ್ಕೆ ತಲುಪುವರು.

ಈ ಸಂಗೀತ ವ್ಯಾಯಾಮದಲ್ಲಿ ಮಕ್ಕಳು ಒಬ್ಬೊಬ್ಬರೇ ನಡೆಯುವುದು ವಾಡಿಕೆಯಾದರೂ ಕೆಲಸಮಯ ಎರಡು ತಾಳದ ಲಯದಲ್ಲಿದ್ದಾಗ ಇಬ್ಬರು ಕೈಕೈ ಹಿಡಿದು ನಡೆಯುವರು. ಕೆಲವೊಮ್ಮೆ ಕಣ್ಣು ಮುಚ್ಚಿಕೊಂಡು ಏಕಾಗ್ರತೆ ತಂದುಕೊಳ್ಳಲು ಪ್ರಯತ್ನಿಸುವರು. ಇಲ್ಲಿ ಸಂಪೂರ್ಣ ನಿಷಿದ್ಧವಾಗಿದ್ದ ಒಂದೇ ಒಂದೆಂದರೆ ಮಾತು.

ಕೆಲಸಮಯ ಪೋಷಕ-ಶಿಕ್ಷಕರ ಸಭೆ ಇದ್ದಾಗ ಹಲವು ತಾಯಂದಿರು ಸಂಗೀತ ವ್ಯಾಯಾಮವನ್ನು ಕಿಟಕಿಯಿಂದ ಇಣುಕಿಣುಕಿ ನೋಡುವಳು. ಮಕ್ಕಳು ತಮ್ಮ ಕೈಕಾಲುಗಳನ್ನು ಹಗುರವಾಗಿ ಆಡಿಸುತ್ತಾ ಸಂಗೀತಕ್ಕನುಸಾರ ಲಯಬದ್ಧವಾಗಿ ನಡೆಯುವುದನ್ನು ನೋಡುವುದೇ ಒಂದು ಆನಂದ.

ಹೀಗಾಗಿ ಸಂಗೀತ ವ್ಯಾಯಾಮದ ಉದ್ದೇಶವೆಂದರೆ, ಮೊದಲು ಮನಸ್ಸು ದೇಹಗಳೆರಡಕ್ಕೂ ಸಂಗೀತದ ಪ್ರಜ್ಞೆಯನ್ನು ಬೆಳೆಸುವುದು, ತನ್ಮೂಲಕ ದೇಹ ಮತ್ತು ಚೇತನಗಳೆರಡರ ನಡುವೆ ಸಾಮರಸ್ಯ ಸಾಧಿಸುವುದು ಮತ್ತು ಅಂತಿಮವಾಗಿ ಊಹಾಶಕ್ತಿಯನ್ನು ಬಡಿದೆಬ್ಬಿಸಿ ಸೃಜನಶೀಲತೆಯನ್ನು ಚುರುಕುಗೊಳಿಸುವುದು.

ಮೊದಲನೇ ದಿನ ಅಮ್ಮನೊಂದಿಗೆ ಶಾಲೆಗೆ ಬಂದಾಗ ತೊತ್ತೊ-ಚಾನ್ ಶಾಲೆಯ ಹೆಸರನ್ನು ಕಂಡು ಅಮ್ಮನನ್ನು ಕೇಳಿದ್ದಳು "ತೊಮೊಯೆ ಎಂದರೆ ಏನು ?" ಎಂದು.

ತೊಮೊಯೆ ಎನ್ನುವುದು ಒಂದು ಪ್ರಾಚೀನ 'ಕಾಮಾ' ಆಕಾರದ ಸಂಕೇತವಾಗಿದ್ದು ಹೆಡ್‌ಮಾಸ್ತರು ತಮ್ಮ ಶಾಲೆಗೆ ಎರಡು ತೊಮೊಯೆಗಳಿರುವ ಒಂದು ಚಿಹ್ನೆಯನ್ನು ರೂಪಿಸಿಕೊಂಡಿದ್ದರು. ಇವುಗಳಲ್ಲಿ ಒಂದು ಕಪ್ಪು ಮತ್ತೊಂದು ಬಿಳುಪಿನದಾಗಿದ್ದು ಒಂದು ವೃತ್ತದೊಳಕ್ಕೆ ಸರಿಯಾಗಿ ಹೊಂದಿಕೊಳ್ಳುತ್ತಿದ್ದವು.

ಇದು ಮಕ್ಕಳ ಬಗೆಗಿನ ಮುಖ್ಯೋಪಾಧ್ಯಾಯರ ಗುರಿಯಾಗಿತ್ತು. ದೇಹ ಮತ್ತು

ಮನಸ್ಸುಗಳೆರಡೂ ಸಮಾನವಾಗಿ ಬೆಳವಣಿಗೆ ಹೊಂದಿದ ಸಾಮರಸ್ಯದ ಸ್ಥಿತಿ ಅದು.

ಮಕ್ಕಳ ವ್ಯಕ್ತಿತ್ವ ವಿಪರೀತವಾಗಿ ದೊಡ್ಡವರ ಪ್ರಭಾವಕ್ಕೆ ಒಳಗಾಗದೆ ಸಹಜವಾಗಿ ವಿಕಾಸಗೊಳ್ಳುತ್ತಾ ಹೋಗಲು ಸಹಾಯವಾಗಲಿ ಎಂಬ ಉದ್ದೇಶದಿಂದ ಮುಖ್ಯೋಪಾಧ್ಯಾಯರು ಸಂಗೀತ ವ್ಯಾಯಾಮವನ್ನು ಶಾಲೆಯ ಪಾಠಗಳಲ್ಲಿ ಸಮೀಕರಿಸಿದ್ದರು.

ಇಂದಿನ ಶಿಕ್ಷಣ ಪದ್ಧತಿಯು ತುಂಬಾ ಬರೀ ಬರೆದಿಟ್ಟ ಪದಗಳನ್ನು ತುಂಬಿಕೊಂಡಿದೆ; ಇದು ಮಕ್ಕಳ ಸಂವೇದನಾಶೀಲತೆಗೆ, ಅಂತರ್‌ದೃಷ್ಟಿಗೆ ಎಚ್ಚರದಿಂದಿರಬಲ್ಲ ಶಕ್ತಿಯನ್ನು ಸ್ವಲ್ಪವೂ ಉದ್ದೀಪಿಸುವುದಿಲ್ಲ ಎಂಬುದು ಮುಖ್ಯೋಪಾಧ್ಯಾಯರ ಟೀಕೆಯಾಗಿತ್ತು.

ಕವಿ ಬಾಷೋ ಹೀಗೆ ಬರೆಯುತ್ತಾನೆ:

ಕೇಳಿ ! ಕಪ್ಪೆಯೊಂದು
ಪುರಾತನ ಕೊಳದ
ಮೌನದೊಳಕ್ಕೆ ಹಾರುತಿದೆ !

ಕಪ್ಪೆ ಕೊಳದೊಳಕ್ಕೆ ಹಾರುವಂತಹದ್ದನ್ನು ಅನೇಕರು ನೋಡಬಹುದು. ಆದರೆ ಶತಶತಮಾನಗಳಲ್ಲಿ ಇಡೀ ಪ್ರಪಂಚದಲ್ಲಿ, ಕುಡಿಯುವ ನೀರಿನ ಕೆಟಲಿನಿಂದ ಆವಿ ಬರುವುದನ್ನು ಮತ್ತು ಸೇಬಿನಹಣ್ಣು ಬೀಳುವುದನ್ನು ಕಂಡವರು ಒಬ್ಬ ವಾಟ್ ಮತ್ತು ಒಬ್ಬ ನ್ಯೂಟನ್ ಮಾತ್ರ ಅಲ್ಲ.

ಕಣ್ಣಿದ್ದೂ ಸೌಂದರ್ಯವನ್ನು ನೋಡದ; ಕಿವಿಯಿದ್ದು ಸಂಗೀತವನ್ನು ಕೇಳದ; ಮನಸ್ಸಿದ್ದೂ ಸತ್ಯವನ್ನು ಅರಿಯದ; ಹೃದಯವಿದ್ದೂ ಕರಗದ ಸ್ಥಿತಿಗಳು ! ನಾವು ಹೆದರಿಕೊಳ್ಳಬೇಕಾದ್ದು ಇದಕ್ಕೆ ಎಂದು ಮುಖ್ಯೋಪಾಧ್ಯಾಯರು ಹೇಳುತ್ತಿದ್ದರು.

ಇವೆಲ್ಲವೂ ಶಾಲೆಯಲ್ಲಿನ ಕಲಿಕೆಯ ಭಾಗವೆಂದು ನಂಬುವುದೇ ಕಷ್ಟವೆಂದುಕೊಂಡು ತೊತ್ತೊ-ಚಾನ್ ಭಾವುಕಳಾಗಿ ಬರಿಗಾಲಿನಲ್ಲಿ ಸಂತೋಷದಿಂದ ಜಿಗಿಯುತ್ತಾ ಓಡಾತೊಡಗಿದಳು.

## "ನನಗೆ ಅದೇ ಬೇಕು !"

ತೊತ್ತೊ-ಚಾನ್ ಮೊದಲ ಸಲ ದೇವರ ಜಾತ್ರೆಗೆ ಹೋಗಿದ್ದಳು. ಅವಳ ಹಳೆಯ ಶಾಲೆಯ ಹತ್ತಿರ ಸೆನ್‌ಜೋಕುಕೊಳದ ಮಧ್ಯದಲ್ಲಿ ಒಂದು ಸಣ್ಣ ದ್ವೀಪವಿತ್ತು. ಅಲ್ಲಿ ಸೌಂದರ್ಯ ಮತ್ತು ಸಂಗೀತ ದೇವತೆ ಬೆಂಟೆನ್‌ಗೆ ಅರ್ಪಿತಗೊಂಡ ಗುಡಿಯೊಂದಿತ್ತು. ವಾರ್ಷಿಕ ಜಾತ್ರೆಯ ದಿನ ನಸುಗತ್ತಲಲ್ಲಿ ತಂದೆ-ತಾಯಿಯೊಡನೆ ತೊತ್ತೊ-ಚಾನ್ ನಡೆದು ಜಾತ್ರೆಯ ಸ್ಥಳ ಸೇರುತ್ತಿದ್ದಂತೆಯೇ ಝುಗ್ಗನೆ ದೀಪಗಳು ಹತ್ತಿಕೊಂಡು ಬೆಳಕಿನ ಹೊನಲಾಯಿತು. ತೊತ್ತೊ-ಚಾನ್ ಪ್ರತಿಯೊಂದು ಸಣ್ಣಪುಟ್ಟ ಅಂಗಡಿಯೊಳಗೂ ಇಣುಕಿ ನೋಡುತ್ತಾ ನಡೆದಳು. ಎಲ್ಲೆಲ್ಲೂ ವಿಚಿತ್ರ ಬಗೆಯ ಸದ್ದುಗಳು. ಅವಳಿಗೆ ಪ್ರತಿಯೊಂದೂ ಹೊಸತು ಮತ್ತು ವಿಸ್ಮಯಕಾರಿ.



ಪೆಪ್ಪರಮೆಂಟನ್ನು ಹೀರಿಕೊಂಡು 'ಸೇದುವ' ಆಟಿಕೆಯ ಪೈಪುಗಳಿದ್ದವು. ಅವುಗಳ ಮೇಲೆಲ್ಲಾ ಬೆಕ್ಕುಗಳ, ನಾಯಿಗಳ ಚಿತ್ರಗಳಿದ್ದವು. ಲಾಲಿಪಾಪ್ ಮತ್ತು ಹತ್ತಿಯ ಕ್ಯಾಂಡಿಗಳಿದ್ದುವು. ಬಂದೂಕಿನಂತೆ ಉಪಯೋಗಿಸಬಲ್ಲ ಬಿದಿರಿನಿಂದ ಮಾಡಿದ ಪೆಟಲುಗಳಿದ್ದವು (ಪ್ಪೋಟೆ ಕೊಳವೆ). ಇದರಲ್ಲಿ ಕೊಳವೆಯ ಮೂಲಕ ಒಂದು ಬಗೆಯ ಗಿಡದ ಕಾಂಡದ ಚೂರನ್ನು ರಭಸವಾಗಿ ತಳ್ಳಿ ದೊಡ್ಡ ಶಬ್ದ ಹೊರಡಿಸುವುದು ಸಾಧ್ಯವಾಗುತ್ತಿತ್ತು.

ರಸ್ತೆಯ ಪಕ್ಕದಲ್ಲಿ ಒಬ್ಬನು ಕತ್ತಿಯತುಣುಕು ಮತ್ತು ಗಾಜು ತಿನ್ನುತ್ತಿದ್ದನು. ಗುಂಡಗಿನ ಬಟ್ಟಲಿನ ಅಂಚಿಗೆ ಉಜ್ಜಿ ವಿಚಿತ್ರ ಧ್ವನಿ ಹೊರಡಿಸಲು ಸಾಧ್ಯವಾಗುವಂತಹ ಪುಡಿಯನ್ನು ಮತ್ತೊಬ್ಬ ಮಾರುತ್ತಿದ್ದನು. ದುಡ್ಡನ್ನು ನಾಪತ್ತೆ ಮಾಡುವ ಮಾಂತ್ರಿಕ ಉಂಗುರಗಳು, ಸೂರ್ಯನ ಬೆಳಕಿಗೆ ಒಡ್ಡಿದಾಗ ಮೂಡಿಬರುವ ಛಾಯಾಚಿತ್ರಗಳು, ನೀರಿನ ಲೋಟದೊಳಕ್ಕೆ ಬಿಟ್ಟಾಕ್ಷಣ ಅರಳಿಕೊಳ್ಳುವ ಕಾಗದದ ಹೂಗಳು ಹೀಗೆ ಏನೇನೋ ಇದ್ದವು ಅಲ್ಲಿ. ಸುತ್ತಲೂ ಕಣ್ಣಾಡಿಸುತ್ತಾ ಎಲ್ಲವನ್ನೂ ನೋಡುತ್ತಾ ನಡೆದಿದ್ದ ತೊತ್ತೊ-ಚಾನ್ ಇದ್ದಕ್ಕಿದ್ದಂತೆ ನಿಂತುಬಿಟ್ಟಳು.

"ನೋಡಿಲ್ಲಿ" ಪೆಟ್ಟಿಗೆಯೊಂದರಲ್ಲಿ ತುಂಬಿಕೊಂಡು ಕಿಚಿಪಿಚಿಯೆನ್ನುತ್ತಿದ್ದ ಬಣ್ಣದ ಕೋಳಿಪಿಳ್ಳೆಗಳನ್ನು ಕಂಡು ಕೂಗಿಕೊಂಡಳು.

"ನನಗೊಂದು ಬೇಕು" ತಂದೆ-ತಾಯಿಗಳನ್ನು ಜಗ್ಗಿ ಎಳೆದಳು.

"ನನಗೆ ಒಂದೇ ಒಂದು ಕೊಡಿಸಿ, ದಯವಿಟ್ಟು ಒಂದೇ ಒಂದು." ಕೋಳಿಪಿಳ್ಳೆಗಳು ತಮ್ಮ ಹೂವಿನಂಥ ತಲೆಯನ್ನು ಎತ್ತಿ ತೊತ್ತೊ-ಚಾನ್‌ಳ ಕಡೆ ತಿರುಗಿ ಮತ್ತಷ್ಟು ಕಿಚಿಪಿಚಿಗುಟ್ಟಿದುವು. "ಎಷ್ಟು ಮುದ್ದಾಗಿವೇ ಅಲ್ಲಾ?" ತನ್ನ ಜೀವನದಲ್ಲೇ ಇಷ್ಟೊಂದು ಮನಸೆಳೆಯುವಂಥದ್ದನ್ನು ನೋಡೇ ಇಲ್ಲ ಎಂದುಕೊಂಡಳು. ಅವುಗಳ ಪಕ್ಕ ಸರಿದು ಕುಳಿತೇ ಬಿಟ್ಟಳು.

"ದಯವಿಟ್ಟು" ತಂದೆ-ತಾಯಿಗಳತ್ತ ನೋಡುತ್ತಾ ಬೇಡಿದಳು. ಆದರೆ ಅವರು ಅವಳನ್ನು ಬೇರೆಡೆಗೆ ಕರೆದೊಯ್ಯಲು ಪ್ರಯತ್ನಿಸುತ್ತಿದ್ದರು. "ನೀವು ನನಗೆ ಏನಾದರೂ ಕೊಡಿಸುವುದಾಗಿ ಹೇಳಿದ್ದಿರಲ್ಲಾ, ಇದೇ ನನಗೆ ಬೇಕು."

"ಬೇಡ ಮಗು" ಅಮ್ಮ ಮೆಲ್ಲಗೆ ಹೇಳಿದಳು. "ಈ ಕೋಳಿಮರಿಗಳು ಬಲು ಬೇಗ ಸಾಯುತ್ತವೆ."

"ಯಾಕೆ" ಕೇಳುತ್ತಾ ತೊತ್ತೊ-ಚಾನ್ ಅಳಲು ಪ್ರಾರಂಭಿಸಿದಳು. ಅಪ್ಪ ಅವಳನ್ನು ಪಕ್ಕಕ್ಕೆ ಕರೆದುಕೊಂಡು ಹೋಗಿ ಮಾರುವವನಿಗೆ ಕೇಳದಂತೆ ಹೇಳಿದರು "ಅವು ಈಗ ನೋಡಲು ಮುದ್ದಾಗಿವೆ, ತಾತ್‌ಸ್ಕಿ, ಆದರೆ ಅವು ತುಂಬಾ ಸೂಕ್ಷ್ಮ. ಅವು ಬಹಳ ಸಮಯ ಬದುಕೋದಿಲ್ಲ. ಅವು ಸತ್ತಾಗ ನೀನು ಸುಮ್ಮನೇ ಅಳುತ್ತೀ ಅಷ್ಟೇ. ಅದಕ್ಕೇ ನಿನಗೆ ಅದನ್ನು ಕೊಡಿಸೋದಿಲ್ಲವೆಂದು ಹೇಳಿದ್ದು."

ಆದರೆ ಒಂದು ಕೋಳಿಮರಿಯನ್ನು ಕೊಳ್ಳಲೇಬೇಕೆಂದು ನಿಶ್ಚಯಿಸಿಕೊಂಡ ತೊತ್ತೊ-ಚಾನ್‌ಳಿಗೆ ಇದ್ಯಾವುದೂ ಮನಸ್ಸಿಗೆ ಹೋಗದು.

"ನಾನದನ್ನು ಸಾಯಲು ಬಿಡೋದಿಲ್ಲ. ಚೆನ್ನಾಗಿ ನೋಡಿಕೋತೀನೀ."

ತಂದೆ-ತಾಯಿಗಳು ತೊತ್ತೊ-ಚಾನ್‌ಳನ್ನು ಆ ಪೆಟ್ಟಿಗೆಯಿಂದ ದೂರ ಸೆಳೆಯಲು ಪ್ರಯತ್ನಿಸಿದಷ್ಟೂ ಅವಳು ಕೋಳಿಮರಿಗಳಿಗೇ ಅಂಟಿಕೊಳ್ಳುತ್ತಿದ್ದಳು. ಅವೂ ಇವಳಿಗೇ ಅಂಟಿಕೊಂಡು ಮತ್ತಷ್ಟು ಜೋರಾಗಿ ಕೂಗುತ್ತಿದ್ದವು. ತನಗೆ ಬೇಕಾಗಿರುವುದು ಈ ಕೋಳಿಮರಿ ಮಾತ್ರ ಎಂದು ತೊತ್ತೊ-ಚಾನ್ ದೃಢವಾಗಿ ಹೇಳಿದಳು. ಮತ್ತೆ ಮತ್ತೆ ಬೇಡಿದಳು. "ದಯವಿಟ್ಟು ಒಂದೇ ಒಂದು ಕೊಡಿಸಿ" ಅವರು ಮಣಿಯಲಿಲ್ಲ.

"ನಾವು ನಿನಗೆ ಕೊಡಿಸೋದಿಲ್ಲ, ಅದರಿಂದ ಕೊನೆಗೆ ನೀನು ಸುಮ್ಮನೆ ಅಳಬೇಕಾಗುವುದಷ್ಟೆ."

ತೊತ್ತೊ-ಚಾನ್ ಜೋರಾಗಿ ಅಳಲು ಪ್ರಾರಂಭಿಸಿದಳು. ಕಣ್ಣೀರು ಸುರಿಸುತ್ತಾ ಮನೆಗೆ ನಡೆಯತೊಡಗಿದಳು. ಅವರು ಕತ್ತಲೆಯ ರಸ್ತೆಯನ್ನು ತಲುಪಿದನಂತರ ಬಿಕ್ಕುತ್ತಾ ಹೇಳಿದಳು, "ನನ್ನ ಜೀವನದಲ್ಲೇ ನನಗೆ ಯಾವುದೂ ಇಷ್ಟೊಂದು ಬೇಕು ಅಂತ ಅನ್ನಿಸಿರಲಿಲ್ಲ. ಏನಾದರೂ ಕೊಡಿಸಿ ಎಂದು ಇನ್ನು ಯಾವತ್ತೂ ನಿಮ್ಮನ್ನು ಕೇಳುವುದಿಲ್ಲ. ಒಂದೇ ಒಂದು ಕೋಳಿಮರಿ ಕೊಡಿಸಿಬಿಡಿ." ಕೊನೆಗೂ ಅವರು ಸೋಲಬೇಕಾಯಿತು.

ಮಳೆ ಬಿದ್ದ ನಂತರ ಸೂರ್ಯ ಮೂಡಿ ಬಂದ ಹಾಗೆ ಆಗಿತ್ತು. ಸಣ್ಣ ಪೆಟ್ಟಿಗೆಯಲ್ಲಿ ಎರಡು ಕೋಳಿಮರಿಗಳನ್ನು ಹಿಡಿದು ಮನೆಗೆ ನಡೆಯುತ್ತಿದ್ದ ತೊತ್ತೊ-ಚಾನ್ ಮುಖದಲ್ಲಿ ಮುಗುಳ್ನಗೆಯೇ ಮೂರ್ತಿವೆತ್ತಂತಿತ್ತು.

ಮರುದಿನ, ಅಮ್ಮ ಕೋಳಿಮರಿಗಳನ್ನು ಬೆಚ್ಚಗಿಡಲು ವಿದ್ಯುತ್ ಬಲ್ಬುಗಳನ್ನು ಅಳವಡಿಸಲು ಸಾಧ್ಯವಾಗುವಂತಹ ವಿಶೇಷವಾದ ಪೆಟ್ಟಿಗೆಯನ್ನು ಬಡಗಿಯ ಕೈಯಲ್ಲಿ ಮಾಡಿಸಿದಳು. ತೊತ್ತೊ-ಚಾನ್ ಇಡೀ ದಿನ ಕೋಳಿಮರಿಗಳನ್ನು ನೋಡುತ್ತಿದ್ದಳು. ಪುಟ್ಟ ಹಳದಿ ಮರಿಗಳು ತುಂಬಾ ಮುದ್ದಾಗಿದ್ದವು. ಆದರೆ ಏನು ಪ್ರಯೋಜನ ? ನಾಲ್ಕನೇ ದಿನಕ್ಕೆ ಸರಿಯಾಗಿ ಅವುಗಳಲ್ಲಿ ಒಂದು ಚಲನೆಯನ್ನು ನಿಲ್ಲಿಸಿಬಿಟ್ಟಿತು. ಐದನೆಯ ದಿನ ಎರಡನೆಯದ್ದೂ ಕೂಡ. ಅವಳು ಅವುಗಳನ್ನು ಮೆಲ್ಲನೆ ಅಲುಗಿಸಿ ಕೂಗಿ ನೋಡಿದಳು. ಅವು ಒಂದು ಸಾರಿಯೂ ಕಿಚಿಪಿಚಿ ಎನ್ನಲಿಲ್ಲ. ಅವಳು ಕಾದು ಕಾದು ನೋಡಿದಳು. ಅವು ಪುನಃ ಕಣ್ಣು ತೆರೆಯಲೇ ಇಲ್ಲ. ಅಳುತ್ತಾ ತೋಟದಲ್ಲಿ ಒಂದು ಗುಂಡಿ ತೋಡಿ ಅವನ್ನು ಹೂತುಹಾಕಿದಳು. ಅದರ ಮೇಲೆ ಒಂದು ಸಣ್ಣ ಹೂವನ್ನಿಟ್ಟಳು. ಅವುಗಳನ್ನು ಇಟ್ಟಿದ್ದ ಪೆಟ್ಟಿಗೆ ಈಗ ಬಿಕೋ ಎನ್ನುತ್ತಿದ್ದು ಬೇಸರ ಹುಟ್ಟಿಸುತ್ತಿತ್ತು. ಪೆಟ್ಟಿಗೆಯ ಮೂಲೆಯೊಂದರಲ್ಲಿ ಪುಟ್ಟ ಹಳದೀ ಪುಕ್ಕವೊಂದನ್ನು ಕಂಡಾಗ ಆ ಕೋಳಿಮರಿಗಳು ಜಾತ್ರೆಯಲ್ಲಿ ತನ್ನನ್ನು ನೋಡಿ ಹೇಗೆ ಕಿಚಿಪಿಚಿ ಎನ್ನುತ್ತಿದ್ದವು ಎಂದು ನೆನೆಸಿಕೊಂಡಳು. ಹಲ್ಲುಕಚ್ಚಿ ಅಳು ತಡೆಯಲು ಪ್ರಯತ್ನಿಸಿದಳು.

ತನ್ನ ಜೀವನದಲ್ಲೇ ಅವಳಿಗೆ ಯಾವುದು ಅಷ್ಟೊಂದು ತೀವ್ರವಾಗಿ ಬೇಕು ಅನ್ನಿಸಿತ್ತೋ ಆ ಕೋಳಿಪಿಳ್ಳೆಗಳು ಬಲುಬೇಗ ಹೊರಟುಹೋಗಿದ್ದವು. ಇದು ಅವಳ ಮೊದಲ ಅಗಲಿಕೆಯ ಮತ್ತು ಕಳೆದುಕೊಂಡ ಅನುಭವವಾಗಿತ್ತು.

## ಕಳಪೆ ಬಟ್ಟೆಗಳು

ತೊಮೊಯೆದಲ್ಲಿ ಶಾಲೆಗೆ ತಮ್ಮ ಮಕ್ಕಳನ್ನು ಅತ್ಯಂತ ಸಾಧಾರಣ ಬಟ್ಟೆಯಲ್ಲಿ ಕಳಿಸುವಂತೆ ಮುಖ್ಯೋಪಾಧ್ಯಾಯರು ತಂದೆ-ತಾಯಿಗಳಿಗೆ ಹೇಳುತ್ತಿದ್ದರು. ಬಟ್ಟೆಗಳು ಮಣ್ಣಾದರೆ ಮತ್ತು ಹರಿದುಹೋದರೆ ತೊಂದರೆಯಾಗಕೂಡದು ಎಂಬುದು ಅವರ ಯೋಚನೆಯಾಗಿತ್ತು. ಬಟ್ಟೆಗಳು ಕೊಳೆಯಾಗಿಬಿಟ್ಟರೆ ಅಥವಾ ಹರಿದುಹೋದರೆ ಬಯ್ಗುಳ ತಿನ್ನಬೇಕಾಗುತ್ತೆನ್ನುವ ಕಾರಣಕ್ಕೆ ಮಕ್ಕಳು ಅನೇಕ ಆಟಗಳಲ್ಲಿ ಪಾಲ್ಗೊಳ್ಳಲು ಹಿಂಜರಿಯುವುದು ನಾಚಿಕೆಗೇಡಿನ ಸಂಗತಿಯೆಂದೇ ಅವರ ಅಭಿಪ್ರಾಯ. ತೊಮೊಯೆ ಸಮೀಪವಿದ್ದ ಪ್ರಾಥಮಿಕ ಶಾಲೆಯಲ್ಲಿ ಹುಡುಗಿಯರು ಸೈಲರ್-ಸೂಟ್ ಸಮವಸ್ತ್ರವನ್ನು, ಹುಡುಗರು ಬಿಗಿ ಕಾಲರಿನ ಅಂಗಿ ಮತ್ತು ಚಡ್ಡಿಗಳನ್ನು ತೊಟ್ಟುಕೊಳ್ಳುತ್ತಿದ್ದರು. ತೊಮೊಯೆ ಮಕ್ಕಳು ತೀರಾ ಸಾಧಾರಣ ಬಟ್ಟೆಯಲ್ಲಿ ಬರುತ್ತಿದ್ದರು. ಹೀಗಾಗಿ ಅವರಿಗೆ ತಮಗಿಷ್ಟವಾದ ಆಟಗಳನ್ನು ಆಡಿಕೊಳ್ಳಲು ಯಾವಾಗಲೂ ಉಪಾಧ್ಯಾಯರ ಅನುಮತಿ ಇದ್ದೇ ಇರುತ್ತಿತ್ತು.

ಅಂದಿನ ದಿನಗಳಲ್ಲಿ ನಿಕ್ಕರುಗಳು ಈಗಿನಂತೆ ದಪ್ಪ ಜೀನ್ಸ್ ಬಟ್ಟೆಯುವಾಗಿರುತ್ತಿರಲಿಲ್ಲ. ಹೀಗಾಗಿ ಹುಡುಗರ ನಿಕ್ಕರುಗಳಲ್ಲಿ ಒಂದಲ್ಲ ಒಂದು ತೇಪೆ ಇರುತ್ತಿತ್ತು. ಹುಡುಗಿಯರು ಗಟ್ಟಿ ಬಟ್ಟೆಯ ಲಂಗಗಳನ್ನು ಇಲ್ಲ ವಿಭಿನ್ನ ಉಡುಪುಗಳನ್ನು ತೊಟ್ಟುಕೊಳ್ಳುತ್ತಿದ್ದರು.

ಕಂಡ ಕಂಡ ತೋಟಗಳ ಬೇಲಿಯ ಕೆಳಗೆ ನುಸುಳುವುದರಲ್ಲಿ ಅಪಾರ ಆನಂದ ಪಡೆಯುತ್ತಿದ್ದ ತೊತ್ತೊ-ಚಾನ್‌ಳಿಗೆ ಬಟ್ಟೆಯ ಬಗ್ಗೆ ತಲೆ ಕೆಡಿಸಿಕೊಳ್ಳದಿರುವ ಈ ವ್ಯವಸ್ಥೆ ತುಂಬಾ ಅನುಕೂಲವಾಗಿತ್ತು. ಆ ದಿನಗಳಲ್ಲಿ ತೋಟಗಳಿಗೆ ತಂತಿ ಬೇಲಿಗಳಿರುತ್ತಿದ್ದವು. ಕೆಲವಂತೂ ನೆಲಕ್ಕೆ ಅಂಟಿಕೊಂಡಂತೇ ಇರುತ್ತಿದ್ದುದುಂಟು. ಇವುಗಳ ಕೆಳಗೆ ನುಸುಳಲು ನಾಯಿಗಳಂತೆ ನೆಲಕೆರೆಯುತ್ತಾ ತೆವಳಬೇಕಾಗಿತ್ತು. ಅವಳೆಷ್ಟೇ ನಿಗಾವಹಿಸಿದರೂ ತೊತ್ತೊ-ಚಾನ್‌ಳ ಬಟ್ಟೆ ಹೀಗೆ ನುಸುಳುವಾಗಲೆಲ್ಲ ತಂತಿಗಳಿಗೆ ಸಿಕ್ಕಿ ಹರಿಯುತ್ತಿತ್ತು. ಒಮ್ಮೆ ಅವಳು ಹಾಕಿಕೊಂಡಿದ್ದ ಮೃದುವಾದ ಮಸ್ಲಿನ್ ಉಡುಪು ಮೇಲಿಂದ ಕೆಳಗಿನವರೆಗೆ ಹರಿದು ಬಿಟ್ಟಿತ್ತು. ಅದು ಹಳೆಯ ಉಡುಪಾದರೂ ಅಮ್ಮನಿಗೆ ಅದೆಂದರೆ ಮೆಚ್ಚು. ಹೀಗಾಗಿ ತೊತ್ತೊ-ಚಾನ್ ಏನೋ ಒಂದು ಕತೆ ಕಟ್ಟಲೇಬೇಕಾಗಿತ್ತು. ತಂತಿ ಬೇಲಿಗೆ ಸಿಕ್ಕು ಹರಿಯಿತೆಂದು ಅಮ್ಮನಿಗೆ ಹೇಳಲು ಅವಳಿಗೆ ಬಾಯಿ ಬರಲಿಲ್ಲ. ಪರಿಸ್ಥಿತಿ ತನ್ನ ಕೈಮೀರಿತ್ತೆಂದು ತೋರುವಂತಹ ಏನಾದರೂ ಸುಳ್ಳು ಹೇಳುವುದೇ ಒಳ್ಳೆಯದೆಂದುಕೊಂಡಳು. ಹೀಗೊಂದು ಕತೆ ಕಟ್ಟಿದಳು.

"ರಸ್ತೆಯಲ್ಲಿ ನಾನು ನಡೆಯುತ್ತಾ ಬರುವಾಗ, ಇದ್ದಕ್ಕಿದ್ದಂತೆ ತುಂಬಾ ಹುಡುಗರು ನನಗೆ ಚೂರಿ ಎಸೆದರು; ಅದಕ್ಕೆ ನನ್ನ ಡ್ರೆಸ್ಸು ಹೀಗೆ ಹರಿದುಹೋಯಿತು." ಹೀಗೆ ಹೇಳುತ್ತಿರುವಾಗಲೇ ಅಮ್ಮ ಕೇಳುವ ಮುಂದಿನ ಪ್ರಶ್ನೆಗಳಿಗೆ ಹೇಗೆ ಉತ್ತರಿಸುವುದೆಂದು ಚಿಂತಿಸತೊಡಗಿದಳು.

ಆದರೆ ಅಮ್ಮ "ನಿನಗೆ ತುಂಬಾ ಭಯವಾಗಿರಬೇಕಲ್ಲ" ಎಂದಷ್ಟೇ ಹೇಳಿದ್ದು ಅವಳಿಗೆ ನಿರಾಳವೆನಿಸಿತ್ತು. ಇಂತಹ ಸನ್ನಿವೇಶದಲ್ಲಿ ಬಟ್ಟೆ ಹರಿದುಹೋದದ್ದಕ್ಕೆ ಏನೂ ಮಾಡಲು ಸಾಧ್ಯವಿಲ್ಲವೆಂದು ಅಮ್ಮನಿಗೆ ಅರಿವಾಗಿದೆಯೆಂದುಕೊಂಡಳು.

ಸಹಜವಾಗಿಯೇ, ಅವಳ ಚಾಕು-ಚೂರಿಯ ಕತೆಯನ್ನು ಅಮ್ಮ ನಂಬಲಿಲ್ಲ. ಎಸೆದ ಚಾಕುವಿನಿಂದ ಬಟ್ಟೆ ಹರಿದಂತೆ ಅವಳಿಗೆ ಗಾಯವೂ ಆಗಬೇಕಿತ್ತು. ಅದೂ ಅಲ್ಲದೆ ಇಡೀ ಪ್ರಕರಣದಿಂದ ತೊತ್ತೊ-ಚಾನ್ ಹೆದರಿಕೊಂಡಂತೇನೂ ಕಾಣಲಿಲ್ಲ. ಅಮ್ಮನಿಗೆ ಅವಳು ಕತೆ ಕಟ್ಟಿರುವುದು ತಿಳಿಯಿತು. ತನ್ನ ಅಚ್ಚುಮೆಚ್ಚಿನ ಬಟ್ಟೆ ಹರಿದದ್ದು ಅವಳಿಗೆ ವಿಪರೀತ ಬೇಸರವಾಗಿರಬೇಕೆಂದು ಅಮ್ಮ ಅಂದುಕೊಂಡಳು. ಆದರೆ ಅನೇಕ ದಿನಗಳಿಂದ ಅಮ್ಮ ತಿಳಿದುಕೊಳ್ಳಬೇಕೆಂದುಕೊಂಡದ್ದನ್ನು ಕಂಡುಹಿಡಿಯಲು ಇದು ಒಳ್ಳೆಯ ಅವಕಾಶವಾಗಿತ್ತು.

"ಚೂರಿ-ಚಾಕುಗಳಿಂದ ನಿನ್ನ ಡ್ರೆಸ್ಸುಗಳು ಹರಿದುಹೋಗುವುದೇನೋ ಅರ್ಥವಾಗುತ್ತದೆ" ಅಮ್ಮ ಕೇಳಿದಳು, "ಆದರೆ ದಿನಾಲೂ ಒಳಗಿರುವ ಚಡ್ಡಿಯನ್ನು ಹರಿದುಕೊಂಡು ಬರುತ್ತೀಯಲ್ಲಾ ಅದು ಹೇಗೆ?"

ಪ್ರತಿದಿನವೂ ಅಂಚಿಗೆ ಲೇಸುಳ್ಳ ತೊತ್ತೊ-ಚಾನ್‌ಳ ಮುದ್ದಾದ ಚಡ್ಡಿಗಳು ಹಿಂಬದಿಯಲ್ಲಿ ಹೇಗೆ ಹರಿಯುತ್ತವೆಂದೇ ಅಮ್ಮನಿಗೆ ಅರ್ಥವಾಗುತ್ತಿರಲಿಲ್ಲ.

ಇಳಿಜಾರಿನಲ್ಲಿ ಮಣ್ಣಿನ ಮೇಲೆ ಜಾರುವಾಗ ಚಡ್ಡಿಗೆ ಮಣ್ಣು ಮೆತ್ತಿಕೊಳ್ಳಬಹುದು ಅಥವಾ ಸವೆಯುಬಹುದು. ಆದರೆ ಚಿಂದಿಯಾಗಿ ಹರಿಯುವುದು ಹೇಗೆ ?

ತೊತ್ತೊ-ಚಾನ್ ಕೊಂಚ ಯೋಚಿಸಿ ಹೇಳಿದಳು "ಬೇಲಿಯ ಕೆಳಗೆ ತೆವಳಿಕೊಂಡು ಹೋಗುವಾಗ ಮತ್ತು ಹೊರಗೆ ಬರುವಾಗ ಲಂಗ ಮತ್ತು ಚಡ್ಡಿಗಳು ಹರಿದು ಹೋಗದೇ ಇರಲು ಸಾಧ್ಯವೇ ಇಲ್ಲ. ಅಲ್ಲದೆ 'ಕ್ಷಮಿಸಿ, ನಾನು ಒಳ ಬರಬಹುದಾ ?' ಹಾಗೂ 'ಹೋಗಿಬರುತ್ತೇನೆ' ಎಂದು ಹೇಳಿ ಬರುವಾಗಂತೂ ಹರಿದೇ ಹರಿಯುತ್ತವೆ."

ಅಮ್ಮನಿಗೆ ಅವಳು ಹೇಳಿದುದರ ತಲೆ-ಬುಡ ಅರ್ಥವಾಗಲಿಲ್ಲ. ಆದರೂ ಅದು ತುಂಬಾ ವಿನೋದವಾಗಿ ಕಂಡಿತು.

"ತುಂಬಾ ತಮಾಷೆಯಾಗಿರುತ್ತಾ?" ಅಮ್ಮ ಕೇಳಿದಳು.

"ಮತ್ತೆ, ನೀನೂ ಮಾಡಿನೋಡು, ಎಷ್ಟು ಮಜವಾಗಿರುತ್ತೆ ಗೊತ್ತಾ? ನಿನ್ನ ಚಡ್ಡಿಗಿಡ್ಡಿ ಎಲ್ಲ ಹರಿದು ಹೋಗುತ್ತೆ."

ತೊತ್ತೊ-ಚಾನ್‌ಗೆ ತುಂಬಾ ಹಿಡಿಸಿದ್ದ ಆಟ ಇದು. ಮೊದಲಿಗೆ ತಂತಿ ಬೇಲಿಯಿಂದ ಸುತ್ತುವರೆದಿರುವ ಖಾಲಿ ಜಾಗವನ್ನು ಕಂಡುಹಿಡಿದುಕೊಳ್ಳಬೇಕು. ಮುಳ್ಳುಬೇಲಿಯನ್ನು ಎತ್ತಿಹಿಡಿಯುವುದು, ಒಂದು ತೂತನ್ನು ಮಾಡುವುದು ಮತ್ತು ಕೆಳಗೆ ತೆವಳುವುದು. ಇದೆಲ್ಲ 'ಕ್ಷಮಿಸಿ, ನಾನು ಒಳಬರಬಹುದಾ ?' ಎನ್ನುವುದರಲ್ಲಿ ಸೇರುತ್ತದೆ. ಒಳಗೆ ಹೋದ ನಂತರ ಇನ್ನೊಂದು ಕಡೆ ಮುಳ್ಳುಬೇಲಿಯನ್ನು ಎತ್ತಿ, ಇನ್ನೊಂದು ತೂತನ್ನು ಮಾಡಿ ಹೊರಗೆ ಬರುತ್ತಾ 'ಹೋಗಿ ಬರುತ್ತೇನೆ' ಎಂದು ಹೇಳುವುದು. ಹೀಗೆ ಮಾಡುವಾಗ ಲಂಗ ಮೇಲೆ ಹೋಗಿ ಒಳಗಿರುವ ಚಡ್ಡಿ ಹರಿದುಹೋಗುವುದು ಹೇಗೆಂದು ಅಮ್ಮನಿಗೆ ಸ್ಪಷ್ಟವಾಗತೊಡಗಿತು. ಪದೇ ಪದೇ ಒಳಗೆ ಹೋಗುವ ಮತ್ತು ಹೊರ ಬರುವ ಈ ಆಟದಲ್ಲಿ ಪ್ರತಿಬಾರಿಯೂ ಲಂಗ ಮತ್ತು ಚಡ್ಡಿಗಳು ಹರಿಯುತ್ತಿದ್ದವು. ತೊತ್ತೊ-ಚಾನ್ ಅಂತೂ ಪ್ರತಿಸಾರಿ ನುಸುಳುವಾಗ ಆನಂದವಾಗಿ ಅತ್ತ-ಇತ್ತ ಹೊರಳಾಡುತ್ತಿದ್ದರಿಂದ ಬಟ್ಟೆ ಹರಿಯುವ ಸಾಧ್ಯತೆ ಎರಡು ಪಟ್ಟು ಹೆಚ್ಚಾಗಿತ್ತು. ಅವಳ ಚಡ್ಡಿ ಹರಿಯುವುದರಲ್ಲಿ ಯಾವ ಆಶ್ಚರ್ಯವೂ ಇರಲಿಲ್ಲ.

ದೊಡ್ಡವರಿಗೆ ಏನೇನೂ ವಿನೋದವಾಗಿ ಕಂಡುಬರದ, ಯೋಚಿಸಿದರೇ ಸುಸ್ತಾಗುವಂತಿದ್ದ ಈ ಆಟ ಮಕ್ಕಳಿಗೆ ಕೊಡುತ್ತಿದ್ದ ಖುಷಿ ಅಪಾರ. ತೊತ್ತೊ-ಚಾನ್‌ಳ ಕೂದಲು, ಉಗುರುಸಂದುಗಳು ಮತ್ತು ಕಿವಿಗಳಲ್ಲಿ ಮಣ್ಣು ಅಂಟಿಕೊಂಡಿರುವುದನ್ನು ಕಂಡು ಅಮ್ಮನಿಗೆ ಕೊಂಚ ಅಸೂಯೆಯೇ ಅನಿಸುತ್ತಿತ್ತು. ಮುಖ್ಯೋಪಾಧ್ಯಾಯರನ್ನು ಅಭಿನಂದಿಸದಿರಲು ಸಾಧ್ಯವಾಗುತ್ತಿರಲಿಲ್ಲ. ಹಾಳಾದರೂ ಅಡ್ಡಿಯಿಲ್ಲವೆನ್ನುವಂತಹ ಹಳೇ ಬಟ್ಟೆಗಳನ್ನು ತೊಟ್ಟು ಬರಬೇಕೆನ್ನುವ ಅವರ ಸಲಹೆ ಅವರು ಮಕ್ಕಳನ್ನು ಎಷ್ಟೊಂದು ಚೆನ್ನಾಗಿ ಬಲ್ಲರು ಎಂಬುದರ

ಮತ್ತೊಂದು ಉದಾಹರಣೆಯಾಗಿತ್ತು.

**ತಾಕಾಹಾಶಿ**

ಒಂದು ಬೆಳಗು ಅವರೆಲ್ಲ ಶಾಲೆಯ ಮೈದಾನದಲ್ಲಿ ಆಟವಾಡಿಕೊಂಡಿದ್ದಾಗ, ಮುಖ್ಯೋಪಾಧ್ಯಾಯರು ಕೂಗಿ ಹೇಳಿದರು, "ಇಲ್ಲೊಬ್ಬ ಹೊಸ ಸ್ನೇಹಿತನಿದ್ದಾನೆ ನಿಮಗೆ. ಅವನ ಎರಡನೇ ಹೆಸರು ತಾಕಾಹಾಶಿ. ಅವನು ಒಂದನೇ ತರಗತಿಯ ರೈಲುಬಂಡಿ ಸೇರಿಕೊಳ್ಳುತ್ತಾನೆ."

ತೊತ್ತೊ-ಚಾನ್‌ಳ ಜತೆ ಎಲ್ಲ ಮಕ್ಕಳೂ ಅವನತ್ತ ನೋಡಿದರು. ಅವನು ತನ್ನ ಹ್ಯಾಟನ್ನು ತೆಗೆದು ಬಗ್ಗಿ ಕೊಂಚ ನಾಚಿಕೆಯಿಂದ "ಹೇಗಿದ್ದೀರಿ ?" ಎಂದು ಕೇಳಿದ.

ಇನ್ನೂ ಒಂದನೇ ತರಗತಿಯಲ್ಲಿದ್ದ ತೊತ್ತೊ-ಚಾನ್ ಮತ್ತು ಅವಳ ಸ್ನೇಹಿತರು ತುಂಬಾ ಸಣ್ಣವರಿದ್ದರು. ಆದರೆ ತಾಕಾಹಾಶಿ ಹುಡುಗನಾಗಿದ್ದಾಗ್ಯೂ ತುಂಬಾ ಸಣ್ಣವನಂತಿದ್ದ. ಅವನ ಕೈಕಾಲುಗಳು ಪುಟ್ಟ ಪುಟ್ಟಗಿದ್ದವು. ಆದರೆ ಭುಜ ಮಾತ್ರ ವಿಶಾಲವಾಗಿತ್ತು. ಅವನು ಒಂದು ಕಡೆಗೆ ಮುದುಡಿ ನಿಂತಿದ್ದ.

"ಅವನ ಹತ್ತಿರ ಮಾತಾಡೋಣ" ತೊತ್ತೊ-ಚಾನ್ ಮಿಯೊ-ಚಾನ್ ಮತ್ತು ಸಾಕ್ಯೋ-ಚಾನ್‌ರನ್ನು ಕರೆದಳು. ಅವರು ತಾಕಾಹಾಶಿಯ ಬಳಿ ಹೋದರು. ತನ್ನ ಬಳಿ ಬಂದ ಅವರನ್ನು ನೋಡಿ ಅವನು ಮೃದುವಾಗಿ ನಕ್ಕ. ಅವರೂ ಮುಗುಳ್ನಕ್ಕರು. ಅವನ ದೊಡ್ಡ ಗುಂಡಗಿನ ಕಣ್ಣುಗಳು ಏನೋ ಹೇಳಲು ತವಕಿಸುತ್ತಿರುವಂತಿದ್ದವು.

"ರೈಲುಬಂಡಿ ತರಗತಿಯನ್ನು ನೋಡುತ್ತೀಯಾ ?" ತೊತ್ತೊ-ಚಾನ್ ಆಹ್ವಾನಿಸಿದಳು. "ಓಹೋ" ಹ್ಯಾಟನ್ನು ಹಾಕಿಕೊಳ್ಳುತ್ತಾ ತಾಕಾಹಾಶಿ ಉತ್ಸುಕನಾದ.

ಅವನಿಗೆ ಬಲುಬೇಗ ತನ್ನ ತರಗತಿಯನ್ನು ತೋರಿಸಿಬಿಡಬೇಕೆನ್ನುವ ಆತುರದಲ್ಲಿ ತೊತ್ತೊ-ಚಾನ್ ರಭಸದಿಂದ ಓಡಿ ರೈಲುಬಂಡಿ ಸೇರಿದಳು. ಬಾಗಿಲಲ್ಲಿ ನಿಂತು "ಬೇಗ ಬಾ" ಎಂದು ಅವಸರಿಸತೊಡಗಿದಳು.

ತಾಕಾಹಾಶಿ ವೇಗವಾಗಿಯೇ ನಡೆಯುತ್ತಿದ್ದರೂ ಇನ್ನೂ ಹಿಂದೆಯೇ ಇದ್ದ. "ಬಂದೇ" ಎನ್ನುತ್ತಾ ಪುಟು ಪುಟು ಓಡಲು ಪ್ರಯತ್ನಿಸಿದ.

ತಾಕಾಹಾಶಿಯು ಯಾಸುಕಿ-ಚಾನ್‌ನಂತೆ ಪೋಲಿಯೋ ಪೀಡಿತನಲ್ಲದಿದ್ದರೂ, ಕಾಲನ್ನು ಎಳೆದೆಳೆದು ಹಾಕದಿದ್ದರೂ ರೈಲುಗಾಡಿ ಸೇರಲು ಅವನಷ್ಟೇ ಸಮಯ ಇವನಿಗೂ ಬೇಕಾಗಿತ್ತು. ಅವಳು ಸುಮ್ಮನೆ ಅವನಿಗಾಗಿ ಕಾಯುತ್ತಾ ನಿಂತಳು. ತಾಕಾಹಾಶಿಯು ತನ್ನಿಂದಾಗುವಷ್ಟು ವೇಗವಾಗಿಯೇ ಓಡುತ್ತಿದ್ದರಿಂದ "ಬೇಗ ಬಾ" ಎಂದು ಮತ್ತೂ ಅವಸರಿಸುವ ಅವಶ್ಯಕತೆ ಇರಲಿಲ್ಲ. ಅವನ ಕಾಲುಗಳು ವಿಪರೀತ ಮೋಟಾಗಿದ್ದು ಬಿಲ್ಲಿನಂತೆ ಬಾಗಿಕೊಂಡಿದ್ದವು. ಅವನ ಬೆಳವಣಿಗೆ ನಿಂತುಹೋಗಿದೆಯೆಂಬುದು ದೊಡ್ಡವರಿಗೆ, ಉಪಾಧ್ಯಾಯರಿಗೆಲ್ಲಾ ಗೊತ್ತಿತ್ತು. ತೊತ್ತೊ-ಚಾನ್ ತನ್ನನ್ನೇ ನೋಡುತ್ತಿರುವುದನ್ನು ಕಂಡ ಅವನು ಕೈಬೀಸುತ್ತಾ ಮತ್ತೂ ವೇಗವಾಗಿ ಓಡಲು ಪ್ರಯತ್ನಿಸಿದ. ಬಾಗಿಲು ತಲುಪಿದಾಗ ತೊತ್ತೊ-ಚಾನ್ ಕುರಿತು

"ನೀನು ತುಂಬಾ ಬೇಗ ಓಡಿಬಿಟ್ಟೆ" ಎಂದ. "ನನ್ನೂರು ಓಸಾಕ" ಎಂದೂ ಸೇರಿಸಿದ.

"ಓಸಾಕ ?" ತೊತ್ತೊ-ಚಾನ್ ರೋಮಾಂಚಿತಳಾದಳು. ಓಸಾಕ ಅವಳೆಂದೂ ನೋಡಿರದ ಅವಳ ಕನಸಿನ ಊರಾಗಿತ್ತು. ಅವಳ ತಾಯಿಯ ತಮ್ಮ ಯೂನಿವರ್ಸಿಟಿಯಲ್ಲಿ ಓದುತ್ತಿದ್ದನು. ಇವಳ ಮನೆಗೆ ಬಂದಾಗಲೆಲ್ಲಾ ಇವಳ ತಲೆಯನ್ನು ತನ್ನೆರಡೂ ಕೈಗಳಿಂದ ಹಿಡಿದು ಸಾಧ್ಯವಾಗುವವರೆಗೂ ಮೇಲೆತ್ತಿ "ನಿನಗೆ ಓಸಾಕ ತೋರಿಸುತ್ತೇನೆ, ಅಗೋ ಕಂಡಿತಾ ಓಸಾಕ ?" ಎಂದು ಕೇಳುವನು.

ದೊಡ್ಡವರು ಮಕ್ಕಳೊಂದಿಗೆ ತಮಾಷೆಗೆಂದು ಆಡುವ ಆಟ ಅದಾಗಿದ್ದರೂ ತೊತ್ತೊ-ಚಾನ್ ಮಾತ್ರ ಅವನನ್ನು ಸಂಪೂರ್ಣ ನಿಜವೆಂದು ನಂಬಿಬಿಟ್ಟಿದ್ದಳು. ಅವಳ ಮುಖದ ಚರ್ಮ ಎಳೆದಂತಾಗಿ ಕಣ್ಣುಗಳು ಮತ್ತು ಕಿವಿ ವಿಪರೀತ ನೋಯುತ್ತಿದ್ದರೂ ತನ್ನಿಂದ ಎಷ್ಟು ಸಾಧ್ಯವೋ ಅಷ್ಟು ದೂರದವರೆಗೂ ಓಸಾಕ ಕಾಣುವುದೆಂದು ನೋಡುವಳು. ಆದರೆ ಅವಳಿಗದು ಕಾಣುತ್ತಲೇ ಇರಲಿಲ್ಲ. ಯಾವತ್ತಾದರೊಂದು ದಿನ ಅದನ್ನು ನೋಡೇ ತೀರುತ್ತೇನೆಂದು ನಂಬಿಕೊಂಡಿದ್ದಳು. ತನ್ನ ತಾಯಿಯ ತಮ್ಮ ಬಂದಾಗಲೆಲ್ಲ "ನನಗೆ ಓಸಾಕ ತೋರಿಸು" ಎಂದು ಕೇಳುತ್ತಿದ್ದಳು. ಹೀಗಾಗಿ 'ಓಸಾಕ' ಅವಳ ಕನಸಿನ ಊರಾಗಿತ್ತು. ಈಗ ತಾಕಾಹಾಶಿ ಅದನ್ನೇ ತನ್ನ ಊರೆನ್ನುತ್ತಿದ್ದಾನೆ.

"ಓಸಾಕ ಹೇಗಿದೆ ಹೇಳು" ತಾಕಹಾಶಿಯನ್ನು ಕೇಳಿದಳು.

"ಓಸಾಕಾನಾ ?" ಅವನು ಖುಷಿಯಿಂದ ನಗುತ್ತಾ ಕೇಳಿದ. ಅವನ ದನಿ ಸ್ಪಷ್ಟವಾಗಿ ಪ್ರೌಢವಾಗಿತ್ತು. ಅಷ್ಟರಲ್ಲೇ ಮೊದಲ ತರಗತಿಗೆ ಗಂಟೆ ಬಾರಿಸಿತ್ತು.

"ಏನನ್ಯಾಯ" ತೊತ್ತೊ-ಚಾನ್‌ಳೆಂದಳು. ತಾಕಾಹಾಶಿಯು ತನ್ನ ಪಾಟಿಚೀಲದಲ್ಲಿ ಮುಳುಗಿ ಹೋದಂತಿದ್ದ ಪುಟ್ಟ ದೇಹವನ್ನು ಕುಲುಕಾಡಿಸುತ್ತಾ ಮೊದಲನೇ ಸಾಲಿನಲ್ಲಿ ಹೋಗಿ ಕುಳಿತ. ತೊತ್ತೊ-ಚಾನ್ ಬೇಗ ಬೇಗ ಹೋಗಿ ಅವನ ಪಕ್ಕ ಕುಳಿತಳು. ಎಲ್ಲಿ ಬೇಕೆಂದರಲ್ಲಿ ಕುಳಿತುಕೊಳ್ಳಬಹುದಾದ ವ್ಯವಸ್ಥೆ ಅವಳಿಗೆ ಅನುಕೂಲವೇ ಆಗಿತ್ತು. ಅವನನ್ನು ಬಿಟ್ಟುಬಿಡಲು ಅವಳು ತಯಾರಿರಲಿಲ್ಲ. ಹೀಗಾಗಿ ತಾಕಾಹಾಶಿ ಅವಳ ಸ್ನೇಹಿತರಲ್ಲಿ ಒಬ್ಬನಾಗಿಬಿಟ್ಟ.

## "ನೋಡಿ ಹಾರಬೇಕು !"

ಶಾಲೆಯಿಂದ ಮನೆಗೆ ಬರುವಾಗ ಮನೆ ತಲುಪುವ ಕೊಂಚ ಮುನ್ನ ರಸ್ತೆಯ ಪಕ್ಕದಲ್ಲಿ ಅದೇನೋ ತೊತ್ತೊ-ಚಾನ್‌ಳನ್ನು ಸೆಳೆಯಿತು. ಅದು ಮರಳಿನ ರಾಶಿ. ಸಮುದ್ರದಿಂದ ಅಷ್ಟೊಂದು ದೂರದಲ್ಲಿ ಮರಳು ಇರುವುದೆಂದರೆ ಏನಾಶ್ಚರ್ಯ ? ಇದೇನು ಕನಸೇ ? ತೊತ್ತೊ-ಚಾನ್ ರೋಮಾಂಚಿತಗೊಂಡಳು. ಸ್ವಲ್ಪ ಹೊತ್ತು ಅದರ ಮೇಲೆ ಹಾರಿ ಹಾರಿ ನೋಡಿದ ಮೇಲೆ ಕೊನೆಗೊಮ್ಮೆ ದೂರದಿಂದ ರಭಸವಾಗಿ ಓಡಿ ಅದರ ಮೇಲೆ ಹಾರಿದಳು. ಆದರೆ ಅದು ಮರಳಾಗಿರಲಿಲ್ಲ. ಗೋಡೆಯ ಬಳಿಯಲ್ಲಿ ಹದ ಮಾಡಿ ಇಟ್ಟಿದ್ದ ಜೇಡಿಯಾಗಿತ್ತು. ಪಾಟಿಚೀಲ, ಷೂಗಳ ಸಮೇತ

ತೊತ್ತೊ-ಚಾನ್ ಎದೆಯವರೆಗೆ ಅದರಲ್ಲಿ ಹುದುಗಿಹೋದಳು. ಅವಳು ಹೊರಗೆ ಬರಲು ಸೆಣಸಾಡಿದಂತೆಲ್ಲಾ ಅವಳ ಕಾಲು ಜಾರುತ್ತಾ ಮತ್ತಷ್ಟು ಹುದುಗಿಹೋಗತೊಡಗಿದಳು. ಅವಳ ಷೂಗಳು ಕಳಚಿಕೊಂಡವು. ಅದರಲ್ಲಿ ಸಂಪೂರ್ಣ ಸಮಾಧಿಯಾಗದಿರುವಂತೆ ಅವಳು ಎಚ್ಚರವಹಿಸಬೇಕಾಯಿತು. ಆದ್ದರಿಂದ ಸುಮ್ಮನೆ ಮಿಸುಕಾಡದೆ ಎಡಗೈಯಲ್ಲಿ ಷೂ ಹಿಡಿದು ನಿಂತುಕೊಳ್ಳುವುದೊಂದೇ ದಾರಿಯಾಯಿತು. ಅವಳಿಗೆ ಪರಿಚಿತರಲ್ಲದ ಒಂದಿಬ್ಬರು ಮಹಿಳೆಯರು ಹಾದುಹೋಗುವಾಗ, ಇವಳು ಮೆಲುದನಿಯಲ್ಲಿ "ಕ್ಷಮಿಸಿ" ಎನ್ನುತ್ತಾ ಸಹಾಯ ಕೇಳಲು ಪ್ರಯತ್ನಿಸಿದರೂ ಅವರು ಈಕೆ ಆಡುತ್ತಿರಬೇಕೆಂದೇ ತಿಳಿದು ಸುಮ್ಮನೆ ನಸುನಕ್ಕು ಹೋಗಿಬಿಟ್ಟರು.

ಸಂಜೆ ಸರಿದು ಕತ್ತಲಾಗುತ್ತಿದ್ದಂತೆಯೇ, ಇವಳನ್ನು ಹುಡುಕುತ್ತಾ ಬಂದ ಅಮ್ಮ ಜೇಡಿಯಲ್ಲಿ ತಲೆಯವರೆಗೂ ಹೂತು ನಿಂತ ಇವಳನ್ನು ಕಂಡು ಕಕ್ಕಾಬಿಕ್ಕಿಯಾದಳು. ತೊತ್ತೊ-ಚಾನ್‌ಳನ್ನು ಕೈಹಿಡಿದು ಹೊರಗೆಳೆಯಲು ಪ್ರಯತ್ನಿಸಿದಳು. ಪ್ರಯತ್ನಿಸಿದಂತೆಲ್ಲಾ ಅವಳ ಕಾಲುಗಳೂ ಜೇಡಿಯಲ್ಲಿ ಹೂತುಹೋಗುವಂತಾಯಿತು. ಕೊನೆಗೆ ಒಂದು ಗಟ್ಟಿಯಾದ ಕೋಲನ್ನು ತಂದು ಅದರ ಒಂದು ತುದಿಯನ್ನು ತೊತ್ತೊ-ಚಾನ್‌ಳಿಗೆ ಹಿಡಿಯಲು ಹೇಳಿ ಅವಳನ್ನು ರಭಸವಾಗಿ ಹೊರಗೆಳೆದುಕೊಂಡಳು. ತೊತ್ತೊ-ಚಾನ್ ಜೇಡಿ ಮೆತ್ತಿದ ಗೋಡೆಯಂತಾಗಿದ್ದಳು.

"ನಾ ನಿನಗೆ ಹಿಂದೆಯೇ ಹೇಳಿರಲಿಲ್ಲವಾ" ಅಮ್ಮ ಹೇಳಿದಳು "ಏನಾದರೂ ಕುತೂಹಲವಾದದ್ದು ಕಂಡರೆ ತಕ್ಷಣ ಅದರ ಮೇಲೆ ಹಾರಬೇಡ, ಹಾರುವ ಮುಂಚೆ ನೋಡಬೇಕು."

ಅಮ್ಮ ಹಿಂದೊಂದು ದಿನ ಇದೇ ಮಾತು ಹೇಳಿದ್ದು ನೆನಪಿಗೆ ಬಂತು. ಒಂದು ದಿನ ಶಾಲೆಯ ಊಟದ ಸಮಯದಲ್ಲಿ ತೊತ್ತೊ-ಚಾನ್ ಸಭಾಂಗಣದ ಹಿಂಬದಿಯ ಸಣ್ಣ ದಾರಿಯಲ್ಲಿ ಓಡಾಡಿಕೊಂಡಿದ್ದಾಗ ಹಾದಿಯ ಮಧ್ಯೆಯೇ ಒಂದು ದಿನಪತ್ರಿಕೆ ಹರಡಿದಂತೆ ಬಿದ್ದಿರುವುದು ಕಾಣಿಸಿತು. ಪೇಪರಿನ ಮೇಲೆ ಹಾರುವುದು ಮಜವಾಗಿರುತ್ತದೆಂದು ಸ್ವಲ್ಪ ಹಿಂದೆ ಹೋಗಿ ರಭಸವಾಗಿ ಓಡಿ ಬಂದು ಪೇಪರಿನ ಮಧ್ಯೆಯೇ ಗುರಿಯಿಟ್ಟು ಹಾರಿದಳು. ಆದರೆ ಮಾಲಿಯು ಕಕ್ಕಸ್ಸು ಗುಂಡಿಯನ್ನು ತಾತ್ಕಾಲಿಕವಾಗಿ ಮುಚ್ಚಲು ಪೇಪರನ್ನು ಹಾಗೆ ಹರಡಿದ್ದನು. ಅವನಿಗೆ ಬೇರೆ ಏನೋ ಕೆಲಸವಿದ್ದದ್ದರಿಂದ ವಾಸನೆ ಹೊಡೆಯದಿರಲೆಂದು ಅದನ್ನು ಹಾಗೆ ಮುಚ್ಚಿದ್ದನು. ತೊತ್ತೊ-ಚಾನ್ ಆ ಗುಂಡಿಯೊಳಕ್ಕೆ ನೇರವಾಗಿ ಬಿದ್ದಿದ್ದಳು. ಅದೊಂದು ಭಯಂಕರ ಅನುಭವ. ಆದರೆ ಅದೃಷ್ಟವಶಾತ್ ತೊತ್ತೊ-ಚಾನ್‌ಳನ್ನು ಅವರೆಲ್ಲರೂ ಶುಭ್ರವಾಗಿ ತೊಳೆದಿದ್ದರು. ತಾಯಿ ಹೇಳುತ್ತಿದ್ದದು ಇದೇ ಘಟನೆಯ ಬಗ್ಗೆ.

"ಇಲ್ಲ, ಮತ್ತೆ ನಾನು ಯಾವುದರ ಮೇಲೂ ಹಾರುವುದೇ ಇಲ್ಲ" ತೊತ್ತೊ-ಚಾನ್ ಮೆಲ್ಲಗೆ ಹೇಳಿದಳು. ಅಮ್ಮ ನಿರಾಳಗೊಂಡಳು. ಆದರೆ ಅನಂತರದ ತೊತ್ತೊ-ಚಾನ್‌ಳ ಮಾತಿನಿಂದ ಅಮ್ಮನ ಆತಂಕ ಮರುಕಳಿಸಿತು.

"ನಾನು ಪೇಪರು ಇಲ್ಲವೇ ಮರಳಿನ ಗುಪ್ಪೆಯ ಮೇಲೆ ಇನ್ನೆಂದಿಗೂ ಹಾರುವುದೇ ಇಲ್ಲ."

ಹಾಗಾದರೆ ಬೇರೆ ಯಾವುದಾದರ ಮೇಲಾದರೂ ಇವಳು ಹಾರಿಯೇ ತೀರುತ್ತಾಳೆನ್ನುವುದರಲ್ಲಿ ಅಮ್ಮನಿಗೆ ಅನುಮಾನ ಉಳಿಯಲಿಲ್ಲ.

ಅಷ್ಟು ಹೊತ್ತಿಗೆ ಸಂಜೆ ಸಂಪೂರ್ಣ ಸರಿದು ಅವರು ಮನೆ ಸೇರುವ ವೇಳೆಗೆ ದಟ್ಟ ಕತ್ತಲು ಆವರಿಸಿತ್ತು.

## "ಆಮೇಲೆ...ಆಮೇಲೆ...ಊಂ...ಊಂ...."

ತೊಮೊಯೆದಲ್ಲಿ ಊಟದ ಸಮಯವೆಂದರೆ ಯಾವಾಗಲೂ ಖುಷಿಯೇ. ಆದರೆ ನಂತರದಲ್ಲಿ ಮತ್ತೂ ಆಸಕ್ತಿಯುತವಾದದ್ದು ಸೇರಿಕೊಂಡಿತು.

ಮುಖ್ಯೋಪಾಧ್ಯಾಯರು ಎಲ್ಲ ಐವತ್ತು ಮಕ್ಕಳ ಊಟದ ಡಬ್ಬಿಯನ್ನು ಪರಿಶೀಲಿಸಿ 'ನೆಲದ್ದು ಸ್ವಲ್ಪ, ಜಲದ್ದು ಸ್ವಲ್ಪ' ಇರುವುದನ್ನು ಖಚಿತಪಡಿಸಿಕೊಳ್ಳುವುದು, ಕೊರತೆ ಇದ್ದವರ ಡಬ್ಬಿಗೆ ಅವರ ಹೆಂಡತಿ ಸೌಟಿನಿಂದ ತುಂಬುವುದು, ಅನಂತರ ಅವರೆಲ್ಲಾ "ಅಗಿಯಿರಿ, ಅಗಿಯಿರಿ, ಚೆನ್ನಾಗಿ ಅಗಿಯಿರಿ" ಹಾಡಿ, ತಾದಾಕಿಮಾಸು ಹೇಳಿದ ನಂತರ ಯಾರಾದರೊಬ್ಬರು ಒಂದು ಸಣ್ಣ ಭಾಷಣ ಮಾಡಬೇಕಿತ್ತು.

ಒಂದು ದಿನ ಮುಖ್ಯೋಪಾಧ್ಯಾಯರು ಹೇಳಿದರು, "ಬಹುಷಃ ನಾವೆಲ್ಲ ಚೆನ್ನಾಗಿ ಮಾತನಾಡುವುದನ್ನು ಕಲಿಯಬೇಕೆಂದು ನನಗನ್ನಿಸುತ್ತದೆ. ನಿಮಗೇನನ್ನಿಸುತ್ತೆ? ಇವತ್ತಿನ ನಂತರ, ನಾವೆಲ್ಲ ಊಟ ಮಾಡುವಾಗ ಒಂದೊಂದು ದಿನ ಒಬ್ಬೊಬ್ಬರು ವರ್ತುಲದ ನಡುವೆ ನಿಂತು ನಮಗೆ ಏನಾದರೊಂದು ವಿಷಯದ ಬಗ್ಗೆ ಹೇಳಬೇಕು ಆಗಬಹುದಾ ?"

ಕೆಲವು ಮಕ್ಕಳು ತಮಗೆ ಚೆನ್ನಾಗಿ ಮಾತನಾಡಲು ಬಾರದು ಎಂದು ಯೋಚಿಸಿದರು. ಆದರೆ ಇತರರು ಮಾತನಾಡುವುದನ್ನು ಕೇಳುವುದು ಮಾತ್ರ ಮಜ. ಮತ್ತೆ ಕೆಲವರು ತಮಗೆ ಗೊತ್ತಿರುವ ವಿಷಯವನ್ನು ಇತರರಿಗೆ ಹೇಳುವುದು ಅದ್ಭುತ ಆಲೋಚನೆ ಎಂದುಕೊಂಡರು. ತೊತ್ತೊ-ಚಾನ್‌ಳಿಗೆ ತಾನೇನು ಮಾತನಾಡಬೇಕೆಂದು ತಿಳಿಯದಿದ್ದರೂ ಪ್ರಯತ್ನಿಸಿ ನೋಡುವೆನೆಂದುಕೊಂಡಳು. ಬಹುಪಾಲು ಮಕ್ಕಳಿಗೆ ಈ ಆಲೋಚನೆ ಹಿಡಿಸಿದ್ದರಿಂದ ಮರುದಿನದಿಂದಲೇ ಇದನ್ನು ಪ್ರಾರಂಭಿಸಲು ತೀರ್ಮಾನಿಸಲಾಯಿತು.

ಜಪಾನೀ ಮಕ್ಕಳಿಗೆ ಸಾಮಾನ್ಯವಾಗಿ ಊಟದ ಸಮಯದಲ್ಲಿ ಮಾತನಾಡಕೂಡದೆಂದು ಕಲಿಸಲಾಗಿರುತ್ತದೆ. ಆದರೆ ತಮ್ಮ ವಿದೇಶಗಳಲ್ಲಿನ ಅನುಭವದಿಂದಾಗಿ, ಮುಖ್ಯೋಪಾಧ್ಯಾಯರು ಊಟ ಮಾಡಲು ಬೇಕಾದಷ್ಟು ಸಮಯ ತೆಗೆದುಕೊಂಡು ಇಷ್ಟಬಂದಷ್ಟು ಮಾತನಾಡಿರೆಂದು ಉತ್ತೇಜಿಸುತ್ತಿದ್ದರು.

ಇದರ ಜೊತೆಗೇ, ಜನರ ಮಧ್ಯ ಎದ್ದುನಿಂತು ಮುಜುಗರವಿಲ್ಲದೇ ಮುಕ್ತವಾಗಿ,

ಸ್ಪಷ್ಟವಾಗಿ ತಮಗೆ ತಿಳಿದದ್ದನ್ನು ತಮ್ಮ ವಿಚಾರಗಳನ್ನು ಮಾತನಾಡಲು ಕಲಿಯುವುದು ತುಂಬಾ ಅವಶ್ಯಕ ಎಂದವರು ಭಾವಿಸಿದ್ದರು. ತನ್ನ ಆಲೋಚನೆಯನ್ನು ಕಾರ್ಯರೂಪಕ್ಕೆ ತರಲು ಇದು ಸೂಕ್ತ ಸಮಯವೆಂದುಕೊಂಡರು.

ಮಕ್ಕಳೆಲ್ಲ ಈ ಆಲೋಚನೆಗೆ ಒಪ್ಪಿಕೊಂಡ ಮೇಲೆ, ಅವರು ಕೆಲವು ಮಾತುಗಳನ್ನು ಹೇಳಿದರು. ತೊತ್ತೊ-ಚಾನ್ ಎಚ್ಚರಿಕೆಯಿಂದ ಕೇಳಿಸಿಕೊಂಡಳು.

"ನೀವು ಒಳ್ಳೆಯ ಮಾತುಗಾರರಾಗಲು ಪರಿಶ್ರಮಿಸುತ್ತಾ ಹೆಣಗಬೇಕಾದ್ದಿಲ್ಲ" ಅವರೆಂದರು. "ನಿಮಗೆ ಇಷ್ಟವಾದ ವಿಷಯದ ಬಗ್ಗೆ ನೀವು ಮಾತನಾಡಬಹುದು. ನೀವು ಮಾಡಲು ಇಷ್ಟಪಡುವ ವಿಷಯಗಳ ಬಗ್ಗೆಯೂ ನೀವು ಮಾತನಾಡಬಹುದು. ಏನಾದರೂ ಸರಿ. ಹೇಗಾದರೂ ಸರಿ. ಪ್ರಯತ್ನಿಸೋಣ."

ಮಾತನಾಡುವವರ ಸರದಿಯನ್ನು ಗೊತ್ತುಪಡಿಸಲಾಯಿತು. ಮತ್ತು ಆ ದಿನ ಮಾತನಾಡುವವರು ಬೇಗ ಊಟ ಮಾಡಬೇಕಿತ್ತು, ಹಾಡು ಮುಗಿದ ತಕ್ಷಣ



ಲಗುಬಗೆಯಿಂದ ಮುಗಿಸಿಬಿಡಬೇಕಿತ್ತು.

ಊಟದ ಸಮಯದಲ್ಲಿ ಇಬ್ಬರು ಮೂವರ ನಡುವೆ ಮಾತನಾಡಿಕೊಳ್ಳುವುದಕ್ಕಿಂತ ಇಡೀ ಶಾಲೆಯ ನಡುವೆ ನಿಂತು ಮಾತನಾಡುವುದಕ್ಕೆ ಸಾಕಷ್ಟು ಧೈರ್ಯಬೇಕು ಮತ್ತು ಅದು ಸಾಕಷ್ಟು ಕಷ್ಟಕರವಾದದ್ದು ಎಂಬುದನ್ನು ಮಕ್ಕಳೆಲ್ಲಾ ಬಲು ಬೇಗ ಅರಿತುಕೊಂಡರು. ಕೆಲವು ಮಕ್ಕಳು ಮೊದಮೊದಲು ನಾಚಿಕೆಯಿಂದ ಸುಮ್ಮನೆ ಕಿಸಿಕಿಸಿ ನಕ್ಕುಬಿಡುತ್ತಿದ್ದರು. ತುಂಬಾ ಕಷ್ಟಪಟ್ಟು ಚೆನ್ನಾಗಿ ತಯಾರಿ ಮಾಡಿಕೊಂಡು ಬಂದಿದ್ದ ಹುಡುಗನೊಬ್ಬ ಮಾತನಾಡಲು ಎದ್ದುನಿಲ್ಲುತ್ತಲೇ ಎಲ್ಲವನ್ನೂ ಮರೆತುಬಿಟ್ಟ. ಪದೇ ಪದೇ ತನ್ನ ಭಾಷಣದ ಶೀರ್ಷಿಕೆಯನ್ನೇ ಉಚ್ಚರಿಸಿದ, "ಕಪ್ಪೆಗಳು ಏಕೆ ಅಡ್ಡಡ್ಡ ಹಾರುತ್ತವೆ", ಆನಂತರ ಹೇಳಲು ಪ್ರಯತ್ನಿಸಿದ, "ಮಳೆ ಬರುವಾಗ...." ಆದರೆ ಮುಂದೆ ಹೋಗಲಾಗಲಿಲ್ಲ. ಕೊನೆಗವನು "ಇಷ್ಟೇ" ಎಂದು ಹೇಳಿ ಬಾಗಿ ನಮಸ್ಕರಿಸಿ ತನ್ನ ಜಾಗಕ್ಕೆ ಹೋಗಿ ಕುಳಿತ.

ತೊತ್ತೊ-ಚಾನ್‌ಳ ಸರದಿ ಇನ್ನೂ ಬಂದಿರಲಿಲ್ಲ, ಆದರೆ ತನ್ನ ಸರದಿ ಬಂದಾಗ



ತನ್ನ ಅಚ್ಚುಮೆಚ್ಚಿನ "ರಾಜಕುಮಾರ ಮತ್ತು ರಾಜಕುಮಾರಿ"ಯರ ಕತೆಯನ್ನೇ ಹೇಳುವುದಾಗಿ ತೀರ್ಮಾನಿಸಿಕೊಂಡಳು. ಎಲ್ಲರಿಗೂ ಆ ಕತೆ ಗೊತ್ತಿತ್ತು. ಬಿಡುವಿದ್ದಾಗಲೆಲ್ಲ ಅವಳು ಆ ಕತೆ ಹೇಳಲು ಬಾಯಿ ತೆರೆದರೆ ಸಾಕು ಮಕ್ಕಳೆಲ್ಲ "ಅದನ್ನು ಕೇಳಿ ಕೇಳಿ ಸಾಕಾಗಿದೆ" ಎನ್ನುತ್ತಿದ್ದರು.

ಆದರೂ ಆದದ್ದಾಗಲಿ. ತಾನು ಆ ಕತೆಯನ್ನು ಹೇಳಿಯೇ ತೀರುತ್ತೇನೆಂದು ಅವಳು ತೀರ್ಮಾನಿಸಿಕೊಂಡಿದ್ದಳು.

ಹೊಸ ಯೋಜನೆ ಚೆನ್ನಾಗಿಯೇ ಕೆಲಸ ಮಾಡತೊಡಗಿತು. ಆದರೆ ಒಂದು ದಿನ ಸರದಿಯ ಪ್ರಕಾರ ಮಾತನಾಡಬೇಕಿದ್ದ ಒಬ್ಬ ಹುಡುಗ ಸ್ಪಷ್ಟವಾಗಿ ನಿರಾಕರಿಸಿದ.

"ನನಗೆ ಹೇಳಲು ಏನೂ ಇಲ್ಲ" ಹುಡುಗ ಘೋಷಿಸಿಬಿಟ್ಟ. ಹೇಳಲು ಏನೂ ಇರದೇ ಇರಲಿಕ್ಕೂ ಸಾಧ್ಯವಾ ? ಎಂದು ತೊತ್ತೊ-ಚಾನ್‌ಳಿಗೆ ಆಶ್ಚರ್ಯವಾಯಿತು. ಆದರೆ ಆ ಹುಡುಗನಿಗೆ ಮಾತ್ರ ಏನೂ ಇರಲಿಲ್ಲ. ಊಟ ಮುಗಿಸಿ ಖಾಲಿ ಡಬ್ಬಿಯ ಜತೆ ಕುಳಿತಿದ್ದ ಹುಡುಗನ ಬಳಿಗೆ ಮುಖ್ಯೋಪಾಧ್ಯಾಯರು ನಡೆದರು.

"ಹಾಗಾದರೆ ನಿನಗೆ ಹೇಳಲಿಕ್ಕೇನೂ ಇಲ್ಲ ತಾನೆ ?" ಅವರೆಂದರು.

"ಏನೂ ಇಲ್ಲ."

ಹುಡುಗ ಚಾಲಾಕುತನವನ್ನೇನೂ ತೋರಿಸುತ್ತಿರಲಿಲ್ಲ. ಮಾತನಾಡುವಂಥದ್ದನ್ನು ಯೋಚಿಸಲು ಅವನಿಗೆ ಪ್ರಾಮಾಣಿಕವಾಗಿಯೇ ಸಾಧ್ಯವಾಗಿರಲಿಲ್ಲ.

ಮುಖ್ಯೋಪಾಧ್ಯಾಯರು ತಲೆಯನ್ನು ಹಿಂದಕ್ಕೆ ತಿರುಗಿಸಿ ನಗತೊಡಗಿದರು. "ನಿನಗೆ ಮಾತನಾಡಲು ಏನಾದರೂ ಹುಡುಕಿಕೊಡೋಣ."

"ಹುಡುಕಿಕೊಡುತ್ತೀರಾ ?" ಹುಡುಗ ಕಂಗೆಟ್ಟವನಂತಾದ. ಡೆಸ್ಕಿನ ಮೇಲೆ ಕುಳಿತಿದ್ದ ಹುಡುಗನನ್ನು ಕರೆತಂದು ವರ್ತುಲದ ಮಧ್ಯೆ ನಿಲ್ಲಿಸಿದರು.

"ಜ್ಞಾಪಿಸಿಕೋ" ಅವರೆಂದರು, "ಬೆಳಿಗ್ಗೆ ಎದ್ದ ಸಮಯದಿಂದ ಶಾಲೆಗೆ ಬರುವವರೆಗೂ ನೀನು ಏನು ಮಾಡಿದೆ ? ಮೊದಲು ಏನು ಮಾಡಿದೆ ?"

ಹುಡುಗ ತಲೆಕೆರೆದುಕೊಳ್ಳುತ್ತಾ "ಊಂsss" ಎಂದ.

"ಶಹಬಾಷ್, ನೀನು 'ಊಂsss' ಎಂದು ಹೇಳಿದ್ದೀಯಾ. ನಿನಗೆ ಹೇಳಲಿಕ್ಕೇನೋ ಇದೆ. 'ಊಂsss'ನಂತರ ನೀನೇನು ಮಾಡಿದೆ ?"

"ಊಂsss ಆ... ನಾನು ಎದ್ದೆ" ಇನ್ನೂ ತಲೆ ಕೆರೆದುಕೊಳ್ಳುತ್ತಾ ಹೇಳಿದ.

ತೊತ್ತೊ-ಚಾನ್ ಮತ್ತು ಇತರ ಮಕ್ಕಳಿಗೆ ತುಂಬಾ ವಿನೋದವೆನಿಸಿದರೂ ಎಚ್ಚರಿಕೆಯಿಂದ ಕೇಳಿಸಿಕೊಂಡರು. ಹುಡುಗ ಮುಂದುವರಿಸಿದ. "ಆ ಮೇಲೆ... ಆ...." ಮತ್ತೆ ತಲೆ ಕೆರೆದುಕೊಂಡ. ಮುಖ್ಯೋಪಾಧ್ಯಾಯರು ತಾಳ್ಮೆಯಿಂದ ಹುಡುಗನನ್ನೇ ನೋಡುತ್ತಾ ಕುಳಿತರು. ಕೈಗಳನ್ನು ಡೆಸ್ಕಿನ ಮೇಲೆ ಇರಿಸಿದ್ದರು. ಮುಖದ ತುಂಬಾ ನಸುನಗೆ ಇತ್ತು. ನಂತರ ಅವರೆಂದರು, "ತುಂಬಾ ಚೆನ್ನಾಗಿತ್ತು. ಅಷ್ಟು ಸಾಕು. ನೀನು ಈ ಬೆಳಿಗ್ಗೆ ಎದ್ದೆ, ಎಲ್ಲರಿಗೂ ಅದನ್ನು ಅರ್ಥವಾಗುವಂತೆ ಹೇಳಿದ್ದೀಯಾ. ಕಾಲಕಳೆಯಲು ಉತ್ತಮ ಮಾತುಗಾರನಾಗಿ ಎಲ್ಲರನ್ನೂ ನಗಿಸುವ ಅಥವಾ ಕುತೂಹಲ ಹುಟ್ಟಿಸುವ ಅವಶ್ಯಕತೆ ಇಲ್ಲ. ತುಂಬಾ ಮುಖ್ಯವಾದದ್ದೆಂದರೆ

ನಿನಗೆ ಮಾತನಾಡಲು ಏನೂ ಇಲ್ಲ ಎಂದು ಹೇಳಿದೆ, ಕೊನೆಗೆ ಹೇಳುವಂಥದ್ದನ್ನು ಕಂಡುಕೊಂಡೆ.''

ಆದರೆ ಹುಡುಗ ಕುಳಿತುಕೊಳ್ಳಲಿಲ್ಲ. ಮತ್ತೆ ಜೋರಾಗಿ ಹೇಳತೊಡಗಿದ, ''ಆಮೇಲೆ....''

ಎಲ್ಲ ಮಕ್ಕಳೂ ಮುಂದಕ್ಕೆ ಬಾಗಿದರು. ಹುಡುಗ ನೀಳವಾದ ಉಸಿರೆಳೆದುಕೊಂಡು ಮುಂದುವರೆಸಿದ, ''ಆಮೇಲೆ....ಊಂ... ಅಮ್ಮ....ಊಂ.... ಎಂದೆ. 'ಹಲ್ಲುಜ್ಜಿಕೋ....' ಎಂದರು. ನಾನು ಹಲ್ಲುಜ್ಜಿಕೊಂಡೆ.''

ಮುಖ್ಯೋಪಾಧ್ಯಾಯರು ಚಪ್ಪಾಳೆ ತಟ್ಟಿದರು. ಎಲ್ಲರೂ ಚಪ್ಪಾಳೆ ತಟ್ಟಿದರು. ಹುಡುಗ ಮತ್ತೂ ಜೋರಾದ ದನಿಯಲ್ಲಿ ಮತ್ತೆ ಹೇಳತೊಡಗಿದ, ''ಆಮೇಲೆ....ಊಂ....''

ಮಕ್ಕಳೆಲ್ಲ ಚಪ್ಪಾಳೆ ನಿಲ್ಲಿಸಿ, ಉಸಿರು ಬಿಗಿಹಿಡಿದು ಮತ್ತೂ ಮುಂದಕ್ಕೆ ಬಾಗಿ ಕೇಳಿಸಿಕೊಳ್ಳತೊಡಗಿದರು.

ಕೊನೆಯದಾಗಿ ಹುಡುಗ ವಿಜಯೋತ್ಸಾಹದ ದನಿಯಲ್ಲಿ ಹೇಳಿದ, ''ಆನಂತರ.... ನಾನು.... ಶಾಲೆಗೆ ಬಂದೆ.''

ಇಷ್ಟಾಗುವ ವೇಳೆಗೆ ಸ್ವಲ್ಪ ದೊಡ್ಡ ಹುಡುಗನೊಬ್ಬ ತುಂಬಾ ಮುಂದಕ್ಕೆ ಬಾಗಿದ್ದವನು ಆಯತಪ್ಪಿ ಬಿದ್ದು ಊಟದ ಡಬ್ಬಿಗೆ ಮುಖ ಚಚ್ಚಿಕೊಂಡ. ಆದರೆ ಆ ಹುಡುಗ ಏನೋ ಒಂದು ಮಾತನಾಡಿದನಲ್ಲ ಎಂದು ಎಲ್ಲರಿಗೂ ವಿಪರೀತ ಖುಷಿಯಾಗಿತ್ತು.

ಮುಖ್ಯೋಪಾಧ್ಯಾಯರು ಎಡಬಿಡದೆ ಚಪ್ಪಾಳೆ ಹೊಡೆದರು. ತೊತ್ತೊ-ಚಾನ್ ಮತ್ತು ಇತರ ಮಕ್ಕಳು ಕೂಡ. ಇನ್ನೂ ಮಧ್ಯದಲ್ಲೇ ನಿಂತಿದ್ದ 'ಆಮೇಲೆ....ಊಂ....' ಕೂಡ ಚಪ್ಪಾಳೆ ತಟ್ಟಿದ. ಇಡೀ ಅಸೆಂಬ್ಲಿ ಹಾಲು ಚಪ್ಪಾಳೆಯಿಂದ ತುಂಬಿಹೋಯಿತು.

ದೊಡ್ಡವನಾದ ಮೇಲೂ ಸಹ ಆ ಹುಡುಗನಿಗೆ ಆ ಚಪ್ಪಾಳೆಯ ಸದ್ದನ್ನು ಮರೆಯಲು ಸಾಧ್ಯವಿಲ್ಲವೇನೋ !

## ನಾವು ಸುಮ್ಮನೆ ಆಡುತ್ತಿದ್ದೆವು !''

ತೊತ್ತೊ-ಚಾನ್‌ಳಿಗೆ ಭಯಂಕರ ಅಪಘಾತವಾಗಿತ್ತು. ಶಾಲೆಯಿಂದ ಮನೆಗೆ ಬಂದು ರಾಕಿಯ ಜತೆ ರಾತ್ರಿ ಊಟಕ್ಕೆ ಮುಂಚೆ ತನ್ನ ಕೋಣೆಯಲ್ಲಿ 'ತೋಳ'ದ ಆಟ ಆಡುತ್ತಿದ್ದಾಗ ಈ ಅಪಘಾತವಾಗಿತ್ತು.

ಇಬ್ಬರೂ ಕೋಣೆಯ ವಿರುದ್ಧ ದಿಕ್ಕುಗಳಿಂದ ನೆಲದ ಮೇಲೆ ಉರುಳುತ್ತಾ ಬಂದು ಒಬ್ಬರಿಗೊಬ್ಬರು ಹೊಡೆದುಕೊಂಡು ಸ್ವಲ್ಪ ಕಚ್ಚಾಡಬೇಕು. ಹೀಗೆ ಅವರು ಆಟ ಪ್ರಾರಂಭಿಸಿದರು. ಇದನ್ನೇ ಅನೇಕ ಸಲ ಆಡಿದ ನಂತರ ಕೊಂಚ ಕಷ್ಟವಾದ್ದನ್ನು ಪ್ರಯತ್ನಿಸಲು ತೀರ್ಮಾನಿಸಿದರು. ಅಂದರೆ ತೊತ್ತೊ-ಚಾನ್ ತೀರ್ಮಾನಿಸಿದಳು. ಈಗಿನ ಬದಲಾವಣೆಯೆಂದರೆ, ಇಬ್ಬರೂ ಉರುಳುತ್ತಾ, ಕೋಣೆಯ ಮಧ್ಯದಲ್ಲಿ

ಒಬ್ಬರಿಗೊಬ್ಬರು ಹೊಡೆದುಕೊಂಡ ಮೇಲೆ ಯಾರು ಚೆನ್ನಾಗಿ ಇನ್ನೊಬ್ಬರ ಕಡೆಗೆ ತೋಳದಂತಹ ಭಯಂಕರ ಮುಖ ಮಾಡಿ ಹೆದರಿಸುತ್ತಾರೋ ಅವರು ಗೆದ್ದಂತೆ. ಜರ್ಮನ್ ಶಫರ್ಡ್ ರಾಕಿಗೆ ತೋಳದ ಮುಖ ಮಾಡುವುದೇನೂ ಕಷ್ಟವಾಗಿರಲಿಲ್ಲ. ಅದು ತನ್ನ ಕಿವಿಗಳನ್ನು ನಿಮಿರಿಸಿ, ಬಾಯಿತೆರೆದು, ಎಲ್ಲ ಹಲ್ಲುಗಳನ್ನು ಕಿಸಿದರೆ ಮುಗಿಯಿತು. ತನ್ನ ಕಣ್ಣುಗಳನ್ನು ಭಯಂಕರವಾಗಿ ಕಾಣುವಂತೆ ಮಾಡುವುದೂ ಅದಕ್ಕೆ ಕಷ್ಟವಾಗಿರಲಿಲ್ಲ. ಕಷ್ಟವಾದದ್ದು ತೊತ್ತೊ-ಚಾನ್‌ಳಿಗೇ. ಕಿವಿಗಳಂತೆ ಕಾಣುವಂತೆ ತನ್ನ ಎರಡೂ ಕೈಗಳನ್ನು ತಲೆಯ ಎರಡೂ ಕಡೆಗಳಲ್ಲಿ ಎತ್ತಿಹಿಡಿದು, ಸಾಧ್ಯವಾಗುವವರೆಗೂ ಬಾಯಿ, ಕಣ್ಣುಗಳನ್ನು ತೆರೆದು ಗೊಗ್ಗರು ದನಿಯಿಂದ ರಾಕಿಯನ್ನು ಹೆದರಿಸುವಂತೆ ನಟಿಸುವಳು. ಮೊದಮೊದಲು ರಾಕಿ ಚೆನ್ನಾಗಿಯೇ ಆಡುತ್ತಿತ್ತು. ಆದರೆ ಎಷ್ಟಾದರೂ ಅದೊಂದು ನಾಯಿಯೇ ತಾನೆ! ಸ್ವಲ್ಪ ಸಮಯದ ನಂತರ ಅದು ಆಟವೆಂಬುದನ್ನೇ ಮರೆತು ಇದ್ದಕ್ಕಿದ್ದಂತೆ ತೊತ್ತೊ-ಚಾನ್‌ಳನ್ನು ಕಚ್ಚಿಬಿಟ್ಟಿತು.

ಇನ್ನೂ ಮರಿಯಾಗಿದ್ದರೂ, ರಾಕಿ ತೊತ್ತೊ-ಚಾನ್‌ಳಿಗಿಂತ ಎರಡರಷ್ಟು ದೊಡ್ಡದಾಗಿತ್ತು. ಅದರ ಹಲ್ಲುಗಳು ಚೂಪಾಗಿದ್ದವು. ಹೀಗಾಗಿ ಏನಾಯಿತೆಂದು ತಿಳಿಯುವ ಮುನ್ನವೇ ಅವಳ ಬಲಕಿವಿ ಹರಿದು ಜೋತಾಡತೊಡಗಿ ರಕ್ತದ ಕೋಡಿ ಹರಿದಿತ್ತು.

ಅವಳ ಕಿರುಚಾಟವನ್ನು ಕೇಳಿಸಿಕೊಂಡ ಅಮ್ಮ ಅಡಿಗೆ ಮನೆಯಿಂದ ಓಡೋಡಿ ಬಂದಳು. ತೊತ್ತೊ-ಚಾನ್ ಕೋಣೆಯ ಮೂಲೆಯಲ್ಲಿ ತನ್ನ ಬಲ ಕಿವಿಯನ್ನು ಎರಡೂ ಕೈಗಳಿಂದ ಮುಚ್ಚಿಕೊಂಡು ರಾಕಿಯೊಂದಿಗೆ ನಿಂತುಬಿಟ್ಟಿದ್ದಾಳೆ. ಮತ್ತೊಂದು ಕೋಣೆಯಲ್ಲಿ ವಯೋಲಿನ್ ಅಭ್ಯಾಸ ಮಾಡುತ್ತಿದ್ದ ಅವಳ ಅಪ್ಪ ಕೂಡ ಕೂಗು ಕೇಳಿ ಓಡಿ ಬಂದರು. ರಾಕಿಗೀಗ ತಾನೇನೋ ಭಯಂಕರವಾದದ್ದನ್ನು ಮಾಡಿಬಿಟ್ಟಿರುವ ಅರಿವಾಗತೊಡಗಿತ್ತು. ಬಾಲ ಮುದುರಿಕೊಂಡು ತೊತ್ತೊ-ಚಾನ್‌ಳತ್ತ ದೀನವಾಗಿ ನೋಡತೊಡಗಿತು.

ಅಮ್ಮ-ಅಪ್ಪ ರಾಕಿಯ ಮೇಲೆ ಸಿಟ್ಟಾಗಿ ಅದನ್ನು ಹೊಡೆದು ಓಡಿಸಿಬಿಟ್ಟರೇನು ಮಾಡುವುದು ಎಂಬುದೊಂದೇ ಈಗ ತೊತ್ತೊ-ಚಾನ್‌ಳನ್ನು ಕಾಡುತ್ತಿದ್ದ ಚಿಂತೆ. ಅವಳಿಗೆ ಅದಕ್ಕಿಂತ ದುಃಖಕರವಾದ್ದು ಬೇರೇನೂ ಇಲ್ಲ. ಅವಳೀಗ ತನ್ನ ಕಿವಿಯನ್ನು ಮುಚ್ಚಿ ಹಿಡಿದಿದ್ದಂತೆಯೇ ರಾಕಿಯ ಪಕ್ಕಕ್ಕೆ ರಕ್ಷಣಾತ್ಮಕವಾಗಿ ಸರಿದು ನಿಂತು "ರಾಕಿಯನ್ನು ಬಯ್ಯಬೇಡಿ, ರಾಕಿಯನ್ನು ಬಯ್ಯಬೇಡಿ," ಎಂದು ಅಳತೊಡಗಿದಳು.

ಅವಳ ಕಿವಿಗೇನಾಗಿದೆಯೆಂಬುದಷ್ಟೇ ಅವರಿಗೆ ಮುಖ್ಯವಾಗಿತ್ತು. ಕಿವಿಯಿಂದ ಅವಳ ಕೈ ಸರಿಸಲು ಪ್ರಯತ್ನಿಸಿದರು. ತೊತ್ತೊ-ಚಾನ್ ಕೈ ತೆಗೆಯಲು ಬಿಡದೆ, "ರಾಕಿ ಏನೂ ಮಾಡಿಲ್ಲ. ಅದನ್ನು ಹೊಡೀಬೇಡಿ" ಎಂದು ಕೂಗತೊಡಗಿದಳು. ತೊತ್ತೊ-ಚಾನ್‌ಳಿಗಾಗ ತನ್ನ ನೋವಿನ ಬಗ್ಗೆ ಗಮನವೇ ಇರಲಿಲ್ಲ. ಅವಳಿಗಿದ್ದದ್ದು ರಾಕಿಯ ಚಿಂತೆಯೇ.

ರಕ್ತ ಸೋರುತ್ತಲೇ ಇತ್ತು. ಇದ್ದಕ್ಕಿದ್ದಂತೆ ಅವರಿಗೆ ರಾಕಿ ಮಗಳನ್ನು

ಕಚ್ಚಿರಬೇಕೆಂದು ಅರಿವಾಯಿತು. ಆದರೆ ತಾವು ರಾಕಿಗೆ ಏನೂ ಮಾಡುವುದಿಲ್ಲವೆಂದು ತೊತ್ತೊ-ಚಾನ್‌ಳಿಗೆ ಪ್ರಮಾಣ ಮಾಡಿದ ಮೇಲೆ ಅವಳು ಕಿವಿಯಿಂದ ಕೈ ತೆಗೆದಳು. ಕಿವಿ ಹರಿದು ಜೋತಾಡುತ್ತಿದ್ದುದನ್ನು ಕಂಡು ಅಮ್ಮ ಚೀರಿಕೊಂಡಳು. ಅಪ್ಪ ತಕ್ಷಣ ಪುಟ್ಟಿಯನ್ನು ಎತ್ತಿಕೊಂಡು ಡಾಕ್ಟರರ ಹತ್ತಿರ ನಡೆದರು, ಅಮ್ಮನ ಜತೆ. ಅದೃಷ್ಟವಶಾತ್ ಸಕಾಲದಲ್ಲಿ ಚಿಕಿತ್ಸೆ ದೊರೆತಿದ್ದರಿಂದ ಡಾಕ್ಟರಿಗೆ ಕಿವಿಯನ್ನು ಹಿಂದಿನ ರೂಪಕ್ಕೆ ಬರುವಂತೆ ಮಾಡುವುದು ಸಾಧ್ಯವಾಯಿತು. ತಂದೆ-ತಾಯಿಗಳಿಗೆ ತುಂಬಾ ನಿರಾಳವೆನಿಸಿತ್ತು. ಆದರೆ, ತೊತ್ತೊ-ಚಾನ್‌ಳಿಗೆ ಮಾತ್ರ ಅವರು ತಮ್ಮ ಮಾತುಳಿಸಿಕೊಂಡು ರಾಕಿಗೆ ಏನೂ ಮಾಡದಿದ್ದರೆ ಸಾಕು ಎಂಬುದೊಂದೇ ಚಿಂತೆ.

ತಲೆಯಿಂದ ಗಲ್ಲದವರೆಗೂ ಸಂಪೂರ್ಣ ಬ್ಯಾಂಡೇಜ್ ಸುತ್ತಿಸಿಕೊಂಡು ಬಿಳಿ ಮೊಲದ ಮರಿಯಂತೆ ಕಾಣುತ್ತಿದ್ದ ತೊತ್ತೊ-ಚಾನ್ ಮನೆಗೆ ಬಂದಳು. ರಾಕಿಯನ್ನು ಬಯ್ಯುವುದಿಲ್ಲವೆಂದು ಪ್ರಮಾಣ ಮಾಡಿದ್ದರೂ ಆ ನಾಯಿಗೆ ಯಾವುದಾದರೊಂದು ರೀತಿಯಲ್ಲಿ ತಪ್ಪು ತಿಳಿಯುವಂತೆ ಮಾಡಬೇಕೆಂದು ಅಪ್ಪ ಹವಣಿಸುತ್ತಿದ್ದರು. ಅಮ್ಮ ಮಾತ್ರ "ಮಾತನ್ನು ಉಳಿಸಿಕೊಳ್ಳಿ" ಎನ್ನುವಂತೆ ಕಣ್ಣಲ್ಲೇ ಸನ್ನೆ ಮಾಡಿದ್ದರಿಂದ ಅಪ್ಪ ಮನಸ್ಸಿಲ್ಲದ ಮನಸ್ಸಿನಿಂದ ಸುಮ್ಮನಾಗಬೇಕಾಯಿತು.

ಎಲ್ಲ ಸರಿಯಾಗಿದೆ, ಯಾರೂ ಏನೂ ಮಾಡುವುದಿಲ್ಲ ಎಂದು ರಾಕಿಗೆ ಹೇಳಬೇಕೆಂಬ ತವಕದಿಂದ ತೊತ್ತೊ-ಚಾನ್ ಮನೆಯೊಳಕ್ಕೆ ಓಡಿದಳು. ಆದರೆ ರಾಕಿ ಎಲ್ಲೂ ಕಾಣಲೇ ಇಲ್ಲ. ಈಗ ಮೊದಲ ಬಾರಿಗೆ ತೊತ್ತೊ-ಚಾನ್ ಅಳತೊಡಗಿದಳು. ಡಾಕ್ಟರ್ ಹತ್ತಿರ ಕೂಡ ಅವಳು ಅತ್ತಿರಲಿಲ್ಲ. ತಾನು ನೋವಿನಿಂದ ಅತ್ತರೆ ರಾಕಿಯ ಮೇಲೆ ಅವರ ಸಿಟ್ಟು ಹೆಚ್ಚಾಗುತ್ತದೆಂದು ನೋವು ಸಹಿಸಿಕೊಂಡಿದ್ದಳು. ಆದರೆ ಈಗ ಗೊಳೋ ಎಂದು ಅಳತೊಡಗಿದಳು. "ರಾಕಿ ! ರಾಕಿ ! ಎಲ್ಲಿದ್ದೀಯಾ ?" ಎಂದು ಕರೆಯುತ್ತಾ ಅತ್ತಳು.

ಎಷ್ಟೋ ಸಲ ಕರೆದ ನಂತರ, ಅವಳ ಅಚ್ಚುಮೆಚ್ಚಿನ ಕಂದು ಬೆನ್ನು ನಿಧಾನಕ್ಕೆ ಸೋಫಾದ ಹಿಂದಿನಿಂದ ಪ್ರತ್ಯಕ್ಷವಾಗುತ್ತಿದ್ದಂತೆ ಅವಳ ಮುಖದ ತುಂಬಾ ಕಿರುನಗೆ ಮುತ್ತಿಕೊಂಡಿತು. ತೊತ್ತೊ-ಚಾನ್‌ಳ ಹತ್ತಿರಕ್ಕೆ ನಿಧಾನಕ್ಕೆ ಸರಿದು ಬ್ಯಾಂಡೇಜಿನ ಸಂದಿನಿಂದ ಇಣುಕುತ್ತಿದ್ದ ಅವಳ ಸರಿಯಾಗಿದ್ದ ಕಿವಿಯನ್ನು ನೆಕ್ಕಿತು. ತೊತ್ತೊ-ಚಾನ್ ರಾಕಿಯ ಕೊರಳು ಬಳಸಿ ಕಿವಿ ಮೂಸಿದಳು. ತಂದೆ-ತಾಯಿ ಮಾತ್ರ ಅದನ್ನು 'ಒಂಥರಾ' ವಾಸನೆಯೆನ್ನುತ್ತಿದ್ದರು. ಆದರೆ ತೊತ್ತೊ-ಚಾನ್‌ಳಿಗೆ ಮಾತ್ರ ಅದು ಪ್ರಿಯವಾದ, ಪರಿಚಿತವಾದ ಪರಿಮಳ.

ವಿಪರೀತ ಬಳಲಿದ್ದ ರಾಕಿ ಮತ್ತು ತೊತ್ತೊ-ಚಾನ್ ಇಬ್ಬರೂ ಬಲು ಬೇಗ ನಿದ್ದೆ ಹೋದರು. ಇನ್ನೆಂದೂ ತೋಳದ ಆಟ ಆಡುವುದಿಲ್ಲವೆಂದು ಅವರಿಬ್ಬರೂ ನಿಶ್ಚಯಿಸಿಕೊಂಡಿದ್ದರು. ಹಿಂದೆಂದಿಗಿಂತಲೂ ಅವರ ಸ್ನೇಹ ಗಾಢವಾಗಿತ್ತು. ಆಗಷ್ಟೇ ತೋಟದಲ್ಲಿ ತಲೆ ಎತ್ತಿದ್ದ ಬೇಸಿಗೆಯ ಚಂದ್ರ ಇದನ್ನು ಕಂಡು ಮೆಲ್ಲಗೆ ನಕ್ಕ.

## ಕ್ರೀಡಾ ದಿನ

ಪ್ರತಿವರ್ಷ ನವೆಂಬರ್ ಮೂರನೇ ತಾರೀಖು, ತೊಮೊಯೆಯು ಕ್ರೀಡಾ ದಿನ. ಆ ದಿನ ಒಂದೆರಡು ಬಾರಿಯಷ್ಟೇ ತುಂತುರು ಮಳೆಯಾಗುವುದೆಂದು ಮುಖ್ಯೋಪಾಧ್ಯಾಯರು ತಮ್ಮ ಅನುಭವ ಹಾಗೂ ಸಂಶೋಧನೆಯಿಂದ ಅರಿತುಕೊಂಡಿದ್ದರು. ಹೀಗಾಗಿ ಆ ದಿನವನ್ನೇ ಕ್ರೀಡಾದಿನವನ್ನಾಗಿ ಗೊತ್ತುಪಡಿಸಿದ್ದರು. ಹವಾಮಾನದ ಮಾಹಿತಿ ಸಂಗ್ರಹಿಸುವ ಅವರ ಕುಶಲತೆಯೋ ಅಥವಾ ಸೂರ್ಯ ಮತ್ತು ಮೋಡಗಳು ಅಂದು ಮಳೆಯಾಗಬಾರದೆನ್ನುವ ಅವರ ಬಯಕೆಗೆ ಓಗೊಟ್ಟಿದ್ದವೋ, ಅಂತೂ ಆ ದಿನ ಮಳೆ ಬೀಳುತ್ತಿರಲಿಲ್ಲವೆಂಬುದು ಸತ್ಯ. ಮೊದಲ ದಿನವೇ ಶಾಲಾ ಮೈದಾನವನ್ನು ಅಲಂಕರಿಸಿ ಅಲ್ಲಿ ಅತ್ಯುತ್ಸಾಹದಿಂದ ಪ್ರತಿಯೊಂದು ತಯಾರಿಯನ್ನೂ ಮಾಡಿಕೊಂಡ ಮಕ್ಕಳ ಕ್ರೀಡಾ ದಿನ ಮಳೆಯಿಂದ ಕೆಡಬಾರದೆಂಬ ಅವರ ಉತ್ಕಟ ಹಾರೈಕೆಗೆ ಸಿಕ್ಕ ಉತ್ತರ ಇದಾಗಿತ್ತು.

ಬೇರೆಲ್ಲವೂ ಭಿನ್ನವಾಗಿರುವಂತೆ ತೊಮೊಯೆಯು ಕ್ರೀಡಾ ದಿನ ಕೂಡ ಭಿನ್ನವಾಗಿತ್ತು. ಬಲಾಬಲ ಪರೀಕ್ಷೆ ಮತ್ತು ಮೂರು ಕಾಲಿನ ಓಟಗಳನ್ನು ಬಿಟ್ಟರೆ ಉಳಿದೆಲ್ಲ ಕ್ರೀಡೆಗಳು ಇಲ್ಲಿ ಭಿನ್ನವಾಗಿದ್ದವು. ಅವೆಲ್ಲವನ್ನು ಮುಖ್ಯೋಪಾಧ್ಯಾಯರೇ ರೂಪಿಸಿದ್ದರು. ಇಲ್ಲೆಲ್ಲಾ ಯಾವುದೇ ವಿಶೇಷ ಸಾಮಗ್ರಿಯಿಲ್ಲದೆ ನಿತ್ಯ ಪರಿಚಿತ ವಸ್ತುಗಳನ್ನೇ ಬಳಸಿಕೊಳ್ಳಲಾಗುತ್ತಿತ್ತು.

ಉದಾಹರಣೆಗೆ, ಕಾರ್ಪ್ ಮೀನಿನ ಓಟ. ಬಟ್ಟೆಯಲ್ಲಿ ಬೃಹದಾಕಾರದ ಕಾರ್ಪ್ ಮೀನುಗಳನ್ನು ಮಾಡಿ ಮೈದಾನದ ಮಧ್ಯದಲ್ಲಿ ಇರಿಸುತ್ತಿದ್ದರು. ಸೂಚನೆ ಕೊಟ್ಟ ತಕ್ಷಣ ಮಕ್ಕಳು ಕಾರ್ಪ್ ಮೀನಿನ ಕಡೆ ಓಡುತ್ತಾರೆ. ಅದರ ಬಾಯಿಯಿಂದ ಪ್ರವೇಶಿಸಿ ಒಳಗೆಲ್ಲಾ ತೆವಳುತ್ತಾ ಬಾಲದಿಂದ ಹೊರಬಂದು ಓಟ ಪ್ರಾರಂಭಿಸಿದ ಜಾಗಕ್ಕೆ ವಾಪಸ್ಸು ಓಡಿ ಬರುತ್ತಾರೆ. ಒಂದು ಕೆಂಪು ಮತ್ತು ಎರಡು ಹಳದಿ ಬಣ್ಣದ ಬಟ್ಟೆಯ ಮೂರು ಕಾರ್ಪ್ ಮೀನುಗಳನ್ನು ಇರಿಸಿದ್ದರಿಂದ ಮೂರು ಮಕ್ಕಳು ಒಂದು ಬಾರಿಗೆ ಭಾಗವಹಿಸಬಹುದಾಗಿತ್ತು. ಈ ಆಟ ಸುಲಭದಂತೆ ಕಂಡರೂ ಕಷ್ಟವಾದದ್ದು. ಒಳಗಡೆ ಕತ್ತಲಿರುತ್ತಿದ್ದರಿಂದ ಮತ್ತು ಕಾರ್ಪ್‌ಗಳು ತುಂಬಾ ಉದ್ದ ಇರುತ್ತಿದ್ದರಿಂದ ಒಳ ಸೇರಿದವರಿಗೆ ದಿಕ್ಕು ತಪ್ಪಿದಂತಾಗುತ್ತಿತ್ತು. ತೊತ್ತೊ-ಚಾನ್‌ಳೂ ಸೇರಿದಂತೆ ಅನೇಕ ಮಕ್ಕಳು ಬಾಯಿಂದ ಹೊಕ್ಕು ಮತ್ತೆ ಬಾಯಿಂದಲೇ ಹೊರಬರುತ್ತಿದ್ದರು. ತಮ್ಮ ತಪ್ಪಿನ ಅರಿವಾದಾಗ ಮತ್ತೆ ಒಳ ನುಸುಳುತ್ತಿದ್ದರು. ಮಕ್ಕಳು ಒಳಹೊಕ್ಕು ತೆವಳುವಾಗ ಉಂಟಾದ ಚಲನೆಯಿಂದ ಕಾರ್ಪ್ ಮೀನು ಜೀವತಾಳಿದಂತೆ ನೋಡಲು ತುಂಬಾ ಮಜವಾಗಿರುತ್ತಿತ್ತು.

ಇನ್ನೊಂದು ಆಟ ಅಮ್ಮನನ್ನು ಹುಡುಕುವ ಆಟ. ಸೂಚನೆ ಸಿಕ್ಕ ತಕ್ಷಣ ಮಕ್ಕಳು ಮಲಗಿಸಿಟ್ಟ ಮರದ ಏಣಿಯ ಕಡೆ ಓಡಬೇಕು. ಅದರ ಮೆಟ್ಟಿಲುಗಳ ನಡುವೆ ನುಸುಳಬೇಕು. ಬುಟ್ಟಿಯಿಂದ ಒಂದು ಕವರನ್ನು ತೆಗೆದುಕೊಳ್ಳಬೇಕು. ಅದನ್ನು ತೆಗೆದು ನೋಡಿ, ಉದಾಹರಣೆಗೆ, ಅದರಲ್ಲಿ 'ಸಾಕ್ಯೋ-ಚಾನ್‌ಳ ಅಮ್ಮ' ಎಂದು ಬರೆದಿದ್ದರೆ ಪ್ರೇಕ್ಷಕರ ಮಧ್ಯದಿಂದ ಅವರನ್ನು ಹುಡುಕಿ ತೆಗೆದು ಅವರ

ಕೈಹಿಡಿದುಕೊಂಡು ಗುರಿ ತಲುಪಬೇಕು. ಏಣಿಯ ಮೆಟ್ಟಿಲುಗಳ ಮಧ್ಯ ತೆವಳುವಾಗ ಬೆನ್ನು ಸಿಕ್ಕಿಹಾಕಿಕೊಳ್ಳಬಹುದು. ಅದೂ ಅಲ್ಲದೆ ಮಕ್ಕಳು ಯಾರು ಸಾಕ್ಯೋ-ಚಾನ್‌ಳ ತಾಯಿ ಇತ್ಯಾದಿಗಳನ್ನು ತಿಳಿದುಕೊಂಡಿರಬೇಕು. ಆದರೆ ಪೇಪರಿನ ಮೇಲೆ 'ಓಕೋಳ ಅಕ್ಕ' ಎಂತಲೋ, 'ಸೂಪನ ತಾಯಿ' ಎಂತಲೋ 'ಶ್ರೀಮತಿ ಕುನಿನೋರಿಯ ಮಗ' ಎಂತಲೋ ಬರೆದಿದ್ದರೆ, ಮಕ್ಕಳು ತಾವೆಂದೂ ಭೇಟಿಯಾಗದ ಇವರನ್ನು ಹುಡುಕಲು ಪ್ರೇಕ್ಷಕರತ್ತ ಹೋಗಿ 'ಓಕೋಳ ತಾಯಿ...' ಎಂದು ಗಟ್ಟಿಯಾಗಿ ಕೂಗುವರು. ಇದಕ್ಕೆ ಧೈರ್ಯವೂ ಬೇಕು. ಅದೃಷ್ಟವಶಾತ್ ತನ್ನ ತಾಯಿಯ ಹೆಸರೇ ಬಂದ ಮಕ್ಕಳು ಖುಷಿಯಾಗಿ ಕುಣಿಯುತ್ತಾ 'ಅಮ್ಮ ಅಮ್ಮ... ಬೇಗ ಬಾ' ಎಂದು ಕೂಗಿಕೊಳ್ಳುವರು. ಈ ಆಟದಲ್ಲಿ ಪ್ರೇಕ್ಷಕರೂ ಎಚ್ಚರದಿಂದರಬೇಕು. ಅವರ ಹೆಸರನ್ನು ಯಾವಾಗ ಬೇಕಾದರೂ ಕೂಗಬಹುದಾದ್ದರಿಂದ ತಾವು ಕುಳಿತುಕೊಂಡಿರುವ ಬೆಂಚು ಅಥವಾ ಚಾಪೆಯ ಮೇಲಿಂದ ಎದ್ದು ತನಗಾಗಿ ಕಾಯುತ್ತಾ ನಿಂತ ಯಾವುದೋ ಮಗುವಿನ ಕೈಹಿಡಿದುಕೊಂಡು ಓಡಿ ಗುರಿ ಸೇರಬೇಕು. ಹೀಗಾಗಿ ಮಗುವೊಂದು ಬಂದು ಇವರ ಮುಂದೆ ನಿಂತಾಗ ಯಾರ ಹೆಸರು ಬರುವುದೋ ಎಂಬ ಆತಂಕದಲ್ಲಿ ಅಪ್ಪಂದಿರು ಕೂಡ ಉಸಿರು ಬಿಗಿ ಹಿಡಿದಿರುತ್ತಿದ್ದರು. ಆರಾಮವಾಗಿ ಹರಟೆಹೊಡೆಯಲು, ತಿನ್ನಲು ಸಮಯ ಇರುತ್ತಿರಲಿಲ್ಲ. ಮಕ್ಕಳಷ್ಟೇ ದೊಡ್ಡವರೂ ಕ್ರಿಯಾಶೀಲವಾಗಿರಬೇಕಾಗಿತ್ತು.

ಹಗ್ಗ ಸೆಳೆದಾಟಕ್ಕೆ ಮುಖ್ಯೋಪಾಧ್ಯಾಯರು ಮತ್ತು ಇತರ ಉಪಾಧ್ಯಾಯರುಗಳು ಸೇರಿಕೊಂಡರು. ಇವರೆಲ್ಲ ವಿರುದ್ಧ ದಿಕ್ಕಿನಲ್ಲಿ 'ಹೀ-ವೋ' ಹೀ-ವೋ' ಎಂದು ಕೂಗುತ್ತಾ ಸೆಣೆಸಾಡುತ್ತಿದ್ದರೆ, ಸೆಳೆಯಲು ಸಾಧ್ಯವಾಗದ ಅಂಗವಿಕಲ ಮಕ್ಕಳಾದ ಯಾಸುಕೀ-ಚಾನ್ ಮುಂತಾದವರು ಹಗ್ಗದ ಮಧ್ಯೆ ಕಟ್ಟಿದ ಬಟ್ಟೆಯತ್ತಲೇ ಗಮನವಿಟ್ಟು ಯಾರು ಗೆಲ್ಲುತ್ತಾರೆಂದು ಗಮನಿಸುವರು.

ಶಾಲೆಯ ಎಲ್ಲ ಮಕ್ಕಳೂ ಪಾಲ್ಗೊಳ್ಳುವ ಕೊನೆಯ ಆಟ ಕೂಡ ತೊಮೊಯೆದಲ್ಲಿ ಭಿನ್ನವಾಗಿಯೇ ಇತ್ತು. ಯಾರೂ ತುಂಬಾ ದೂರ ಓಡಬೇಕಾಗಿರಲಿಲ್ಲ. ಸಭಾಂಗಣದೆಡೆ ಇದ್ದ ಅರ್ಧಚಂದ್ರಾಕಾರದ ಸಿಮೆಂಟಿನ ಮೆಟ್ಟಿಲುಗಳ ಮೇಲೆ ಕೆಳಗಿಂದ ಮೇಲಕ್ಕೆ, ಮೇಲಿಂದ ಕೆಳಕ್ಕೆ ಓಡುವುದಷ್ಟೇ ಅವರು ಮಾಡಬೇಕಾಗಿದ್ದು. ಮೊದಲ ನೋಟಕ್ಕೆ ಅದು ತುಂಬಾ ಸುಲಭವೆಂಬಂತೆ ಕಂಡಿತಾದರೂ, ಮೆಟ್ಟಿಲುಗಳು ತುಂಬಾ ಪುಟ್ಟಪುಟ್ಟದಾಗಿ, ಹತ್ತಿರ ಹತ್ತಿರಕ್ಕೆ ಇದ್ದುದರಿಂದ ಮತ್ತು ಒಂದು ಸಲಕ್ಕೆ ಒಂದೇ ಮೆಟ್ಟಿಲು ಹತ್ತಬೇಕಾದ್ದರಿಂದ ಉದ್ದಗಿದ್ದವರಿಗೆ, ತುಂಬಾ ಕಷ್ಟವಾಗುತ್ತಿತ್ತು. ದಿನಾಲೂ ಓಡಾಡಿ ಸಾಕಷ್ಟು ಅಭ್ಯಾಸವಾಗಿದ್ದರೂ ಮಕ್ಕಳಿಗೆ ಇವತ್ತಿನ ಈ ಆಟಕ್ಕೆ ಮೆಟ್ಟಿಲುಗಳು ತೊಡಕಾಗೇ ಕಂಡವು. ದೂರದಿಂದ ನೋಡುತ್ತಿದ್ದವರಿಗೆ ಈ ಆಟ ಸುಂದರ ಕೆಲಿಡೋಸ್ಕೋಪಿನಂತೆ ಕಾಣುತ್ತಿತ್ತು. ಮೇಲಿನ ಮೆಟ್ಟಿಲನ್ನೂ ಸೇರಿ ಒಟ್ಟು ಎಂಟು ಮೆಟ್ಟಿಲುಗಳಿದ್ದವು.

ಮುಖ್ಯೋಪಾಧ್ಯಾಯರು ಅಂದುಕೊಂಡಿದ್ದಂತೆಯೇ ತೊತ್ತೊ-ಚಾನ್ ಮತ್ತು ಅವಳ ತರಗತಿಯವರಿಗೆ ಮೊದಲ ಕ್ರೀಡಾದಿನ ಖುಷಿಕೊಟ್ಟಿತ್ತು. ಮೊದಲ ದಿನವೇ

ಮಕ್ಕಳು ಬಣ್ಣದ ಕಾಗದದಿಂದ ಸರಪಳಿ ತಯಾರಿಸಿ ಮಾಡಿದ್ದ ಅಲಂಕಾರ ಮತ್ತು ಕ್ರೀಡಾದಿನದಲ್ಲಿ ಬಳಸಿದ್ದ ಫೋನೋಗ್ರಾಫ್ ರೆಕಾರ್ಡ್‌ಗಳು ಹಬ್ಬದ ವಾತಾವರಣವನ್ನು ಸೃಷ್ಟಿಸಿದ್ದವು.

ಕ್ರೀಡಾ ಉಡುಪಾದ ಬ್ಲೂಮರನ್ನು ತೊಟ್ಟುಕೊಳ್ಳುವ ಇಷ್ಟವಿದ್ದರೂ ತೊತ್ತೊ-ಚಾನ್ ಕಡುನೀಲಿ ಬಣ್ಣದ ನಿಕ್ಕರು ಮತ್ತು ಬಿಳಿಯ ಅಂಗಿ ತೊಟ್ಟಿದ್ದಳು. ಬ್ಲೂಮರನ್ನು ತೊಡುವ ಅವಳ ಆಸೆ ಉತ್ಕಟವಾದದ್ದೇ. ಒಂದು ದಿನ ಮುಖ್ಯೋಪಾಧ್ಯಾಯರು ಶಿಶುವಿಹಾರದ ಅಧ್ಯಾಪಕರಿಗೆ ಸಂಗೀತ ವ್ಯಾಯಾಮವನ್ನು ಕಲಿಸುತ್ತಿದ್ದಾಗ ಅಲ್ಲಿ ಕೆಲವು ಹೆಂಗಸರು ತೊಟ್ಟುಕೊಂಡಿದ್ದ ಬ್ಲೂಮರನ್ನು ಕಂಡು ಅವಳಿಗೆ ಆಸೆಯಾಗಿತ್ತು. ಹೆಂಗಸರು ಹೆಜ್ಜೆಯಿಡುವಾಗ ಅವರ ಕೆಳ ತೊಡೆಗಳ ಮೃದು ಕಂಪನ ಬ್ಲೂಮರಿನ ಒಳಗಡೆಯಿಂದ ತುಂಬಾ ಸುಂದರವಾಗಿ ಕಾಣಿಸಿತ್ತು. ಅವಳು ಮನೆಗೆ ಓಡಿ ತನ್ನ ಬಟ್ಟೆಗಳನ್ನು ತೆಗೆದೆಸೆದು ನೆಲದ ಮೇಲೆ ಹೆಜ್ಜೆ ಕುಲುಕುತ್ತಾ ನಡೆದಾಡಿದ್ದಳು. ಆದರೆ ಅವಳ ಎಳಸಾದ, ಸಪೂರ ತೊಡೆಗಳಿಂದ ಯಾವ ಕಂಪನವೂ ಬರುತ್ತಿರಲಿಲ್ಲ. ಅನೇಕ ಸಲ ಪ್ರಯತ್ನಿಸಿದ ನಂತರ ಆ ಹೆಂಗಸರು ತೊಟ್ಟುಕೊಂಡಿದ್ದ ಉಡುಪಿನಿಂದಾಗಿಯೇ ಕಂಪನ ಹುಟ್ಟುತ್ತಿತ್ತೆಂದು ತೀರ್ಮಾನಿಸಿದಳು. ಅಮ್ಮನನ್ನು ಅದೆಂತಹ ಉಡುಪೆಂದು ಕೇಳಿದಾಗ ಅವು ಕ್ರೀಡಾ ಬ್ಲೂಮರುಗಳೆಂದು ಅಮ್ಮ ವಿವರಿಸಿದ್ದಳು. ಕ್ರೀಡಾ ದಿನದಂದು ತಾನು ಖಂಡಿತವಾಗಿಯೂ ಬ್ಲೂಮರನ್ನೇ ತೊಟ್ಟುಕೊಳ್ಳುವುದಾಗಿ ಅಮ್ಮನಿಗೆ ಹೇಳಿದ್ದಳು. ಆದರೆ ಅವಳಿಗೆ ಹೊಂದುವಂತಹ ಗಾತ್ರದವು ದೊರೆತಿರಲಿಲ್ಲ. ಹಾಗಾಗಿ ತೊತ್ತೊ-ಚಾನ್ ಯಾವುದೇ ಕಂಪನ ಹುಟ್ಟಿಸಲಾಗದ ಚಡ್ಡಿಗಳನ್ನೇ ತೊಟ್ಟುಕೊಳ್ಳಬೇಕಾಗಿ ಬಂದಿತ್ತು.

ಕ್ರೀಡಾದಿನದಂದು ತುಂಬಾ ವಿಚಿತ್ರವಾದದ್ದು ನಡೆಯಿತು. ಪುಟ್ಟ ಪುಟ್ಟ ಕೈಕಾಲುಗಳುಳ್ಳ ಇಡೀ ಶಾಲೆಗೇ ಪುಟ್ಟ ಹುಡುಗನಾಗಿದ್ದ ತಾಕಾಹಾಶಿ ಎಲ್ಲ ಆಟಗಳಲ್ಲೂ ಮುಂದೆ ಬಂದಿದ್ದ. ಬೇರೆಯವರು ಇನ್ನೂ ಕಾರ್ಪ್ ಮೀನಿನೊಳಗೆ ತೆವಳುತ್ತಾ ಸೆಣಸುತ್ತಿದ್ದರೆ ತಾಕಾಹಾಶಿಯು ಕಣ್ಣುಮುಚ್ಚಿ ತೆಗೆಯುವುದರೊಳಗೆ ಆಗಲೇ ಬಾಲದಿಂದ ಹೊರಬಂದು ಓಡಿರುತ್ತಿದ್ದ. ಇತರರು ಇನ್ನೂ ಏಣಿಯಲ್ಲಿ ತಲೆ ತೂರಿಸುತ್ತಿದ್ದರೆ ಅವನಾಗಲೇ ಹೊರಬಂದು ಎಷ್ಟೋ ದೂರ ಓಡಿಬಿಟ್ಟಿರುತ್ತಿದ್ದ. ಕೊನೆಯ ರಿಲೇ ಆಟದಲ್ಲಿ, ಇತರರು ಮೆಟ್ಟಿಲುಗಳ ಮೇಲೆ ಒಂದು ಸಾರಿಗೆ ಒಂದೇ ಹೆಜ್ಜೆ ಇಡಲು ಹೆಣಗುತ್ತಿದ್ದರೆ ತಾಕಾಹಾಶಿಯು ಪುಟುಪುಟು ಎಂದು ಎಲ್ಲ ಮೆಟ್ಟಿಲುಗಳನ್ನು ಜಿಗಿದು ಓಡಿಬಿಡುತ್ತಿದ್ದ.

"ತಾಕಾಹಾಶಿಯನ್ನು ಸೋಲಿಸಲೇ ಬೇಕು" ಅವರೆಲ್ಲ ಅಂದುಕೊಳ್ಳುವರು. ಅವನನ್ನು ಸೋಲಿಸಬೇಕೆಂದು ಅವರು ಎಷ್ಟು ಪ್ರಯತ್ನಿಸಿದರೂ ಅವನು ಮಾತ್ರ ಪ್ರತಿ ಸಲ ಮುಂದಿರುತ್ತಿದ್ದ. ತೊತ್ತೊ-ಚಾನ್ ಕೂಡ ಶಕ್ತಿ ಮೀರಿ ಪ್ರಯತ್ನಿಸಿದಳು. ತಾಕಾಹಾಶಿಯನ್ನು ಮಾತ್ರ ಸೋಲಿಸಲಾಗಲಿಲ್ಲ. ನೇರ ಆಟಗಳಲ್ಲಿ ಅವನನ್ನು ಸೋಲಿಸಬಹುದಿತ್ತು. ಆದರೆ ಕಷ್ಟದ ಆಟಗಳಲ್ಲಿ ಸಾಧ್ಯವಾಗುತ್ತಿರಲಿಲ್ಲ.

ತಾಕಾಹಾಶಿ ಸಂತೋಷದಿಂದ ಬೀಗುತ್ತಾ ತನ್ನ ಬಹುಮಾನ ಪಡೆಯಲು ಮೇಲೇರಿ

ಹೋದ. ಎಲ್ಲದರಲ್ಲೂ ಮೊದಲಿಗನಾಗಿದ್ದ ಅವನು ಬಹುಮಾನದ ಮೇಲೆ ಬಹುಮಾನ ಗಿಟ್ಟಿಸಿದ. ಎಲ್ಲರೂ ಕೊಂಚ ಅಸೂಯೆಯಿಂದ ಅವನತ್ತಲೇ ನೋಡುತ್ತಿದ್ದರು.

"ಮುಂದಿನ ವರ್ಷ ನಾನು ತಾಕಾಹಾಶಿಯನ್ನು ಸೋಲಿಸುತ್ತೇನೆ" ಎಲ್ಲ ಮಕ್ಕಳೂ ತಮ್ಮಷ್ಟಕ್ಕೆ ಅಂದುಕೊಂಡರು. ಆದರೆ ಪ್ರತಿವರ್ಷವೂ ತಾಕಾಹಾಶಿ ಚಾಂಪಿಯನ್ ಆಗುವನೆಂಬುದರಲ್ಲಿ ಅನುಮಾನವೇ ಇರಲಿಲ್ಲ.

ಬಹುಮಾನಗಳೂ ಮುಖ್ಯೋಪಾಧ್ಯಾಯರ ಜಾಯಮಾನಕ್ಕೆ ತಕ್ಕಂತೆಯೇ ಇದ್ದವು. ಮೊದಲ ಬಹುಮಾನ ದೊಡ್ಡ ಮೂಲಂಗಿಯಾದರೆ, ಎರಡನೇ ಬಹುಮಾನ ಎರಡು ಬೀಟ್‌ರೂಟ್‌ಗಳು; ಮೂರನೇ ಬಹುಮಾನ ಸೊಪ್ಪಿನ ಕಂತೆ; ದೊಡ್ಡವಳಾಗುವವರೆಗೂ ತೊತ್ತೊ-ಚಾನ್ ಎಲ್ಲ ಶಾಲೆಗಳಲ್ಲಿ ತರಕಾರಿಯ ಬಹುಮಾನವನ್ನೇ ಕೊಡುತ್ತಾರೆಂದು ನಂಬಿಕೊಂಡಿದ್ದಳು.

ಅಂದಿನ ದಿನಗಳಲ್ಲಿ ಬಹುತೇಕ ಶಾಲೆಗಳಲ್ಲಿ ಬಹುಮಾನಕ್ಕೆ ನೋಟ್‌ಪುಸ್ತಕಗಳನ್ನು, ಪೆನ್ಸಿಲುಗಳನ್ನು ಮತ್ತು ರಬ್ಬರುಗಳನ್ನು ಕೊಡುತ್ತಿದ್ದರು. ತೊಮೊಯೆದ ಮಕ್ಕಳಿಗೆ ಅದು ತಿಳಿದಿರಲಿಲ್ಲ. ಆದರೆ ಅವರಿಗೆ ತರಕಾರಿ ಬಹುಮಾನಗಳು ಇಷ್ಟವಾಗುತ್ತಿರಲಿಲ್ಲ. ಕೆಲವು ಬೀಟ್‌ರೂಟ್‌ಗಳನ್ನು ಮತ್ತು ಕೆಲವು ಈರುಳ್ಳಿಗಳನ್ನು ಬಹುಮಾನವಾಗಿ ಪಡೆದಿದ್ದ ತೊತ್ತೊ-ಚಾನ್‌ಳಿಗೆ ಅದನ್ನು ರೈಲಿನಲ್ಲಿ ತೆಗೆದುಕೊಂಡು ಹೋಗಲು ಮುಜುಗರವೆನಿಸಿತ್ತು. ಅನೇಕ ಸಮಾಧಾನ ಬಹುಮಾನಗಳೂ ಇದ್ದುದರಿಂದ ಕ್ರೀಡಾದಿನದ ಕೊನೆಯಲ್ಲಿ ತೊಮೊಯೆದ ಎಲ್ಲ ಮಕ್ಕಳ ಕೈಯಲ್ಲೂ ಒಂದಲ್ಲಾ ಒಂದು ತರಕಾರಿ ಇರುತ್ತಿತ್ತು. ಶಾಲೆಯಿಂದ ಮನೆಗೆ ತರಕಾರಿ ಒಯ್ಯಲು ಮಕ್ಕಳಿಗೆ ಮುಜುಗರವಾದರೂ ಏಕೆ? ಅಮ್ಮ ಹೇಳಿದಾಗ ಹೋಗಿ ತರಕಾರಿ ತರಲು ಯಾರೊಬ್ಬರಿಗೂ ಏನೂ ಅನ್ನಿಸುತ್ತಿರಲಿಲ್ಲ, ಆದರೆ ಶಾಲೆಯಿಂದ ಮನೆಗೆ ತರಕಾರಿ ಒಯ್ಯುವುದು ವಿಚಿತ್ರವೆನಿಸಿತ್ತು.

ಕೋಸನ್ನು ಬಹುಮಾನವಾಗಿ ಪಡೆದಿದ್ದ ದಪ್ಪನೆಯ ಹುಡುಗನೊಬ್ಬನಿಗೆ ಅದನ್ನು ಏನು ಮಾಡಬೇಕೆಂದು ತಿಳಿಯಲಿಲ್ಲ.

"ನಾನಿದನ್ನು ಕೊಂಡೊಯ್ಯುವುದನ್ನು ಯಾರಾದರೂ ನೋಡುವುದು ನನಗಿಷ್ಟವಿಲ್ಲ", "ನಾನಿದನ್ನು ಎಸೆದೇ ಹೋಗುತ್ತೇನೆ."

ಮಕ್ಕಳ ದೂರುಗಳು ಮುಖ್ಯೋಪಾಧ್ಯಾಯರಿಗೆ ಕೇಳಿಸಿರಬೇಕು. ಕ್ಯಾರೆಟ್ಟು ಮೂಲಂಗಿಗಳನ್ನು ಹಿಡಿದಿದ್ದ ಮಕ್ಕಳತ್ತ ನಡೆದರು.

"ಏನಾಯಿತು? ನಿಮಗೆ ಇವೆಲ್ಲ ಬೇಡವಾ?" ಅವರು ಕೇಳಿದರು. ನಂತರ ಮುಂದುವರೆಸಿದರು, "ಈದಿನ ರಾತ್ರಿ ನಿಮಗೆ ಇವುಗಳಿಂದ ಅಡಿಗೆ ಮಾಡಿ ಬಡಿಸಲು ಅಮ್ಮನಿಗೆ ಕೇಳಿ. ಇವು ನೀವೇ ಸಂಪಾದಿಸಿದ ತರಕಾರಿಗಳು. ನಿಮ್ಮ ಸ್ವಂತ ಪ್ರಯತ್ನದಿಂದ ಇವತ್ತು ನಿಮ್ಮ ಮನೆಯವರಿಗೆಲ್ಲ ನೀವು ಊಟ ಕೊಡುತ್ತಿದ್ದೀರಿ. ಅದು ಹೇಗಿರಬಹುದು? ಖಂಡಿತಾ ಅದು ತುಂಬಾ ರುಚಿಯಾಗಿರುತ್ತೆಂದು ನಾನು ಹೇಳಬಲ್ಲೆ."

ಹೌದು, ಅವರಂದದ್ದು ನಿಜವೇ. ಜೀವನದಲ್ಲಿ ತೊತ್ತೊ-ಚಾನ್ ತನ್ನ ಮನೆಯವರಿಗೆ ರಾತ್ರಿ ಊಟಕ್ಕೆ ತನ್ನ ಕಡೆಯಿಂದ ಏನನ್ನಾದರೂ ಒದಗಿಸಿದ್ದಳು.

"ಅಮ್ಮನಿಗೆ ಚಂದ ಮಸಾಲೆ ಹಾಕಿ ಗೆಣಸು ತಿನಿಸು ಮಾಡಲು ಹೇಳುತ್ತೇನೆ" ಅವಳು ಮುಖ್ಯೋಪಾಧ್ಯಾಯರಿಗೆಂದಳು. "ಈರುಳ್ಳಿ ಹಾಕಿ ಏನು ಮಾಡಬಹುದೆಂಬುದು ನನಗೆ ಹೊಳೆಯುತ್ತಿಲ್ಲ."

ಅನಂತರ ಎಲ್ಲ ಮಕ್ಕಳೂ ತಾವು ಅಮ್ಮನನ್ನು ಮಾಡಲು ಕೇಳುವ ಅಡುಗೆಯ ಬಗ್ಗೆ ಮುಖ್ಯೋಪಾಧ್ಯಾಯರಿಗೆ ವಿವರಿಸತೊಡಗಿದರು.

"ಒಳ್ಳೇದು. ಈಗ ನಿಮಗೆಲ್ಲಾ ಏನು ಮಾಡಬೇಕೆಂದು ತಿಳಿಯಿತಲ್ಲಾ" ಸಂತೋಷದಿಂದ ನಗೆಸೂಸುತ್ತಾ ಹೇಳಿದರು. ಅವರ ಕೆನ್ನೆಗಳು ಕೆಂಪಾಗಿದ್ದವು. ಮಕ್ಕಳು ತಮ್ಮ ಮನೆಯವರೊಡನೆ ಕ್ರೀಡಾದಿನದ ಬಗ್ಗೆ ಮಾತನಾಡುತ್ತಾ ಊಟ ಮಾಡುವುದನ್ನು ಅವರು ಕಲ್ಪಿಸಿಕೊಳ್ಳುತ್ತಿದ್ದಿರಬೇಕು.

ಮೊದಲ ಬಹುಮಾನಗಳಿಂದ ತುಂಬಿಹೋಗಿರಬಹುದಾದ ತಾಕಾಹಾಶಿಯ ಊಟದ ಟೇಬಲನ್ನು ಆತ ವಿಶೇಷವಾಗಿ ಚಿತ್ರಿಸಿಕೊಳ್ಳುತ್ತಿರುವುದರಲ್ಲಿ ಅನುಮಾನವೇ ಇರಲಿಲ್ಲ. ಆತ ತನ್ನ ಆಕಾರದ ಬಗ್ಗೆ ಮತ್ತು ತಾನಿನ್ನು ಬೆಳೆಯಲಾರೆನೆಂಬ ಕೀಳರಿಮೆ ಬೆಳೆಸಿಕೊಳ್ಳುವ ಮುನ್ನ ಆ ಮೊದಲ ಬಹುಮಾನಗಳನ್ನು ಸಂಪಾದಿಸಿದ ಹೆಮ್ಮೆ ಆತನಲ್ಲಿ ಉಳಿಯಲಿ ಎಂದವರು ಆಶಿಸುತ್ತಿದ್ದರು. ಅಲ್ಲದೆ, ತಾಕಾಹಾಶಿಯಂಥವರು ಮುಂದೆ ಬರಲೆಂದೇ ಮುಖ್ಯೋಪಾಧ್ಯಾಯರು ಈ ರೀತಿಯ ಆಟಗಳನ್ನು ರೂಪಿಸಿದ್ದರೋ ಏನೋ ಯಾರಿಗೆ ಗೊತ್ತು!

## ಕವಿ ಇಸ್ಸಾ

ಮಕ್ಕಳು ಮುಖ್ಯೋಪಾಧ್ಯಾಯರನ್ನು "ಇಸ್ಸಾ ಕೊಬಾಯಾಶಿ" ಎಂದು ಕರೆಯಲು ತುಂಬಾ ಇಷ್ಟಪಡುತ್ತಿದ್ದರು. ಹಾಗೆ ಪದ್ಯವನ್ನೂ ಕಟ್ಟಿದ್ದರು.

ಇಸ್ಸಾ ಕೊಬಾಯಾಶಿ
ನಮ್ಮ ಅಜ್ಜ ಇಸ್ಸಾ
ಅವರದು ಬೋಳುತಲೆ.

ಮುಖ್ಯೋಪಾಧ್ಯಾಯರ ಮನೆತನದ ಹೆಸರು 'ಕೊಬಾಯಾಶಿ'. ಅಲ್ಲದೆ ಹತ್ತೊಂಬತ್ತನೇ ಶತಮಾನದ ಹೆಸರಾಂತ ಕವಿ ಇಸ್ಸಾ ಕೊಬಾಯಾಶಿಯ ಹಾಯಿಕುಗಳನ್ನು ಅವರು ತುಂಬಾ ಮೆಚ್ಚುತ್ತಿದ್ದರು. ಯಾವಾಗಲೂ ಆತನ ಹಾಯಿಕುಗಳನ್ನು ಅವರು ಗುನುಗುತ್ತಿರುವರು. ಹೀಗಾಗಿ ಮಕ್ಕಳಿಗೆಲ್ಲಾ ಇಸ್ಸಾ ಕೊಬಾಯಾಶಿ ತಮ್ಮ ಮುಖ್ಯೋಪಾಧ್ಯಾಯರಾದ ಸೊಸಾಕು ಕೊಬಾಯಾಶಿಯಷ್ಟೇ ಆಪ್ತರೆನಿಸುತ್ತಿದ್ದರು.

ಇಸ್ಸಾ ಕೊಬಾಯಾಶಿಯ ಹಾಯಿಕುಗಳು ತುಂಬಾ ನೈಜವಾಗಿದ್ದು ಬದುಕಿನ ತೀರಾ

ಸಾಧಾರಣ ವಿಷಯಗಳನ್ನು ಸುಂದರವಾಗಿ ಚಿತ್ರಿಸುತ್ತಿದ್ದುದೇ ಮುಖ್ಯೋಪಾಧ್ಯಾಯರು ಅವನನ್ನು ಅಷ್ಟೊಂದು ಇಷ್ಟಪಡಲು ಕಾರಣ.

ಸಾವಿರಾರು ಹಾಯಿಕು ಕವಿಗಳ ನಡುವೆ ಇಸ್ಸಾ ಅವರು ತಮ್ಮದೇ ಶೈಲಿಯ ಛಾಪನ್ನು ಮೂಡಿಸಿದ್ದರು. ಅನುಕರಣೆ ಸಾಧ್ಯವಿಲ್ಲಂಥ ಅನನ್ಯ ಹಾಯಿಕು ಪ್ರಪಂಚವನ್ನೇ ಸೃಷ್ಟಿಸಿದ್ದರು. ಅವುಗಳಲ್ಲಿನ ಮಗುವಿನ ಮುಗ್ಧತೆ, ಸರಳತೆಯನ್ನು ಮುಖ್ಯೋಪಾಧ್ಯಾಯರು ತುಂಬಾ ಮೆಚ್ಚಿಕೊಂಡಿದ್ದರು. ಹೀಗಾಗಿ ಸಮಯ ಸಿಕ್ಕಾಗಲೆಲ್ಲ ಮಕ್ಕಳಿಗೆ ಇಸ್ಸಾನ ಸಾಲುಗಳನ್ನು ಕಲಿಸುತ್ತಿದ್ದರು.

ಬಡಕಲು ಕಪ್ಪೆಯೇ
ಶರಣಾಗದಿರು
ನಿನ್ನೊಡನಿದ್ದಾನೆ ಇಸ್ಸಾ !

ಗುಬ್ಬಚ್ಚಿ ಮರಿಗಳೇ !
ದಾರಿಬಿಡಿ, ದಾರಿಬಿಡಿ
ಅಂತಿಂಥಾ ಕುದುರೆಯಲ್ಲಿದು !

ಬಿಟ್ಟುಬಿಡು ಆ ನೊಣವನ್ನು
ಕೈ-ಕಾಲು ತಿರುಚುತ್ತಾ
ದಯಾಭಿಕ್ಷೆ ಬೇಡುತಿದೆ !

ಒಮ್ಮೆ ಮುಖ್ಯೋಪಾಧ್ಯಾಯರು ಒಂದು ಹಾಯಿಕುಗೆ ರಾಗ ಹೊಂದಿಸಿದ್ದರು. ನಂತರ ಎಲ್ಲರೂ ಅದನ್ನು ಹಾಡಿದರು.

ಸೊಸಾಕು ಕೊಬಾಯಾಶಿ



ನನ್ನೊಡನಾಡು ಬಾ ಅನಾಥ ಕಂದನೇ



ತಾಯಿಲ್ಲದ ಪಕ್ಷಿ ನೀ

ಪಠ್ಯಕ್ರಮದಲ್ಲಿ ಇರದಿದ್ದರೂ ಮುಖ್ಯೋಪಾಧ್ಯಾಯರು ಹಾಯಿಕು ತರಗತಿಯೊಂದನ್ನು ಆಗಾಗ ನಡೆಸುತ್ತಲೇ ಇರುತ್ತಿದ್ದರು.

ತೊತ್ತೊ-ಚಾನ್ ಮೊದಲು ರಚಿಸಿದ ಹಾಯಿಕು ಜನಪ್ರಿಯ ಕಾಮಿಕ್‌ನಲ್ಲಿ

ಓದಿದ್ದ ಅವಳ ಅಚ್ಚುಮೆಚ್ಚಿನ ಪಾತ್ರವಾದ ನೊರಾಕುರೋ ಕುರಿತಾಗಿತ್ತು. ಕಪ್ಪು ಬಣ್ಣದ ಬೀದಿ ನಾಯಿ ನೊರಾಕುರೋ ಸೈನ್ಯ ಸೇರಿ ಏಳುಬೀಳುಗಳ ನಡುವೆ ಮುಂಬಡ್ತಿ ಪಡೆದ ಕತೆ ಅದು.

ನೊರಾಕುರೋ ಚಿತ್ರಕಥೆಗಳು ಹುಡುಗರ ಪತ್ರಿಕೆಯೊಂದರಲ್ಲಿ ಅಚ್ಚಾಗುತ್ತಿದ್ದುವು. ತೊತ್ತೊ-ಚಾನ್ ಹೀಗೆ ಬರೆದಿದ್ದಳು:

ದಿಕ್ಕಿಲ್ಲದ ಕಪ್ಪು ನಾಯಿ
ಹೊರಟಿತೀಗ ಯೂರೋಪಿನತ್ತ
ಸೇನೆಯಿಂದ ಮುಕ್ತಿಹೊಂದಿ.

ಹಾಯಿಕು ಓದಿದ ಮುಖ್ಯೋಪಾಧ್ಯಾಯರು "ನಿನ್ನದೇ ಆಲೋಚನೆಗಳಿಂದ ಪ್ರಾಮಾಣಿಕವಾದ, ನೇರವಾದ ಹಾಯಿಕುಗಳನ್ನು ರಚಿಸಲು ಪ್ರಯತ್ನಿಸು" ಎಂದು ಹೇಳಿದ್ದರು.

ತೊತ್ತೊ-ಚಾನ್ ಬರೆದದ್ದನ್ನು ಹಾಯಿಕು ಎಂದು ಹೇಳಲಾಗುವುದಿಲ್ಲ. ಆದರೆ ಆ ದಿನಗಳಲ್ಲಿ ಅವಳು ಯಾವುದರಿಂದ ಪ್ರಭಾವಿತಳಾಗಿದ್ದಳೆಂಬುದನ್ನು ಇದು ತೋರಿಸುತ್ತಿತ್ತು. 5-7-5 ರ ಪ್ರಾಸ ಅವಳ ಹಾಯಿಕುವಿನಲ್ಲಿ ಇರಲಿಲ್ಲ. ಅವಳದ್ದು 5-7-7 ರ ಪ್ರಾಸ. ಹೀಗಾಗಿ ತನ್ನ ಪ್ರಾಸವೂ ಅಡ್ಡಿಯಿಲ್ಲ ಅಂದುಕೊಂಡಿದ್ದಳು.

ಕುಹೋನ್‌ಬುತ್ಸು ದೇವಸ್ಥಾನಕ್ಕೆ ವಾಕಿಂಗ್ ಹೋಗುವಾಗ, ಅಥವಾ ಮಳೆ ಏನಾದರೂ ಬರುತ್ತಿದ್ದು ಹೊರಗೆ ಆಡಲಾರದೆ ಅವರೆಲ್ಲಾ ಸಭಾಂಗಣದಲ್ಲಿ ಸೇರಿಕೊಂಡಾಗ ತೊಮೊಯೆದ ಇಸ್ಸಾ ಕೊಬಾಯಾಶಿ ಇವರಿಗೆ ಹಾಯಿಕು ಬಗ್ಗೆ ಹೇಳುತ್ತಿದ್ದರು. ಬದುಕು ಮತ್ತು ನಿಸರ್ಗದ ಬಗ್ಗೆ ವಿಚಾರಗಳನ್ನು ಹೊಸೆಯಲು ಅವರು ಹಾಯಿಕು ಬಳಸುತ್ತಿದ್ದರು.

ಇಸ್ಸಾನ ಕೆಲವು ಹಾಯಿಕುಗಳು ತೊಮೊಯೆದ ಮಕ್ಕಳಿಗೆಂದೇ ವಿಶೇಷವಾಗಿ ಬರೆದಂಥವು:

ಹಿಮ ಕರಗಿದಾಗ
ಇದ್ದಕ್ಕಿದ್ದಂತೆ ಇಡೀ ಊರಿನ ತುಂಬಾ
ಮಕ್ಕಳೇ ಮಕ್ಕಳು !

## ನಿಗೂಢ ರಹಸ್ಯ

ತೊತ್ತೊ-ಚಾನ್‌ಳಿಗೆ ಜೀವನದಲ್ಲೇ ಮೊದಲ ಬಾರಿ ಹಣ ಸಿಕ್ಕಿತ್ತು. ಶಾಲೆಯಿಂದ ಮನೆಗೆ ಹೋಗುವಾಗ ರೈಲಿನಲ್ಲಿ ಇದು ಸಿಕ್ಕಿತ್ತು. ಜಿಯುಗಾವೋಕದಲ್ಲಿ ಅವಳು ಎಂದಿನಂತೆ ಓಯಿಮಾಚಿ ರೈಲನ್ನು ಹತ್ತಿಕೊಂಡಳು. ರೈಲು ಮುಂದಿನ ನಿಲ್ದಾಣವನ್ನು ತಲುಪುವ ಮುನ್ನ ಒಂದು ಮೊನಚಾದ ತಿರುವಿತ್ತು. ಅಲ್ಲಿ ರೈಲು ವಾಲಿಕೊಳ್ಳುತ್ತಿತ್ತು. ಹಾಗಾಗುವಾಗಲೆಲ್ಲ ತೊತ್ತೊ-ಚಾನ್ ಕಾಲನ್ನು ಗಟ್ಟಿಯಾಗಿ ಅವುಚಿ

ನಿಂತುಕೊಳ್ಳುವಳು. ಅವಳು ರೈಲು ಚಲಿಸುವ ದಿಕ್ಕಿನತ್ತ ಮುಖಮಾಡಿ ಹಿಂದುಗಡೆಯ ಬಲಗಡೆ ಬಾಗಿಲಲ್ಲೇ ಯಾವಾಗಲೂ ನಿಂತುಕೊಳ್ಳುತ್ತಿದ್ದಳು. ಏಕೆಂದರೆ ಅವಳು ಇಳಿಯುವ ನಿಲ್ದಾಣದಲ್ಲಿ ಪ್ಲಾಟ್‌ಫಾರಂ ಆ ಕಡೆಗೆ ಬರುತ್ತಿತ್ತು. ಮತ್ತು ಆ ಬಾಗಿಲೇ ಅತ್ಯಂತ ಹತ್ತಿರದ ಬಾಗಿಲಾಗಿತ್ತು.

ಹಿಂದೊಂದು ದಿನ ತಿರುವಿನಲ್ಲಿ ಹೋಗುತ್ತಾ ರೈಲು ಎಂದಿನಂತೆ ವಾಲಿಕೊಂಡಾಗ ತನ್ನ ಕಾಲಿನ ಬಳಿ ಹಣದಂತೆ ಕಾಣುವ ಏನೋ ಬಿದ್ದಿರುವುದನ್ನು ತೊತ್ತೊ-ಚಾನ್ ಕಂಡಳು. ಹೀಗೆ ಹಣದಂತೆ ಕಂಡ ಏನನ್ನೋ ಎತ್ತಿಕೊಂಡು ನೋಡಿದಾಗ ಅದು ಗುಂಡಿಯಾಗಿತ್ತು. ಆದ್ದರಿಂದ ಈಗ ಸರಿಯಾಗಿ ನೋಡಬೇಕೆಂದುಕೊಂಡಳು. ರೈಲು ನೆಟ್ಟಗೆ ಹೋಗತೊಡಗಿದಾಗ ಆದಷ್ಟು ಬಾಗಿ ಅದನ್ನು ಸರಿಯಾಗಿ ನೋಡಿದಳು. ನಿಜವಾಗಿಯೂ ಅದು ಹಣವೇ ಆಗಿತ್ತು. ಐದು ಸೆನ್ ನಾಣ್ಯ. ಯಾರೋ ಅಕ್ಕಪಕ್ಕದವರು ಬೀಳಿಸಿಕೊಂಡಿರಬೇಕು ಅಥವಾ ರೈಲು ವಾಲಿಕೊಂಡಾಗ ಅದು ಉರುಳುತ್ತಾ ತನ್ನ ಬಳಿ ಬಂದಿರಬೇಕೆಂದುಕೊಂಡಳು. ಆದರೆ ಯಾರೂ ಅವಳ ಬಳಿ ನಿಂತಿರಲಿಲ್ಲ.

ಈಗೇನು ಮಾಡುವುದೆಂದು ಅವಳಿಗೆ ಚಿಂತೆಗಿಟ್ಟುಕೊಂಡಿತು. ದುಡ್ಡು ಸಿಕ್ಕಿದರೆ ಪೋಲೀಸಿನವರಿಗೆ ಕೊಟ್ಟುಬಿಡಬೇಕೆಂದು ಯಾರೋ ಹೇಳುತ್ತಿದ್ದುದು ಅವಳಿಗೆ ನೆನಪಾಯಿತು. ಆದರೆ ರೈಲಿನಲ್ಲಿ ಪೋಲಿಸಿನವರು ಇರಲಿಲ್ಲ.

ಆಗ, ಕಂಡಕ್ಟರ್‌ನ ಕಂಪಾರ್ಟ್‌ಮೆಂಟ್‌ನಿಂದ ಕಂಡಕ್ಟರ್ ತೊತ್ತೊ-ಚಾನಿದ್ದ ಡಬ್ಬಿಗೆ ಬಂದನು. ತೊತ್ತೊ-ಚಾನ್ ತನಗೇ ಗೊತ್ತಿಲ್ಲದಂತೆ ಐದು ಸೆನ್ ನಾಣ್ಯದ ಮೇಲೆ ತನ್ನ ಬಲಪಾದ ಊರಿದಳು. ಕಂಡಕ್ಟರ್‌ನಿಗೆ ಅವಳು ಪರಿಚಯವಿದ್ದುದರಿಂದ ನೋಡಿ ನಸುನಕ್ಕನು. ಆದರೆ ತನ್ನ ಬಲಪಾದದ ಕೆಳಗಿರುವುದರ ಬಗ್ಗೆ ಅಪರಾಧೀ ಮನೋಭಾವವಿದ್ದುದರಿಂದ ಅವಳಿಗೆ ಮುಕ್ತವಾಗಿ ಮುಗುಳ್ನಗಲು ಸಾಧ್ಯವಾಗಲಿಲ್ಲ. ಸುಮ್ಮನೆ ಸಕ್ಕಂತೆ ಮಾಡಿದಳು. ರೈಲು ಊಕಯಾಮ ನಿಲ್ದಾಣವನ್ನು ತಲುಪಿ ಎಡಗಡೆಯ ಬಾಗಿಲುಗಳು ತೆಗೆದುಕೊಂಡವು. ಮುಂದಿನ ನಿಲ್ದಾಣವೇ ತೊತ್ತೊ-ಚಾನ್ ಇಳಿಯಬೇಕಾದ ನಿಲ್ದಾಣ. ಮಾಮೂಲಿನಂತೆ ಜನ ಇಳಿದು ಹತ್ತುವಾಗ ತೊತ್ತೊ-ಚಾನ್ ಅತ್ತಿತ್ತ ತಳ್ಳಲ್ಪಟ್ಟರೂ ತನ್ನ ಬಲಪಾದವನ್ನು ಕದಲದಂತೆ ಗಟ್ಟಿಯಾಗಿ ಊರಿ ನಿಂತಿದ್ದಳು. ಹೀಗೆ ಮಾಡುವಾಗಲೇ ಅವಳಿಗೆ ಉಪಾಯ ಹೊಳೆಯಿತು. ರೈಲಿನಿಂದ ತಾನು ಇಳಿಯುವಾಗಲೇ ಹಣ ತೆಗೆದುಕೊಂಡು ಪೋಲಿಸಿನವರಿಗೆ ಕೊಡುವುದಾಗಿ ತೀರ್ಮಾನಿಸಿಕೊಂಡಳು. ಹಾಗೇ ಮತ್ತೊಂದು ಆಲೋಚನೆ ಸುಳಿಯಿತು. ಯಾರಾದರೂ ದೊಡ್ಡವರು ಕಾಲಡಿಯಿಂದ ಹಣ ತೆಗೆಯುವುದನ್ನು ನೋಡಿದರೆ ಇವಳನ್ನು ಕಳ್ಳಿ ಎಂದುಕೊಳ್ಳಬಹುದು. ಆ ದಿನಗಳಲ್ಲಿ ಐದು ಸೆನ್‌ಗೆ ಕ್ಯಾರಮಲ್‌ನ ಒಂದು ಪೊಟ್ಟಣವನ್ನು ಇಲ್ಲವೇ ಚಾಕಲೇಟಿನ ಒಂದು ಉದ್ದನೆಯ ಬಾರು ಕೊಳ್ಳಬಹುದಾಗಿತ್ತು. ಹೀಗಾಗಿ ತೊತ್ತೊ-ಚಾನ್ ಮಟ್ಟಿಗಂತೂ ಅದು ದೊಡ್ಡ ಮೊತ್ತ. ಅವಳು ದಿಗಿಲುಗೊಂಡಳು.

"ಹೀಗೆ ಮಾಡುತ್ತೇನೆ" ತನ್ನಷ್ಟಕ್ಕೆ ಅಂದುಕೊಂಡಳು. "ನನ್ನ ಹಣ

ಬಿದ್ದುಹೋಗಿದೆ, ಎತ್ತಿಕೊಳ್ಳಬೇಕು ಎಂದು ಜೋರಾಗಿ ಹೇಳುತ್ತೇನೆ. ಜನ ಆಗ ಅದು ನನ್ನದೇ ಹಣವೆಂದುಕೊಳ್ಳುತ್ತಾರೆ."

ಆದರೆ ತಕ್ಷಣ ಇನ್ನೊಂದು ಸಮಸ್ಯೆ ಎದ್ದು ಬಂತು. "ನಾನು ಹಾಗೆ ಹೇಳಿ ಎಲ್ಲರೂ ನನ್ನತ್ತ ನೋಡುವಾಗ ಯಾರಾದರೂ 'ಅದು ನನ್ನ ಹಣ' ಎಂದು ಹೇಳಿ ಬಿಟ್ಟರೆ ಏನು ಮಾಡುವುದು ?"

ಅನೇಕ ಉಪಾಯಗಳು ಸುಳಿದು ಮಾಯವಾದ ನಂತರ ಒಂದು ತೀರ್ಮಾನಕ್ಕೆ ಬಂದಳು. ತನ್ನ ನಿಲ್ದಾಣ ಬಂದಾಗ ಷೂಲೇಸನ್ನು ಕಟ್ಟಿಕೊಳ್ಳುವವಳಂತೆ ನಿಧಾನಕ್ಕೆ ಬಗ್ಗಿ ದುಡ್ಡನ್ನು ಗುಟ್ಟಾಗಿ ಎತ್ತಿಕೊಳ್ಳಲು ತೀರ್ಮಾನಿಸಿದಳು. ಈ ಉಪಾಯ ಫಲಿಸಿತು. ಐದು ಸೆನ್ ನಾಣ್ಯದ ಜತೆ ಬೆವರುತ್ತಾ ಪ್ಲಾಟ್‌ಫಾರಂ ಮೇಲೆ ಬಂದಿಳಿದಾಗ ಅವಳು ಸುಸ್ತಾಗಿ ಬಿಟ್ಟಿದ್ದಳು. ಪೋಲಿಸ್ ಠಾಣೆ ಬಹಳ ದೂರವಿತ್ತಾಗಿ ಅಲ್ಲಿಯವರೆಗೂ ಹೋಗಿ ಹಣ ಕೊಟ್ಟು ಮನೆಗೆ ಹೋಗುವ ವೇಳೆಗೆ ತುಂಬಾ ತಡವಾಗಿ ಹೋಗಿ ಅಮ್ಮ ಗಾಬರಿಯಾಗುತ್ತಾಳೆ, ಸ್ಟೇಷನ್ನಿನ ಮೆಟ್ಟಿಲು ಇಳಿಯುವಾಗಲೂ ಏನು ಮಾಡುವುದೆಂಬ ಯೋಚನೆಯೇ ತಲೆ ತುಂಬಾ. ಕೊನೆಗೆ ಒಂದು ಗಟ್ಟಿ ತೀರ್ಮಾನಕ್ಕೆ ಬಂದಳು.

"ನಾನಿದನ್ನು ಒಂದು ಗುಟ್ಟಾದ ಜಾಗದಲ್ಲಿ ಇಡುತ್ತೇನೆ. ನಾಳೆ ಅದನ್ನು ಶಾಲೆಗೆ ಒಯ್ದು ಏನು ಮಾಡಬೇಕೆಂದು ಎಲ್ಲರ ಅಭಿಪ್ರಾಯ ಕೇಳುತ್ತೇನೆ. ಹೇಗಿದ್ದರೂ ಇದನ್ನು ಅವರಿಗೆ ತೋರಿಸಲೇಬೇಕಲ್ಲ. ಯಾಕೆಂದರೆ ಇದುವರೆಗೂ ಯಾರಿಗೂ ಹೀಗೆ ಹಣ ಸಿಕ್ಕಿರಲಾರದು."

ಎಲ್ಲಿ ಹಣ ಅಡಗಿಸಿಡುವುದೆಂದು ಚಿಂತಿಸಿದಳು. ಮನೆಗೆ ಕೊಂಡೊಯ್ದರೆ ಅಮ್ಮ ನೂರು ಪ್ರಶ್ನೆ ಕೇಳುವುದರಿಂದ ಅದನ್ನು ಅಡಗಿಸಿಡಲೇಬೇಕಾಗಿತ್ತು.

ಸ್ಟೇಷನ್ನಿನ ಬಳಿಯಲ್ಲೇ ಒಂದು ಪೊದೆಯೊಳಕ್ಕೆ ನುಗ್ಗಿದಳು. ಅವಳನ್ನು ಅಲ್ಲಿ ಯಾರೂ ನೋಡುವುದು ಸಾಧ್ಯವಿರಲಿಲ್ಲ. ಅಲ್ಲದೆ ಅಲ್ಲಿಗೆ ಯಾರೂ ಬರುವ ಸಾಧ್ಯತೆ ಇಲ್ಲದ್ದರಿಂದ ಹಣ ಅಲ್ಲಿ ಸುರಕ್ಷಿತವಾಗಿರುತ್ತಿತ್ತು. ಒಂದು ಕಡ್ಡಿಯಿಂದ ಸಣ್ಣ ಗುಂಡಿಯನ್ನು ತೋಡಿ ಅಮೂಲ್ಯವಾದ ಐದು ಸೆನ್ ನಾಣ್ಯವನ್ನು ಅದರಲ್ಲಿ ಇಟ್ಟಳು. ಮೇಲೆ ಮಣ್ಣು ಮುಚ್ಚಿದಳು. ಒಂದು ಒರಟು ಕಲ್ಲನ್ನು ಎತ್ತಿ ಅದರ ಮೇಲೆ ಗುರುತಿಗೆ ಇರಿಸಿದಳು. ಅಲ್ಲಿಂದ ರಭಸವಾಗಿ ಮನೆಕಡೆ ಓಡಿದಳು.

ಸಾಮಾನ್ಯವಾಗಿ ತೊತ್ತೊ-ಚಾನ್ ರಾತ್ರಿ ಅಮ್ಮ "ಇನ್ನು ಮಲಗು" ಎಂದು ಹೇಳುವವರೆಗೂ ಶಾಲೆಯ ಬಗ್ಗೆ ಮಾತನಾಡುತ್ತಲೇ ಇರುವಳು. ಆದರೆ ಆ ದಿನ ಹೆಚ್ಚು ಮಾತನಾಡದೆ ತೆಪ್ಪಗೆ ಮಲಗಿಕೊಂಡಳು.

ಮರುದಿನ ಏನೋ ಬಹುಮುಖ್ಯ ಕೆಲಸವಿರುವ ಯೋಚನೆಯಲ್ಲೇ ಹಾಸಿಗೆಯಿಂದೆದ್ದಳು. ತಕ್ಷಣ ಗುಪ್ತನಿಧಿಯ ನೆನಪಾಗಿ ರೋಮಾಂಚನಗೊಂಡಳು.

ಅಂದು ಮನೆಯನ್ನು ಸ್ವಲ್ಪ ಮುಂಚಿತವಾಗೇ ಬಿಟ್ಟು ರಾಕಿಯೊಡನೆ ಪೊದೆಯತ್ತ ಓಡಿದಳು.

"ಇಲ್ಲಿದೆ, ಇಲ್ಲಿದೆ."

ಅವಳು ಗುರುತಿಗೆಂದು ಇಟ್ಟಿದ್ದ ಕಲ್ಲು ಹಾಗೇ ಇತ್ತು.

"ನಿನಗೆ ಏನೋ ತಮಾಷೆ ತೋರಿಸ್ತೇನೆ ನೋಡು" ಎಂದು ರಾಕಿಗೆಂದು ಕಲ್ಲನ್ನು ತೆಗೆದು ಉಪಾಯವಾಗಿ ಮಣ್ಣು ಅಗೆಯತೊಡಗಿದಳು. ಆದರೆ ಏನಾಶ್ಚರ್ಯ ! ಐದು ಸೆನ್ ನಾಣ್ಯ ಮಾಯ ! ಯಾರಾದರೂ ತಾನು ಅಡಗಿಸಿಡುವುದನ್ನು ಕಂಡರಾ ? ಎಂದು ಯೋಚಿಸಿದಳು. ಅಥವಾ ಕಲ್ಲೇ ಜರುಗಿಬಿಟ್ಟಿತ್ತಾ ? ಸುತ್ತಮುತ್ತೆಲ್ಲ ಅಗೆದು ನೋಡಿದಳು. ಆದರೆ ನಾಣ್ಯ ಮಾತ್ರ ಎಲ್ಲೂ ಸಿಗಲಿಲ್ಲ. ಶಾಲೆಯಲ್ಲಿ ಮಕ್ಕಳಿಗೆ ತೋರಿಸಲು ಇಲ್ಲದೆ ಹೋಯಿತಲ್ಲಾ ಎಂದು ಅವಳಿಗೆ ಭಯಂಕರ ನಿರಾಸೆಯಾಯಿತು. ಅದಕ್ಕಿಂತಲೂ ಹೆಚ್ಚಾಗಿ ಅದು ಮಾಯವಾದ ನಿಗೂಢತೆ ಬಗ್ಗೆ ಅವಳಿಗೆ ತಲೆ ಕೆಟ್ಟು ಹೋಯಿತು.

ಅನಂತರ, ಆ ಕಡೆ ಹೋಗುವಾಗಲೆಲ್ಲಾ ಆ ಜಾಗವನ್ನು ನೋಡುತ್ತಿದ್ದಳು. ಆದರೆ ಆ ಐದು ಸೆನ್ ನಾಣ್ಯವನ್ನು ಅವಳು ಮತ್ತೆಂದೂ ನೋಡಲೇ ಇಲ್ಲ.

"ಬಹುಶಃ ಇಲಿ ಕಚ್ಚಿಕೊಂಡು ಹೋಯಿತೇನೋ ?" ಎಂದು ಯೋಚಿಸುವಳು. ಅಥವಾ "ನಾ ಕಂಡದೆಲ್ಲಾ ಕನಸಾ ?" ಅಥವಾ "ನಾ ಅಡಗಿಸಿಡುವುದನ್ನು ದೇವರು ಕಂಡಿರಬೇಕು." ಅವಳೆಷ್ಟೇ ಯೋಚಿಸಿದರೂ ರಹಸ್ಯ ಮಾತ್ರ ಹೊರಬೀಳಲಿಲ್ಲ. ಆ ರಹಸ್ಯ ಎಂದೆಂದಿಗೂ ಮರೆಯಲಾಗದ ರಹಸ್ಯವಾಗೇ ಉಳಿಯಿತು.

## ಕೈಗಳಿಂದ ಮಾತನಾಡುವುದು

ಒಂದು ಮಧ್ಯಾಹ್ನ ಜಿಯುಗಾವೋಕಾದ ಸ್ಟೇಷನ್ ಗೇಟಿನ ಬಳಿ ತೊತ್ತೊ-ಚಾನ್‌ಳಿಗಿಂತ ಸ್ವಲ್ಪ ದೊಡ್ಡವರಾದ ಇಬ್ಬರು ಹುಡುಗರು ಮತ್ತು ಒಬ್ಬ ಹುಡುಗಿ ನಿಂತಿದ್ದರು. ಅವರನ್ನು ನೋಡಿದರೆ "ಕಲ್ಲು, ಕಾಗದ, ಕತ್ತರಿ"ಯ ಆಟ ಆಡುತ್ತಿರುವಂತೆ ಕಾಣುತ್ತಿತ್ತು. ಆದರೆ ಅವರು ತಮ್ಮ ಕೈಗಳಿಂದ ಅಸಂಖ್ಯಾತ ಸಂಜ್ಞೆಗಳನ್ನು ಮಾಡುತ್ತಿರುವುದನ್ನು ಅವಳು ಗಮನಿಸಿದಳು. ತುಂಬಾ ತಮಾಷೆಯೆನಿಸಿತು. ಅವರನ್ನು ಸರಿಯಾಗಿ ನೋಡಲೆಂದು ಹತ್ತಿರ ಹೋದಳು. ಒಬ್ಬನು ಕೈಗಳಿಂದ ಏನೇನೋ ಸಂಜ್ಞೆಗಳನ್ನು ಮಾಡುವನು. ಅವನನ್ನೇ ಗಮನಿಸುತ್ತಿರುವ ಇನ್ನೊಬ್ಬ ತಕ್ಷಣ ಇನ್ನೂ ಅನೇಕ ಸಂಜ್ಞೆಗಳನ್ನು ಮಾಡಿದ ನಂತರ ಎಲ್ಲರೂ ಬಿದ್ದು ಬಿದ್ದು ನಗುವರು. ಹೆಚ್ಚು ಸದ್ದಿಲ್ಲದೆ ಅವರು ತಮ್ಮಷ್ಟಕ್ಕೇ ಸಂತೋಷವಾಗಿರುವಂತೆ ಕಂಡುಬರುತ್ತಿತ್ತು. ಅವರನ್ನೇ ಕೊಂಚ ಸಮಯ ಗಮನಿಸುತ್ತಿದ್ದ ತೊತ್ತೊ-ಚಾನ್‌ಳಿಗೆ ಅವರು ಕೈಗಳಿಂದ ಮಾತನಾಡುತ್ತಿರುವರೆಂದು ಅರ್ಥವಾಯಿತು.

"ನನಗೂ ನನ್ನ ಕೈಗಳಿಂದ ಮಾತನಾಡಲು ಬಂದಿದ್ದರೆ !" ಎಂದುಕೊಂಡು ಅವರ ಬಗ್ಗೆ ಅಸೂಯೆ ಪಟ್ಟಳು. ಅವರ ಜತೆ ಸೇರಿಕೊಳ್ಳಲೇ ಎಂದು ಯೋಚಿಸಿದಳು. ಆದರೆ ಕೈಗಳಿಂದ ಅವರೊಡನೆ ಹೇಗೆ ಮಾತನಾಡಬೇಕೆಂದು ತಿಳಿಯದು. ಅದೂ ಅಲ್ಲದೆ ಅವರು ತೊಮೊಯೆ ಮಕ್ಕಳೂ ಅಲ್ಲ. ಹಾಗಾಗಿ ಅದು ಸರಿ ಹೋಗದು.

ಅವರು ಟೋಕಿಯೋ ರೈಲಿಗಾಗಿ ಪ್ಲಾಟ್‌ಫಾರಂಗೆ ಹೋಗುವವರೆಗೂ ಅವರನ್ನೇ ನೋಡುತ್ತಾ ನಿಂತುಕೊಂಡಳು.

"ಜನರೊಂದಿಗೆ ಕೈಗಳಿಂದ ಮಾತನಾಡುವುದನ್ನು ನಾನು ಎಂದಾದರೊಂದು ದಿನ ಕಲಿತೇ ತೀರುತ್ತೇನೆ" ಎಂದು ತೀರ್ಮಾನಿಸಿದಳು.

ಆದರೆ ತೊತ್ತೊ-ಚಾನ್‌ಳಿಗೆ ಕಿವುಡು-ಮೂಗರ ಬಗ್ಗೆಯಾಗಲೀ ಈ ಹುಡುಗರು ಓಯಿಮಾಚಿದಲ್ಲಿನ ಮುನಿಸಿಪಲ್ ಕಿವುಡು ಮತ್ತು ಮೂಗರ ಶಾಲೆಗೆ ಹೋಗುವುದರ ಬಗ್ಗೆಯಾಗಲಿ ತಿಳಿದಿರಲಿಲ್ಲ.

ಆ ಮಕ್ಕಳು ಪರಸ್ಪರರ ಕೈಬೆರಳನ್ನು ಮಿಂಚುಗಣ್ಣಿನಿಂದ ನೋಡುತ್ತಿದ್ದುದರಲ್ಲಿ ಎಂಥದೋ ಸೌಂದರ್ಯ ಅವಳಿಗೆ ಕಂಡಿತ್ತು. ಯಾವತ್ತಾದರೊಂದು ದಿನ ಅವರೊಟ್ಟಿಗೆ ಸ್ನೇಹ ಸಂಪಾದಿಸಬೇಕೆಂದು ಅವಳ ಇಚ್ಛೆಯಾಗಿತ್ತು.

## ನಲವತ್ತೇಳು ರೋನಿನ್

ಕೊಬಾಯಾಶಿಯವರ ಶಿಕ್ಷಣ ಕ್ರಮ ವಿಶಿಷ್ಟವಾಗಿದ್ದರೂ ಅವರ ವಿಚಾರಗಳಲ್ಲಿ ಯೂರೋಪು ಮತ್ತು ಇತರ ದೇಶಗಳ ಪ್ರಭಾವ ಕಂಡುಬರುತ್ತಿತ್ತು. ತೊಮೊಯೆದಲ್ಲಿನ ಸಂಗೀತ ವ್ಯಾಯಾಮ, ಊಟದ ಸಮಯದ ಚಟುವಟಿಕೆಗಳು, ಶಾಲಾ ವಾಕಿಂಗುಗಳು ಮತ್ತು "ರೋ, ರೋ, ರೋ ಯುವರ್ ಬೋಟ್" ರಾಗಕ್ಕೆ ಹೊಂದಿಕೊಂಡ ಊಟದ ಹಾಡು ಇವೆಲ್ಲ ಅದನ್ನು ತೋರಿಸುತ್ತಿದ್ದವು.

ಮುಖ್ಯೋಪಾಧ್ಯಾಯರ ಬಲಗೈಯಂತಿದ್ದ ಮಾರೂಯಾಮಾ ಅವರು ಅನೇಕ ವಿಧದಲ್ಲಿ ಕೊಬಾಯಾಶಿಯವರಿಗೆ ತದ್ವಿರುದ್ಧವಾಗಿದ್ದರು. 'ಗುಂಡಗಿನ ಬೆಟ್ಟ' ಎಂದು ಅರ್ಥಕೊಡುವ ತಮ್ಮ ಹೆಸರಿಗೆ ಅನ್ವರ್ಥವೆಂಬಂತೆ ಅವರ ತಲೆ ಒಂದೂ ಕೂದಲಿಲ್ಲದೆ ಸಂಪೂರ್ಣ ನುಣ್ಣಗಿತ್ತು. ಕಿವಿಯ ನೇರಕ್ಕೆ ಬುರುಡೆಯ ಹಿಂಭಾಗದಲ್ಲಿ ಮಾತ್ರ ಬಿಳೀ ಕೂದಲಿನ ಒಂದು ಪಟ್ಟೆ ಇತ್ತು. ಗುಂಡಗಿನ ಕನ್ನಡಕ ಹಾಕಿಕೊಳ್ಳುತ್ತಿದ್ದ ಅವರ ಗಲ್ಲಗಳು ಕೆಂಪಗೆ ಹೊಳೆಯುತ್ತಿದ್ದವು. ಅವರು ಕೊಬಾಯಾಶಿಯವರಿಗಿಂತ ಭಿನ್ನವಾಗಿ ಕಾಣುತ್ತಿದ್ದುದಲ್ಲದೆ ಶಾಸ್ತ್ರೀಯ ಚೀನೀ ಶೈಲಿಯ ಪದ್ಯಗಳನ್ನು ಗಾಂಭೀರ್ಯದಿಂದ ಹಾಡುತ್ತಿದ್ದರು.

ಡಿಸೆಂಬರ್ ಹದಿನಾಲ್ಕರ ಬೆಳಿಗ್ಗೆ, ಮಕ್ಕಳೆಲ್ಲ ಶಾಲೆಯಲ್ಲಿ ಸೇರಿದ ನಂತರ ಮಾರೂಯಾಮಾ ಅವರು ಹೀಗೆ ಉದ್ಘೋಷಿಸಿದರು:

"ಸುಮಾರು ಇನ್ನೂರೈವತ್ತು ವರ್ಷಗಳ ಹಿಂದೆ ಇದೇ ದಿನದಂದು ರೋನಿನ್‌ಗಳು ತಮ್ಮ ಒಡೆಯನನ್ನು ಕೊಂದ ಕುಲವೈರಿಗಳನ್ನು ಕೊಂದು ಸೇಡು ತೀರಿಸಿಕೊಂಡಿದ್ದರು. ಸೆಂಗಕುಜಿ ದೇವಸ್ಥಾನಕ್ಕೆ ಹೋಗಿ ಅವರ ಸಮಾಧಿಗಳಿಗೆ ಗೌರವ ಸಲ್ಲಿಸೋಣ. ನಿಮ್ಮ ತಂದೆ-ತಾಯಿಗಳಿಗೆ ಈಗಾಗಲೇ ಈ ಬಗ್ಗೆ ತಿಳಿಸಿಲಾಗಿದೆ."

ಮುಖ್ಯೋಪಾಧ್ಯಾಯರು ಮಾರೂಯಾಮಾರ ವಿಚಾರಕ್ಕೆ ಅಡ್ಡಬರಲಿಲ್ಲ. ಈ ಬಗ್ಗೆ ಮುಖ್ಯೋಪಾಧ್ಯಾಯರು ಏನೂ ಹೇಳಿಲ್ಲದಿರುವುದರಿಂದ ಅವರ ಒಪ್ಪಿಗೆ

ಇದೆಯೆಂದು ತಂದೆ-ತಾಯಿಗಳು ತಿಳಿದರು. ಮಕ್ಕಳಿಗಂತೂ ಆ ಸಮಾಧಿ ಸ್ಥಳಕ್ಕೆ ಹೋಗುವುದು ತುಂಬಾ ಹಿಡಿಸಿತ್ತು.

ಅವರೆಲ್ಲ ಹೊರಡುವ ಮುನ್ನ ಮಾರೂಯಾಮಾ ಅವರು ವಿಖ್ಯಾತ ನಲವತ್ತೇಳು ರೋನಿನ್ ಜನರ ಕತೆಯನ್ನು ಮಕ್ಕಳಿಗೆ ಹೇಳಿದರು. ಅಸನೋ ದೇವತೆಯ ಅನುಚರರು ತಮ್ಮ ಯಜಮಾನ ಭಯಂಕರವಾಗಿ ಕೊಲ್ಲಲ್ಪಟ್ಟ ಅನ್ಯಾಯದ ವಿರುದ್ಧ ಹಗೆ ತೀರಿಸಿಕೊಳ್ಳಲು ಎರಡು ವರ್ಷಗಳ ಕಾಲ ಕಾದಿದ್ದರು. ಆ ನಲವತ್ತೇಳು ಜನರ ಜತೆಗೆ ಒಬ್ಬ ಸಾಹಸಿ ವ್ಯಾಪಾರಿ ರಿಹಿ ಅಮನೋಯ ಕೂಡ ಇದ್ದನು. ಇದಕ್ಕಾಗಿ ಅವನು ಆಯುಧಗಳನ್ನು ಸರಬರಾಜು ಮಾಡಿದ್ದನು. ಶೋಗನ್‌ನ ಭಟರು ಅವನನ್ನು ಸೆರೆಹಿಡಿದಾಗ ಅವನು ಹೀಗೆ ಘೋಷಿಸಿದನು: “ನಾನು ರಿಹಿ ಅಮನೋಯ, ಎಂಬ ಗಂಡಸು” ಆತ ತಪ್ಪೊಪ್ಪಿಕೊಳ್ಳಲೂ ಇಲ್ಲ ಒಂದೇ ಒಂದು



ಗುಟ್ಟನ್ನೂ ಹೊರಗೆಡೆವಲೂ ಇಲ್ಲ. ಮಕ್ಕಳಿಗೆ ಕತೆ ಅಷ್ಟೇನೂ ಅರ್ಥವಾಗಲಿಲ್ಲ. ಆದರೆ ತರಗತಿಗಳನ್ನು ತಪ್ಪಿಸಿ ಕುಹೋನ್‌ಬುತ್ಸು ದೇವಾಲಯಕ್ಕಿಂತಲೂ ದೂರದ ಜಾಗಕ್ಕೆ ನಡೆದು ಹೋಗುವುದು, ಅಲ್ಲಿ ಊಟ ಮಾಡುವುದು ಅವರಿಗೆ ರೋಮಾಂಚಕಾರಿಯಾಗಿತ್ತು.

ಮುಖ್ಯೋಪಾಧ್ಯಾಯರು ಮತ್ತು ಇತರ ಉಪಾಧ್ಯಾಯರಿಂದ ಬೀಳ್ಕೊಂಡು ಎಲ್ಲ 50 ಮಕ್ಕಳು ಮಾರೂಯಾಮಾರನ್ನು ಹಿಂಬಾಲಿಸಿ ನಡೆದರು. ಅಲ್ಲಲ್ಲಿ ಮಕ್ಕಳು "ನಾನು ರಿಹಿ ಅಮನೋಯ ಎಂಬ ಗಂಡಸು" ಎಂದು ಹೇಳಿಕೊಳ್ಳುವುದು ಕೇಳಿಸುತ್ತಿತ್ತು. ಹುಡುಗಿಯರೂ ಕೂಡ ಹೀಗೇ ಹೇಳುತ್ತಿದ್ದುದು ದಾರಿಯಲ್ಲಿ ಓಡಾಡುವ ಜನ ನಗುವಂತೆ ಮಾಡಿತ್ತು. ಸೆಂಗಕುಜಿಗೆ ಏಳು ಕಿ.ಮೀ. ದೂರವಿತ್ತು, ಮೋಟಾರು ವಾಹನಗಳು ಸಿಗುತ್ತಿರಲಿಲ್ಲ. ಡಿಸೆಂಬರ್ ಆಗಸ ತಿಳಿಯಾಗಿತ್ತು. ಅಲ್ಲದೆ "ನಾನು ರಿಹಿ ಅಮನೋಯ ಎಂಬ ಗಂಡಸು" ಎಂದು ಪದೇ ಪದೇ ಹೇಳಿಕೊಳ್ಳುತ್ತಾ ಆನಂದ ಅನುಭವಿಸುತ್ತಿದ್ದ ಮಕ್ಕಳಿಗೆ ಅದೇನೂ ಅಂತಹ ದೂರವೆನಿಸಲಿಲ್ಲ.

ಸೆಂಗಕುಜಿಯನ್ನು ಸೇರಿದ ನಂತರ, ಮಾರೂಯಾಮಾ ಪ್ರತಿಯೊಬ್ಬರಿಗೂ ಒಂದು ಊದುಕಡ್ಡಿ ಮತ್ತು ಕೆಲ ಹೂಗಳನ್ನು ಕೊಟ್ಟರು. ಆ ದೇವಸ್ಥಾನ ಕುಹೋನಬುತ್ಸುಗಿಂತ ಸಣ್ಣದಿತ್ತು. ಆದರೆ ಅಲ್ಲಿ ಸಾಲು ಸಾಲಾಗಿ ಅನೇಕ ಸಮಾಧಿಗಳಿದ್ದವು. ನಲವತ್ತೇಳು ರೋಹಿನ್‌ರ ಸ್ಮರಣಾರ್ಥವಾದ ಈ ಸ್ಥಳ ಪವಿತ್ರವಾದುದೆಂಬ ಆಲೋಚನೆ ತೊತ್ತೊ-ಚಾನ್‌ಳನ್ನು ಗಂಭೀರಗೊಳಿಸಿತು. ಅವಳು ಊದುಕಡ್ಡಿ ಮತ್ತು ಹೂವುಗಳನ್ನು ಅರ್ಪಿಸಿ ಮಾರೂಯಾಮಾರನ್ನು ಅನುಸರಿಸುತ್ತಾ ಮೌನದಿಂದ ಬಾಗಿ ನಮಸ್ಕರಿಸಿದಳು. ಇಷ್ಟೊಂದು ನಿಶ್ಶಬ್ಧವಾಗಿರುವುದು ತೊಮೊಯೆ ಮಕ್ಕಳಿಗೆ ವಿಚಿತ್ರ ಅನುಭವ. ಪ್ರತಿಯೊಂದು ಸಮಾಧಿಯ ಬಳಿಯೂ ಹಚ್ಚಿ ಇರಿಸಿದ ಊದುಬತ್ತಿಯಿಂದ ಹೊರಟ ಹೊಗೆ ಬಹಳ ಸಮಯದವರೆಗೂ ಚಿತ್ರವಿಚಿತ್ರ ಆಕೃತಿಗಳನ್ನು ಗಾಳಿಯಲ್ಲಿ ರೂಪಿಸುತ್ತಲಿತ್ತು.

ಮಕ್ಕಳಿಗೆ ನಲವತ್ತೇಳು ರೋಹಿನ್‌ರ ಕತೆ ಅಷ್ಟೇನೂ ಅರ್ಥವಾಗಿರಲಿಕ್ಕಿಲ್ಲ. ಆದರೆ ಅದನ್ನು ಅಷ್ಟೊಂದು ಗಂಭೀರವಾಗಿ ಮಾರೂಯಾಮಾ ತಿಳಿಸಿದ ಅಪರಿಚಿತರ ಬಗ್ಗೆ ಮಾತ್ರ ಗೌರವಭಾವ ಉಂಟಾಗಿತ್ತು, ಮುಖ್ಯೋಪಾಧ್ಯಾಯರ ದಪ್ಪ ಕನ್ನಡಕದ ಹಿಂದೆ ಮಿನುಗುತ್ತಿದ್ದ ಸಣ್ಣ ಕಣ್ಣುಗಳು ತೊತ್ತೊ-ಚಾನ್‌ಗೆ ಇಷ್ಟವಾಗುತ್ತಿದ್ದುವು. ಅವರ ದೊಡ್ಡ ದೇಹಕ್ಕೆ ಏನೇನೂ ಹೊಂದಿಕೊಳ್ಳದ ಮೆದು ದನಿ ತೊತ್ತೊ-ಚಾನ್‌ಳಿಗೆ ತುಂಬಾ ಮೆಚ್ಚುಗೆಯಾಗಿತ್ತು.

## "ಮಾಸೋ-ಚಾನ್ !"

ಪ್ರತಿದಿನ ರೈಲು ನಿಲ್ದಾಣಕ್ಕೆ ಹೋಗಿ ಬರುವ ದಾರಿಯಲ್ಲಿ ತೊತ್ತೊ-ಚಾನ್ ಕೆಲವು ಕೊರಿಯನ್ನರ ಮನೆಗಳನ್ನು ದಾಟಿ ಹೋಗಬೇಕಾಗಿತ್ತು. ಅವರು

ಕೊರಿಯನ್ನರೆಂಬುದು ತೊತ್ತೊ-ಚಾನ್‌ಳಿಗೆ ಗೊತ್ತಿರಲಿಲ್ಲ. ಆದರೆ ಅಲ್ಲಿ ಒಬ್ಬ ಹೆಂಗಸನ್ನು ಮಾತ್ರ ಅವಳು ವಿಶೇಷವಾಗಿ ಗಮನಿಸಿದ್ದಳು. ಅವಳು ತನ್ನ ಕೂದಲನ್ನು ಎರಡು ಭಾಗವಾಗಿ ಸೀಳಿ ಹಿಂದಕ್ಕೆ ಬಿಗಿದು ಗಂಟು ಹಾಕಿಕೊಳ್ಳುತ್ತಿದ್ದಳು. ದಪ್ಪಗಿದ್ದ ಆ ಹೆಂಗಸು ದೋಣಿಯಂತೆ ಮುಂಭಾಗದಲ್ಲಿ ಚೂಪಾಗಿದ್ದ ರಬ್ಬರಿನ ಷೂಗಳನ್ನು ಹಾಕಿಕೊಂಡಿರುತ್ತಿದ್ದಳು. ಉದ್ದನೆಯ ಲಂಗದಂಥ ಉಡುಪನ್ನು ತೊಡುತ್ತಿದ್ದಳು. ಅವಳ ತುಂಡು ರವಿಕೆಯ ಮುಂಭಾಗದಲ್ಲಿ ದೊಡ್ಡ ರಬ್ಬರಿನ ಚಿತ್ತಾರವಿತ್ತು. ಯಾವಾಗಲೂ ತನ್ನ ಮಗನನ್ನೇ ಹುಡುಕುತ್ತಿರುತ್ತಿದ್ದಳು. ಪದೇ ಪದೇ "ಮಾಸೋ-ಚಾನ್" ಎಂದು ಕೂಗುತ್ತಿದ್ದಳು. ಸುಮ್ಮನೆ 'ಮಾ-ಸೋ-ನಚಾನ್' ಎಂದು ಹೇಳುವಾಗ 'ಸೋ' ಎಂಬ ಅಕ್ಷರವನ್ನು ಒತ್ತಿ ಹೇಳಿ 'ಚಾನ್' ಎಂಬುದನ್ನು ಎಳೆದು ಎಳೆದು ಕೂಗುತ್ತಿದ್ದಳು. ಅದು ತೊತ್ತೊ-ಚಾನ್‌ಳಿಗೆ ದುಃಖದ ದನಿಯಾಗಿ ಕೇಳಿಸುತ್ತಿತ್ತು.

ಇವರ ಬಿಡಾರಗಳು ಓಯಿಮಾಚಿ ರೈಲು ಹಳಿಯ ಪಕ್ಕದಲ್ಲೇ ಹರಡಿಕೊಂಡಿದ್ದವು. ಮಾಸೋ-ಚಾನ್ ಯಾರೆಂಬುದು ತೊತ್ತೊ-ಚಾನ್‌ಳಿಗೆ ತಿಳಿದಿತ್ತು. ತನಗಿಂತ ಕೊಂಚ ದೊಡ್ಡವನಾದ ಆತ ಎರಡನೇ ತರಗತಿಯಲ್ಲಿರಬೇಕೆಂದುಕೊಂಡಿದ್ದಳು. ಆದರೆ ಅವನೆಲ್ಲಿ ಶಾಲೆಗೆ ಹೋಗುತ್ತಾನೆಂಬುದರ ಬಗ್ಗೆ ಏನೊಂದೂ ಕಲ್ಪನೆ ಇರಲಿಲ್ಲ. ಅವನ ಕೂದಲು ಕೊಳಕಾಗಿರುತ್ತಿತ್ತು. ಯಾವಾಗಲೂ ಒಂದು ನಾಯಿಯನ್ನು ಜೊತೆಹಾಕಿಕೊಂಡಿರುತ್ತಿದ್ದ. ಒಂದು ದಿನ ತೊತ್ತೊ-ಚಾನ್ ಬಿಡಾರಗಳನ್ನು ದಾಟಿ ಮನೆಗೆ ಹೋಗುತ್ತಿದ್ದಾಗ ಮಾಸೋ-ಚಾನ್ ಕಾಲುಗಳನ್ನು ಅಗಲಿಸಿ, ತನ್ನೆರಡೂ ಕೈಗಳನ್ನು ಸೊಂಟಕ್ಕೆ ಕೊಟ್ಟು ದಿಣ್ಣೆಯ ಮೇಲೆ ದರ್ಪದಿಂದ ನಿಂತಿದ್ದ.

"ಕೊರಿಯನ್" ಅವನು ತೊತ್ತೊ-ಚಾನ್‌ಳಿಗೆ ಕೂಗಿ ಹೇಳಿದ. ಅವನ ದನಿಯಲ್ಲಿ ದ್ವೇಷ ತುಂಬಿಕೊಂಡಂತಿತ್ತು. ಆವಳು ಅವನಿಗೆ ಏನೂ ಕೆಡುಕು ಮಾಡಿರಲಿಲ್ಲ. ಅಷ್ಟೇ ಏಕೆ ಮಾತೂ ಕೂಡ ಆಡಿಸಿರಲಿಲ್ಲ. ಹಾಗಾಗಿ ಅವನು ಅಷ್ಟೊಂದು ಸಿಟ್ಟಿನಿಂದ ಅವಳನ್ನು ಕೂಗಿದಾಗ ಧೃತಿಗೆಟ್ಟಳು.

ಮನೆಗೆ ಬಂದ ಮೇಲೆ ಅಮ್ಮನಿಗೆ ಅದನ್ನೇ ಕುರಿತು ಹೇಳಿದಳು "ಮಾಸೋ-ಚಾನ್ ನನ್ನನ್ನು ಕೊರಿಯನ್ ಎಂದು ಕೂಗಿದ." ಅಮ್ಮ ಬಾಯಿಯ ಮೇಲೆ ಕೈಯಿಟ್ಟಳು. ಆವಳ ಕಂಗಳಿಂದ ಹನಿ ಉದುರಿದ್ದನ್ನು ತೊತ್ತೊ-ಚಾನ್ ಕಂಡಳು. ಅದೇನೋ ತುಂಬಾ ಕೆಟ್ಟದ್ದಿರಬೇಕೆಂದು ತೊತ್ತೊ-ಚಾನ್‌ಗೆ ಕಳವಳವಾಯಿತು. ಅಮ್ಮ ಕಣ್ಣೊರೆಸಿಕೊಳ್ಳುತ್ತಲೇ ಇದ್ದಳು. ಮೂಗಿನ ತುದಿ ಕೆಂಪಾಗಿತ್ತು. "ಪಾಪ, ಆ ಮಗು" ಅವಳೆಂದಳು. "ಜನ ಅವನನ್ನು ಯಾವಾಗಲೂ 'ಕೊರಿಯನ್, ಕೊರಿಯನ್' ಎಂದು ಕರೆಯುತ್ತಿರಬೇಕು, ಅವನಿಗದು ಕೆಟ್ಟ ಪದವೆಂದು ಅನ್ನಿಸಿರಬೇಕು. ಅವನಿನ್ನೂ ಸಣ್ಣವನಾದ್ದರಿಂದ ಅದರರ್ಥ ಅವನಿಗೆ ತಿಳಿದಿರಲಿಕ್ಕಿಲ್ಲ. ಸಾಮಾನ್ಯವಾಗಿ ಜನ 'ಮೂರ್ಖ' ಎಂದು ಬಯ್ಯುವಾಗ 'ಬಕ್ರ' ಎನ್ನುತ್ತಾರಲ್ಲ ಇದೂ ಹಾಗೇ ಎಂದು ಅವನಂದುಕೊಂಡಿದ್ದಾನೇನೋ. ತನ್ನನ್ನು ಯಾವಾಗಲೂ ಎಲ್ಲರೂ 'ಕೊರಿಯನ್' ಎಂದು ಕರೆಯುವುದರಿಂದ ತಾನೂ

ಯಾರಿಗಾದರೂ ಏನಾದರೂ ಕೆಟ್ಟದ್ದು ಹೇಳಬೇಕೆಂದು ಹಾಗೆ ಕರೆದಿರಬೇಕು. ಜನರೇಕೆ ಇಷ್ಟು ಕ್ರೂರಿಗಳಾಗುತ್ತಾರೋ ?''

ಅಮ್ಮ ನಿಧಾನವಾಗಿ ತೊತ್ತೊ-ಚಾನ್‌ಳಿಗೆ ಹೇಳಿದಳು, ''ನೋಡು, ನೀನು ಜಪಾನಿನವಳು, ಮಾಸೋ-ಚಾನ್ ಕೊರಿಯ ಎಂಬ ದೇಶದವನು. ಆದರೆ ಅವನು ನಿನ್ನಂತೆಯೇ ಮಗು. ಆದ್ದರಿಂದ ಮಗಳೇ, ಜನರು ಬೇರೆಯವರೆಂಬ ಭಾವನೆಯನ್ನು ಎಂದೂ ಬೆಳೆಸಿಕೊಳ್ಳಕೂಡದು. 'ಅವನು ಜಪಾನಿನವ, ಇವನು ಕೊರಿಯದವನು' ಎಂದು ಯಾವತ್ತೂ ಭಾವಿಸಕೂಡದು. ಮಾಸೋ-ಚಾನ್ ಜತೆ ಒಳ್ಳೆಯವಳಾಗಿರು. ಕೊರಿಯನ್ನರಾದ ಮಾತ್ರಕ್ಕೆ ಅವರು ಒಳ್ಳೆಯವರಲ್ಲ ಎಂದು ತಿಳಿಯುವುದು ಕೆಟ್ಟದ್ದು.''

ತೊತ್ತೊ-ಚಾನ್‌ಳಿಗೆ ಇದೆಲ್ಲವನ್ನು ಅರ್ಥಮಾಡಿಕೊಳ್ಳಲು ಕಷ್ಟವಾಗಿತ್ತು. ಅವಳಿಗೆ ತಿಳಿದದ್ದಿಷ್ಟೇ. ಮಾಸೋ-ಚಾನ್ ಸಣ್ಣ ಹುಡುಗ, ಕಾರಣವಿಲ್ಲದೆ ಜನರು ಅವನ ಬಗ್ಗೆ ಕೆಟ್ಟ ಮಾತನಾಡುತ್ತಾರೆ. ಅದಕ್ಕೇ ಇರಬೇಕು ಅವನ ಅಮ್ಮ ಯಾವಾಗಲೂ ಅವನನ್ನು ಅಷ್ಟೊಂದು ನಿಗಾವಹಿಸಿ ಕೂಗುತ್ತಿದ್ದುದು ಎಂದುಕೊಂಡಳು. ಮಾರನೆಯ ದಿನ ಅವರ ಬಿಡಾರಗಳನ್ನು ದಾಟಿ ಹೋಗುವಾಗ ಅವನ ತಾಯಿ ಮಾಸೋ-ಚಾನ್ ಎಂದು ಕೀರಲು ದನಿಯಲ್ಲಿ ಕೂಗಿಕೊಳ್ಳುತ್ತಿರುವುದನ್ನು ಕೇಳಿ, ಅವನೆಲ್ಲಿರಬಹುದು ಎಂದು ಕುತೂಹಲಗೊಂಡಳು. ತಾನು ಕೊರಿಯನ್ ಅಲ್ಲದೇ ಹೋದರೂ ಮಾಸೋ-ಚಾನ್ ಅವಳನ್ನು ಮತ್ತೆ ಹಾಗೆ ಕರೆದರೆ ''ನಾವೆಲ್ಲ ಮಕ್ಕಳು. ನಾವೆಲ್ಲ ಒಂದೇ,'' ಎಂದು ಹೇಳಬೇಕೆಂದು ತೀರ್ಮಾನಿಸಿಕೊಂಡಳು. ಹೇಗಾದರೂ ಪ್ರಯತ್ನಿಸಿ ಅವನೊಂದಿಗೆ ಸ್ನೇಹ ಸಂಪಾದಿಸುವೆನೆಂದುಕೊಂಡಳು.

ಆತಂಕ ಅಸಮಾಧಾನ ಮಿಶ್ರಿತ ಮಾಸೋ-ಚಾನ್‌ನ ಅಮ್ಮನ ದನಿಗೆ ಒಂದು ವಿಶೇಷ ಗುಣವಿತ್ತು. ರೈಲಿನ ಸದ್ದು ಅಪ್ಪಳಿಸಿ ಆ ದನಿಯನ್ನು ಗಾಳಿಯಲ್ಲಿ ವಿಲೀನಗೊಳಿಸಿದಂತಿತ್ತು.

''ಮಾಸೋ-ಚಾನ್.''

ದುಃಖ ದುಮ್ಮಾನ ತುಂಬಿಕೊಂಡ ಈ ದನಿಯನ್ನು ಒಮ್ಮೆ ಕೇಳಿದರೆ ಮತ್ತೆಂದೂ ಮರೆಯಲಾಗುತ್ತಿರಲಿಲ್ಲ.

## ಜಡೆ

ಆ ವೇಳೆಗೆ, ತೊತ್ತೊ-ಚಾನ್‌ಳಿಗೆ ಎರಡು ದೊಡ್ಡ ಮಹಾತ್ವಾಕಾಂಕ್ಷೆಗಳಿದ್ದವು. ಒಂದು, ಕ್ರೀಡಾ ಉಡುಪಾದ ಬ್ಲೂಮರನ್ನು ತೊಟ್ಟುಕೊಳ್ಳುವುದು; ಮತ್ತೊಂದು, ಕೂದಲನ್ನು ಜಡೆಯಂತೆ ಹೆಣೆದುಕೊಳ್ಳುವುದು. ರೈಲಿನಲ್ಲಿ ದೊಡ್ಡ ಹುಡುಗಿಯರು ಜಡೆ ಕಟ್ಟಿಕೊಂಡು ಬರುವುದನ್ನು ಕಂಡು ಅವಳು ತಾನೂ ಅವರಂತೆಯೇ ಕೂದಲನ್ನು ಕಟ್ಟಿಕೊಳ್ಳಲು ತೀರ್ಮಾನಿಸಿದ್ದಳು. ಅವಳ ತರಗತಿಯಲ್ಲಿನ ಹುಡುಗಿಯರು ಕೂದಲನ್ನು ಗಿಡ್ಡಗೆ ಕಾಣುವಂತೆ ಕಟ್ಟಿಕೊಳ್ಳುತ್ತಿದ್ದರೆ ತೊತ್ತೊ-ಚಾನ್ ಮಾತ್ರ

ಕೂದಲನ್ನು ಎರಡು ಭಾಗ ಮಾಡಿ ಉದ್ದಕ್ಕೆ ಕಾಣುವಂತೆ ರಿಬ್ಬನ್ನಿಂದ ಕಟ್ಟಿಕೊಳ್ಳುತ್ತಿದ್ದಳು. ಅಮ್ಮನಿಗೆ ಹಾಗೆ ಕಟ್ಟಿಕೊಳ್ಳುವುದೆಂದರೆ ಇಷ್ಟ. ಅದೂ ಅಲ್ಲದೆ ಕೂದಲನ್ನು ಉದ್ದಕ್ಕೆ ಬಿಡುವುದರಿಂದ ಅದು ಇನ್ನೂ ಉದ್ದ ಬೆಳೆದು ತಾನು ಜಡೆ ಕಟ್ಟಿಕೊಳ್ಳಬಹುದೆಂದು ತೊತ್ತೊ-ಚಾನ್ ಯೋಚಿಸುತ್ತಿದ್ದಳು.

ಕೊನೆಗೆ ಒಂದು ದಿನ ಅಮ್ಮನಿಂದ ಎರಡು ಜಡೆ ಹೆಣೆಸಿಕೊಳ್ಳುವುದರಲ್ಲಿ ಯಶಸ್ವಿಯಾದಳು. ತುದಿಯಲ್ಲಿ ಉದ್ದನೆಯ ರಿಬ್ಬನ್ನಿಂದ ಕಟ್ಟಿದ ಜಡೆಗಳು ಅವಳಿಗೆ ತಾನೊಬ್ಬ ದೊಡ್ಡ ಹುಡುಗಿ ಎಂಬ ಭಾವನೆಯನ್ನು ಬರಿಸಿದ್ದವು. ಕನ್ನಡಿಯಲ್ಲಿ ನೋಡಿಕೊಂಡಾಗ, ತನ್ನ ಜಡೆ ರೈಲಿನಲ್ಲಿನ ದೊಡ್ಡ ಹುಡುಗಿಯರ ಜಡೆಯಂತಿರದೆ ತೆಳ್ಳಗೆ ಮೋಟಾಗಿದ್ದು ಕಂಡಿತು. ಆದರೆ ರಾಕಿಯತ್ತ ಓಡಿ ಅದು ತನ್ನ ಜಡೆಗಳನ್ನು ಸರಿಯಾಗಿ ನೋಡಲಿ ಎಂದು ಎತ್ತಿ ಹಿಡಿದಳು. ರಾಕಿ ಒಂದೆರಡು ಸಲ ಮಿಕಿ ಮಿಕಿ ನೋಡಿತಷ್ಟೆ. "ನಿನ್ನ ಕೂದಲನ್ನೂ ಜಡೆ ಹಾಕುವಂತಿದ್ದರೆ ಚೆನ್ನಾಗಿರುತ್ತಿತ್ತು" ಅವಳೆಂದಳು.

ರೈಲಿನಲ್ಲಿ ತನ್ನ ಜಡೆ ಬಿಚ್ಚಿಹೋಗಬಹುದೆಂಬ ಭಯಕ್ಕೆ ತನ್ನ ತಲೆಯನ್ನು ಸಾಧ್ಯವಾದಷ್ಟೂ ಅಲ್ಲಾಡಿಸದೆ ಇರಲು ಪ್ರಯತ್ನಿಸಿದಳು. ಯಾರಾದರೂ ತನ್ನ ಜಡೆಯನ್ನು ಗಮನಿಸಿ "ಎಷ್ಟು ಮುದ್ದಾದ ಜಡೆಗಳು" ಎಂದು ಹೇಳಿದರೆ ಎಷ್ಟು ಚೆನ್ನ ಎಂದುಕೊಂಡಳು. ಆದರೆ ಯಾರೂ ಹಾಗೆನ್ನಲಿಲ್ಲ. ಆದರೆ ಶಾಲೆ ತಲುಪಿದ್ದೇ ತಡ, ಅವಳ ತರಗತಿಯವರೇ ಆದ ಮಿಯೋ-ಚಾನ್, ಸಾಕೋ-ಚಾನ್ ಮತ್ತು ಕಿಕೋ ಆಕೀ ಇವರೆಲ್ಲಾ "ಓಹೋ, ಜಡೆ!" ಎಂದು ಉದ್ಗರಿಸಿದರು. ತೊತ್ತೊ-ಚಾನ್‌ಗೆ ವಿಪರೀತ ಖುಷಿಯಾಯಿತು.

ಹುಡುಗರಿಗೆ ಇವಳ ಜಡೆ ಇಷ್ಟವಾದಂತೆ ಕಾಣಲಿಲ್ಲ. ಆದರೆ ಊಟವಾದದ್ದೇ ತಡ ತೊತ್ತೊ-ಚಾನ್ ತರಗತಿಯಲ್ಲೇ ಇದ್ದ ಓಯಿ ಎಂಬ ಹುಡುಗ ಇದ್ದಕ್ಕಿದ್ದಂತೆ "ವಾಹ್! ತೊತ್ತೊ-ಚಾನ್ ಹೊಸ ಜಡೆ ನೋಡ್ರಪ್ಪಾ" ಎಂದು ಗಟ್ಟಿ ದನಿಯಲ್ಲಿ ಹೇಳಿದ.

ಹುಡುಗರೂ ಗಮನಿಸಿದ್ದರಿಂದ ರೋಮಾಂಚಿತಗೊಂಡ ತೊತ್ತೊ-ಚಾನ್ ಹೆಮ್ಮೆಯಿಂದ ಬೀಗಿದಳು.

ಅಷ್ಟಕ್ಕೇ ಸುಮ್ಮನಿರದ ಅವನು ಅವಳ ಹತ್ತಿರ ಬಂದು ಎರಡೂ ಕೈಯಲ್ಲಿ ಒಂದೊಂದು ಜಡೆ ಹಿಡಿದು "ನನಗೆ ಸುಸ್ತಾಗಿದೆ. ಸ್ವಲ್ಪ ಹೊತ್ತು ಇವಕ್ಕೆ ಜೋತು ಬೀಳುತ್ತೇನೆ. ಇವು ರೈಲಿನ ಹ್ಯಾಂಡ್ ಸ್ಟ್ರಾಪ್‌ಗಳಿಗಿಂತ ಮಜಬೂತಾಗಿವೆ" ಎಂದ. ಅದು ಅಷ್ಟಕ್ಕೆ ಮುಗಿಯಲಿಲ್ಲ. ಓಯೀಯು ಸಣಕಲಿ ತೊತ್ತೊ-ಚಾನ್‌ಗಿಂತ ಎರಡರಷ್ಟು ದಪ್ಪಗಿದ್ದ. ಇಡೀ ತರಗತಿಯಲ್ಲಿಯೇ ಎತ್ತರ ಹಾಗೂ ದಪ್ಪಗಿದ್ದ ಹುಡುಗ ಅವನು. ಹೀಗಾಗಿ ಅವನು ಅವಳ ಜಡೆ ಎಳೆದಾಗ ಅವಳು ತತ್ತರಿಸಿ ಕೆಳಗೆ ಕುಸಿದಳು. ಬಿದ್ದದ್ದಕ್ಕಿಂತ ಜಡೆಗಳನ್ನು ಹ್ಯಾಂಡ್ ಸ್ಟ್ರಾಪ್‌ಗಳೆಂದು ಕರೆದದ್ದೇ ಅವಳ ನೋವಿಗೆ ಕಾರಣವಾಗಿತ್ತು. ಆದರೆ ಓಯೀ ಅವಳ ಜಡೆಹಿಡಿದು "ಹೀ-ಹೋ, ಹೀ-ಹೋ" ಎಂದು ಕ್ರೀಡಾದಿನದ ಹಗ್ಗ ಸೆಳೆದಾಟದಲ್ಲಿ ಕೂಗುವಂತೆ ಕೂಗಿಕೊಳ್ಳುತ್ತಾ ಅವಳನ್ನು

ಮೇಲೆತ್ತಲು ಪ್ರಯತ್ನಿಸಿದಾಗ ತೊತ್ತೊ-ಚಾನ್ ಗೋಳೋ ಎಂದು ಅಳತೊಡಗಿದಳು.

ತೊತ್ತೊ-ಚಾನ್‌ಗೆ ಜಡೆಗಳು ತಾನು ದೊಡ್ಡ ಹುಡುಗಿಯಾಗಿರುವ ಸಂಕೇತವಾಗಿತ್ತು. ಇದರಿಂದಾಗಿ ಎಲ್ಲರೂ ತನ್ನೊಡನೆ ಗೌರವದಿಂದ ವರ್ತಿಸಬೇಕೆಂದು ಅಪೇಕ್ಷಿಸಿದ್ದಳು. ಅವಳು ಅಳುತ್ತಲೇ ಮುಖ್ಯೋಪಾಧ್ಯಾಯರ ಆಫೀಸಿನತ್ತ ಓಡಿದಳು. ಅವಳು ಅಳುತ್ತಾ ಬಾಗಿಲು ಬಡಿಯುವುದನ್ನು ಕೇಳಿದ ಅವರು ಎದ್ದು ಬಂದು ಬಾಗಿಲು ತೆರೆದರು. ಅವಳ ಮುಖದತ್ತ ಬಾಗಿ, "ಏನಾಯಿತು ?" ಎಂದು ಕೇಳಿದರು. ತನ್ನ ಜಡೆ ಬಿಚ್ಚಿಹೋಗಿಲ್ಲದಿರುವುದನ್ನು ಖಚಿತಪಡಿಸಿಕೊಂಡು ಅವಳು ಹೇಳಿದಳು "ಓಯೀ ಇವನ್ನು ಎಳೆದ. ಹೀ-ಹೋ, ಹೀ-ಹೋ ಅಂತ ಹೇಳಿಕೊಂಡು ಎಳೆದ."

"ಅಳಬೇಡ, ನಿನ್ನ ಕೂದಲು ತುಂಬಾ ಮುದ್ದಾಗಿವೆ" ಅವರೆಂದರು.

"ನಿಮಗೆ ಇಷ್ಟವಾಯಿತಾ ?" ನಾಚಿಕೆಯಿಂದೆಂಬಂತೆ ಕಣ್ಣೀರಿನಿಂದ ತೊಯ್ದ ಮುಖವನ್ನೆತ್ತದೆ ಕೇಳಿದಳು.

"ತುಂಬಾ ಚೆನ್ನಾಗಿದೆ."

ತೊತ್ತೊ-ಚಾನ್ ಅಳುವುದನ್ನು ನಿಲ್ಲಿಸಿ ಕುರ್ಚಿಯಿಂದ ಇಳಿದಳು.

"ನಾನು ಇನ್ನು ಅಳುವುದೇ ಇಲ್ಲ. ಓಯೀ 'ಹೀ-ಹೋ' ಎಂದು ಕೂಗಿದರೂ ಅಳುವುದಿಲ್ಲ" ಎಂದಳು.

ಮುಖ್ಯೋಪಾಧ್ಯಾಯರು ಸರಿಯೆಂಬಂತೆ ನಕ್ಕರು.

ತೊತ್ತೊ-ಚಾನ್ ಕೂಡ ಮುಗುಳ್ನಕ್ಕಳು. ಅವಳ ಆ ನಗು ಅವಳ ಜಡೆಗೆ ತುಂಬಾ ಒಪ್ಪುತ್ತಿತ್ತು. ಆಕೆ ಮುಖ್ಯೋಪಾಧ್ಯಾಯರಿಗೆ ಬಗ್ಗಿ ವಂದಿಸಿ ಓಡಿ ಆಡುತ್ತಿದ್ದ ಮಕ್ಕಳನ್ನು ಸೇರಿಕೊಂಡಳು.

ಅವಳಿಗೆ ಅತ್ತದ್ದೇ ಮರೆತುಹೋಗಿತ್ತು. ಸ್ವಲ್ಪ ಸಮಯದ ನಂತರ ಓಯೀ ಬಂದು ಅವಳ ಹತ್ತಿರ ತಲೆಕೆರೆಯುತ್ತಾ ನಿಂತುಕೊಂಡ.

"ಸಾರಿ ಕಣೇ, ನಿನ್ನ ಜಡೆ ಎಳೆದೆ" ನಿರುದ್ವಿಗ್ನನಾಗಿ ಜೋರಾಗಿ ಹೇಳಿದ. "ಹೆಡ್ ಮಾಸ್ತರು ನನಗೆ ಬೈದರು. ಹುಡುಗಿಯರ ಹತ್ತಿರ ಒಳ್ಳೆಯವನಾಗಿರಬೇಕೆಂದು ಹೇಳಿದರು. ನಯವಾಗಿ ನಡೆದುಕೊಂಡು ಅವರನ್ನು ಚೆನ್ನಾಗಿ ನೋಡಿಕೊಳ್ಳಬೇಕು ಎಂದು ಹೇಳಿದರು."

ತೊತ್ತೊ-ಚಾನ್‌ಳಿಗೆ ಒಂದು ಬಗೆಯ ಆಶ್ಚರ್ಯವಾಯಿತು. ಹುಡುಗಿಯರ ಹತ್ತಿರ ಒಳ್ಳೆಯವನಾಗಿರಬೇಕೆಂಬ ಮಾತನ್ನು ಹಿಂದೆ ಯಾರೊಬ್ಬರೂ ಹೇಳಿದ್ದನ್ನು ಅವಳು ಕೇಳಿರಲಿಲ್ಲ. ಹುಡುಗರಿಗೇ ಯಾವಾಗಲೂ ಪ್ರಾಮುಖ್ಯತೆ ಇರುತ್ತಿತ್ತು. ತುಂಬಾ ಮಕ್ಕಳಿರುವ ಕುಟುಂಬದಲ್ಲಿ ಹುಡುಗರಿಗೇ ಮೊದಲು ತಿಂಡಿ-ಊಟ ಎಲ್ಲ ಸಿಗುತ್ತಿದ್ದುದು. ಹುಡುಗಿಯರು ಏನಾದರೂ ಮಾತನಾಡಿದರೆ ತಾಯಂದಿರು ತಕ್ಷಣ, "ಹುಡುಗಿಯರು ನೋಡಲು ಕಾಣುವಂತಿರಬೇಕು ಅಷ್ಟೇ. ಮಾತನಾಡಕೂಡದು" ಎಂದು ಹೇಳುತ್ತಿದ್ದರು. ಇದೆಲ್ಲ ತೊತ್ತೊ-ಚಾನ್‌ಳಿಗೆ ತಿಳಿದಿತ್ತು.

ಇದೆಲ್ಲ ಹೀಗಿದ್ದೂ ಮುಖ್ಯೋಪಾಧ್ಯಾಯರು ಹೆಣ್ಣುಮಕ್ಕಳನ್ನು ಚೆನ್ನಾಗಿ

ನೋಡಿಕೊಳ್ಳಬೇಕು ಎಂದು ಓಯಿಗೆ ಹೇಳಿದ್ದರು. ಇದು ತೊತ್ತೊ-ಚಾನ್‌ಳಿಗೆ ವಿಚಿತ್ರವಾಗಿ ಕಂಡಿತ್ತು. ಆನಂತರ ಯೋಚಿಸಿದಾಗ ಇದು ಎಷ್ಟು ಒಳ್ಳೆಯದು ಎಂದು ಅನ್ನಿಸಿತ್ತು.

ಓಯಿಗೆ ಇದರಿಂದ ಆಘಾತವಾದಂತಾಗಿತ್ತು. ಹುಡುಗಿಯರ ಹತ್ತಿರ ನಯವಾಗಿ ಒಳ್ಳೆಯವನಾಗಿ ನಡೆದುಕೊಳ್ಳಬೇಕು! ಅದೂ ಅಲ್ಲದೆ, ತೊಮೊಯೆದಲ್ಲಿ ಮುಖ್ಯೋಪಾಧ್ಯಾಯರಿಂದ ಅವನು ಬೈಸಿಕೊಂಡದ್ದು ಅದೇ ಮೊದಲ ಮತ್ತು ಕೊನೆಯ ಸಲ. ಆ ದಿನವನ್ನು ಅವನೆಂದೂ ಮರೆಯದಾದ.

## "ಥ್ಯಾಂಕ್ಯೂ"

ಹೊಸ ವರ್ಷದ ರಜೆ ಹತ್ತಿರ ಬರುತ್ತಿತ್ತು. ಬೇಸಿಗೆ ರಜೆಯಲ್ಲಿಯಂತೆ ಮಕ್ಕಳು ಸ್ಕೂಲಿನಲ್ಲಿ ಸೇರಿಕೊಳ್ಳದೆ ಇಡೀ ರಜೆಯನ್ನು ತಮ್ಮ ಕುಟುಂಬದೊಟ್ಟಿಗೇ ಕಳೆದರು.

"ನಾನು ರಜಾಕ್ಕೆ ತಾತನ ಮನೆಗೆ ಕುಯಿಷುಗೆ ಹೋಗುತ್ತೇನೆ" ಮಿಗಿತಾ ಯಾವಾಗಲೂ ಎಲ್ಲರಿಗೂ ಹೇಳುತ್ತಲೇ ಇದ್ದಳು. ಪ್ರಯೋಗಗಳಲ್ಲಿ ಯಾವತ್ತೂ ಆಸಕ್ತಿಯಿದ್ದ ತಾಯಿ-ಚಾನ್, "ನಾನು ಅಣ್ಣನ ಜತೆ ಭೌತಶಾಸ್ತ್ರ ಪ್ರಯೋಗ ಶಾಲೆಗೆ ಹೋಗುವೆ" ಎಂದ. ಅವನು ಅದಕ್ಕಾಗಿ ಕಾಯುತ್ತಿದ್ದಂತಿತ್ತು. ರಜೆಗೆ ಹೋಗುವ ಮುನ್ನ "ಸರಿ, ಹೋಗಿ ಬರುತ್ತೇನೆ" ಎಂದು ಪ್ರತಿಯೊಬ್ಬರೂ ಪರಸ್ಪರ ಹೇಳಿ ಕೊಂಡರು.

ತೊತ್ತೊ-ಚಾನ್ ತಂದೆ-ತಾಯಿಗಳೊಡನೆ ನೀರ್ಗಲ್ಲು ಮೇಲೆ ಜಾರಲು ಹೋದಳು. ತಂದೆಯ ಸಂಗೀತ ತಂಡದ ಸ್ನೇಹಿತರಾದ ಹಾಯಿದೋ ಸೈತೋರಿಗೆ ಶಿಗಾ ಎತ್ತರಪ್ರದೇಶದಲ್ಲಿ ಸುಂದರವಾದ ಮನೆಯಿತ್ತು. ಪ್ರತಿ ಚಳಿಗಾಲದಲ್ಲೂ ಅವರು ಅಲ್ಲಿಗೆ ಹೋಗುತ್ತಿದ್ದರು. ತೊತ್ತೊ-ಚಾನ್ ತುಂಬಾ ಸಣ್ಣ ವಯಸ್ಸಿನಿಂದಲೇ ನೀರ್ಗಲ್ಲು ಮೇಲೆ ಜಾರುವುದನ್ನು ಕಲಿತಿದ್ದಳು.

ಸ್ಟೇಷನ್ನಿನಿಂದ ಜಾರುವ ಜಾಗಕ್ಕೆ ಕುದುರೆ ಸಾರೋಟಿನಲ್ಲಿ ಹೋಗಬೇಕು. ಅದು ಸಂಪೂರ್ಣ ಹಿಮಾವೃತವಾದ ಶುದ್ಧ ಧವಳ ಪ್ರದೇಶವಾಗಿತ್ತು. ಜಾರು ಲಿಫ್ಟ್‌ಗಳಿಂದ ಯಾವುದೇ ಘಾಸಿಗೊಳಗಾಗದೆ ಇದ್ದ ಆ ಪ್ರದೇಶದಲ್ಲಿ ಅಲ್ಲಲ್ಲಿ ಮರಗಳಿದ್ದುವು. ಸೈತೋರಂತಹ ಮನೆ ಇಲ್ಲದವರಿಗೆ ಉಳಿಯಲು ಅಲ್ಲಿ ಒಂದು ಜಪಾನೀ ಮಾದರಿಯ, ಮತ್ತೊಂದು ಪಾಶ್ಚಾತ್ಯ ಮಾದರಿಯ ಹೋಟಲುಗಳಿವೆಯೆಂದು ಅಮ್ಮ ಹೇಳಿದಳು. ಕುತೂಹಲವೆಂದರೆ ಅಸಂಖ್ಯಾತ ವಿದೇಶಿಯರು ಅಲ್ಲಿ ಬರುತ್ತಿದ್ದರು.

ತೊತ್ತೊ-ಚಾನ್‌ಳಿಗೆ ಆ ವರ್ಷ ಹಿಂದಿನ ವರ್ಷಕ್ಕಿಂತ ಭಿನ್ನವಾಗಿತ್ತು. ಈಗ ಅವಳು ಪ್ರಾಥಮಿಕ ಶಾಲೆಯ ಒಂದನೇ ತರಗತಿಯ ಹುಡುಗಿ, ಅಲ್ಲದೆ ಅವಳಿಗೀಗ ಒಂದು ಇಂಗ್ಲಿಷ್ ಪದ ಕೂಡ ಬರುತ್ತಿತ್ತು. 'ಥ್ಯಾಂಕ್ಯೂ' ಎಂದು ಹೇಳುವುದು ಹೇಗೆಂದು ಅಪ್ಪ ಅವಳಿಗೆ ಕಲಿಸಿದ್ದರು. ಜಾರು ಪ್ರದೇಶದಲ್ಲಿ ತನ್ನ ಜಾರು ಸಾಮಗ್ರಿಗಳೊಂದಿಗೆ

ನಿಂತಿರುತ್ತಿದ್ದ ತೊತ್ತೊ-ಚಾನ್‌ಳನ್ನು ಕಂಡು ವಿದೇಶಿಯರು ಏನಾದರೂ ಹೇಳುತ್ತಿದ್ದರು. ಬಹುಶಃ "ಅವಳೆಷ್ಟು ಮುದ್ದಾಗಿದ್ದಾಳೆ" ಎನ್ನುತ್ತಿದ್ದರೋ ಏನೋ. ತೊತ್ತೊ-ಚಾನ್‌ಳಿಗದು ಅರ್ಥವಾಗುತ್ತಿರಲಿಲ್ಲ. ಈವರೆಗೂ ಅವಳೇನೂ ಉತ್ತರಿಸಿರಲಿಲ್ಲ. ಇನ್ನು ಮೇಲೆ ತಲೆ ಕೊಂಕಿಸಿ 'ಥ್ಯಾಂಕ್ಯೂ' ಎಂದು ಹೇಳುವುದನ್ನು ಅಭ್ಯಾಸಮಾಡಿಕೊಂಡಳು.

ಇದರಿಂದ ವಿದೇಶೀಯರು ಇನ್ನೂ ಹೆಚ್ಚು ಪ್ರಸನ್ನರಾಗಿ ನಗುತ್ತಾ ಪರಸ್ಪರ ಏನನ್ನೋ ಹೇಳಿಕೊಳ್ಳುತ್ತಿದ್ದರು. ಕೆಲಸಮಯ ಯಾರಾದರೂ ಹೆಂಗಸರು ಬಾಗಿ ಅವಳ ಕೆನ್ನೆಗೆ ಕೆನ್ನೆ ಸವರುವರು, ಗಂಡಸರು ಇವಳನ್ನು ತಬ್ಬಿಕೊಳ್ಳುವರು. ಕೇವಲ 'ಥ್ಯಾಂಕ್ಯೂ' ಎಂದಷ್ಟೇ ಹೇಳಿ ಇವರೆಲ್ಲರ ಬಳಿ ಇಷ್ಟೊಂದು ಸ್ನೇಹ ಸಂಪಾದಿಸುವುದು ತೊತ್ತೊ-ಚಾನ್‌ಳಿಗೆ ತುಂಬಾ ತಮಾಷೆಯೆನಿಸುತ್ತಿತ್ತು.

ಒಂದು ದಿನ ಒಬ್ಬ ಸುಂದರ ಯುವಕ ತೊತ್ತೊ-ಚಾನ್ ಹತ್ತಿರ ಬಂದು 'ನನ್ನ ಜತೆ ಜಾರಲು ಬರುತ್ತೀಯಾ' ಎಂದು ಕೇಳುವಂತೆ ಸಂಜ್ಞೆ ಮಾಡಿದ. ಅಪ್ಪ ಅವಳಿಗೆ ಹೋಗೆಂದರು.

'ಥ್ಯಾಂಕ್ಯೂ' ತೊತ್ತೊ-ಚಾನ್‌ಳೆಂದಳು. ಆ ಯುವಕ ಕಾಲುಮಡಿಚಿ ಅವಳನ್ನು ತನ್ನ ಕಾಲ ಮೇಲೆ ಜಾರು ಸಾಧನದ ಮುಂಭಾಗಕ್ಕೆ ಕೂರಿಸಿಕೊಂಡ. ಆ ನಂತರ ಅವಳ ಜತೆ ಶಿಗಾ ಎತ್ತರಪ್ರದೇಶದ ಅತ್ಯಂತ ನಯವಾದ ಮತ್ತು ಉದ್ದವಾದ ಇಳಿಜಾರುಗಳಲ್ಲಿ ಜಾರತೊಡಗಿದ. ಆ ಕ್ಷಣ ಅವರು ಗಾಳಿಯಲ್ಲಿ ಹಾರಾಡತೊಡಗಿದ್ದರು. ಗಾಳಿ ಕಿವಿಯಲ್ಲಿ ಬೀಸಿ ಸುಯ್‌ಗುಡುತ್ತಿತ್ತು. ತೊತ್ತೊ-ಚಾನ್ ಮುಂದಕ್ಕೆ ಉರುಳಿ ಬೀಳದಂತೆ ಎರಡೂ ಕೈಗಳಿಂದ ತನ್ನ ಮಂಡಿಗಳನ್ನು ಗಟ್ಟಿಯಾಗಿ ಹಿಡಿದುಕೊಂಡಿದ್ದಳು. ಸಾಕಷ್ಟು ಭಯವಾಗುತ್ತಿದ್ದರೂ ಹೆಚ್ಚಿನ ಖುಷಿ ಸಿಗುತ್ತಿತ್ತು. ಕೊನೆಗೆ ಅವರಿಬ್ಬರೂ ಕೆಳಕ್ಕೆ ಜಾರುತ್ತಾ ಬಂದು ನಿಂತರು. ಅಲ್ಲಿ ನಿಂತಿದ್ದ ಜನ ಚಪ್ಪಾಳೆ ತಟ್ಟುತ್ತಾ ಸ್ವಾಗತಿಸಿದರು. ತೊತ್ತೊ-ಚಾನ್ ಯುವಕನ ಕಾಲುಗಳ ಮೇಲಿಂದ ಎದ್ದು ನೋಡುತ್ತಿದ್ದವರಿಗೆಲ್ಲಾ ನಮಸ್ಕರಿಸಿ 'ಥ್ಯಾಂಕ್ಯೂ' ಎಂದಳು. ಅವರೆಲ್ಲ ಮತ್ತಷ್ಟು ಚಪ್ಪಾಳೆ ಹೊಡೆದರು.

ಎಷ್ಟೋ ದಿನಗಳ ನಂತರ ಆ ಯುವಕ ವಿಶ್ವವಿಖ್ಯಾತ ಜಾರುಗಾರ (ಸ್ಕೀಯರ್)ನಾದ ಸ್ನಯಿಡರ್‌ನೆಂದು ಅವಳಿಗೆ ತಿಳಿಯಿತು. ಆದರೆ ಅವನ ವಿಚಾರದಲ್ಲಿ ಅವಳಿಗೆ ತುಂಬಾ ಹಿಡಿಸಿದ್ದೆಂದರೆ, ಆ ದಿನ ಜಾರುವುದು ಮುಗಿದ ನಂತರ ಎಲ್ಲರೂ ಚಪ್ಪಾಳೆ ಹೊಡೆದ ಮೇಲೆ ಅವನು ತೊತ್ತೊ-ಚಾನ್ ಪಕ್ಕಕ್ಕೆ ಬಂದು ಅವಳ ಕೈಗಳನ್ನು ಹಿಡಿದು ಅವಳೊಬ್ಬ ತುಂಬಾ ಮುಖ್ಯ ವ್ಯಕ್ತಿ ಎಂಬಂತೆ 'ಥ್ಯಾಂಕ್ಯೂ' ಎಂದಿದ್ದ. ಅವನು ಅವಳನ್ನು ಮಗುವಂತೆ ಕಂಡಿರಲಿಲ್ಲ. ಬೆಳೆದ ಯುವತಿಯೆಂಬಂತೆ ನಡೆಸಿಕೊಂಡಿದ್ದ. ಅವನು ಬಾಗಿ ನಮಸ್ಕರಿಸಿದಾಗ ಇವನೊಬ್ಬ ಸಭ್ಯವ್ಯಕ್ತಿ ಎಂದು ತೊತ್ತೊ-ಚಾನ್ ಹೃದಯ ಹೇಳಿತ್ತು. ಆ ಕ್ಷಣ ಅವಳ ಹಿಂದೆ ಹಿಮಾವೃತ ಉತ್ತುಂಗ ಶಿಖರಗಳ ಕೊನೆಮೊದಲಿಲ್ಲದ ವೃಕ್ಷ ಕಾಣಿಸುತ್ತಿತ್ತು.

## ಗ್ರಂಥಾಲಯದ ರೈಲುಬಂಡಿ

ಮಕ್ಕಳು ಚಳಿಗಾಲದ ರಜೆ ಮುಗಿಸಿ ಶಾಲೆಗೆ ವಾಪಸ್ಸಾದ ಮೇಲೆ ಏನೋ ಸುಂದರವಾದ ಹೊಸದೊಂದು ಅವರನ್ನು ಕೈಬೀಸಿ ಆಹ್ವಾನಿಸುತ್ತಿತ್ತು. ತರಗತಿಗಳ ಎದುರಿನ ಸಾಲಿನಲ್ಲಿ ಸಭಾಂಗಣದ ಪಕ್ಕದ ಹೂದೋಟದ ಬದಿಗೆ ಹೊಸ ರೈಲು ಬಂಡಿ ನಿಂತಿತ್ತು. ಅವರಿಲ್ಲದಿರುವಾಗ ಅದು ಗ್ರಂಥಾಲಯವಾಗಿ ಮೈತಳೆದಿತ್ತು. ಎಲ್ಲ ಬಗೆಯ ಕೆಲಸಗಳನ್ನೂ ಮಾಡುತ್ತಿದ್ದ, ಎಲ್ಲರ ಗೌರವಕ್ಕೂ ಪಾತ್ರನಾಗಿದ್ದ ಕಾವಲುಗಾರ, ರೈಲು ಬಂಡಿಯ ತುಂಬಾ ಅನೇಕಾನೇಕ ಷೆಲ್ಫುಗಳನ್ನು ಜೋಡಿಸಿದ್ದ. ಅದನ್ನು ಎಲ್ಲ ಬಗೆಯ, ಎಲ್ಲ ಬಣ್ಣದ ಪುಸ್ತಕಗಳಿಂದ ಅಲಂಕರಿಸಲಾಗಿತ್ತು. ಕುಳಿತು ಓದಲು ಸಹಾಯವಾಗುವಂತೆ ಡೆಸ್ಕು ಮತ್ತು ಕುರ್ಚಿಗಳನ್ನು ಹಾಕಲಾಗಿತ್ತು.

"ಇದು ನಿಮ್ಮ ಲೈಬ್ರರಿ" ಮುಖ್ಯೋಪಾಧ್ಯಾಯರೆಂದರು. "ಇಲ್ಲಿರುವ ಯಾವ ಪುಸ್ತಕವನ್ನಾದರೂ ಯಾರು ಬೇಕಾದರೂ ಓದಬಹುದು. ನೀವು ಯಾವ ಸಮಯದಲ್ಲಿ ಬೇಕಾದರೂ ಇಲ್ಲಿ ಬರಬಹುದು. ನಿಮಗೆ ಪುಸ್ತಕವೊಂದನ್ನು ಮನೆಗೊಯ್ಯಬೇಕೆನಿಸಿದರೆ ಹಾಗೆ ಮಾಡಬಹುದು. ಓದಿ ಮುಗಿಸಿದ ಮೇಲೆ ಮರೆಯದೆ ವಾಪಸ್ಸು ತಂದಿರಿಸಿ. ನಿಮ್ಮ ಮನೆಯಲ್ಲಿ ಇತರರು ಓದಬಹುದಾದಂತಹ ಯಾವುದಾದರೂ ಪುಸ್ತಕವಿದ್ದರೆ, ನೀವದನ್ನು ಇಲ್ಲಿಗೆ ತಂದಿರಿಸಿದರೆ ತುಂಬಾ ಒಳ್ಳೆಯದಾಗುತ್ತೆ. ಹೇಗಾದರೂ ಸರಿ, ನಿಮ್ಮಿಂದ ಎಷ್ಟು ಸಾಧ್ಯವೋ ಅಷ್ಟೂ ಓದಿರಿ."

"ಇವತ್ತಿನ ಮೊದಲ ತರಗತಿಯೇ ಲೈಬ್ರರಿಯ ತರಗತಿ." ಮಕ್ಕಳೆಲ್ಲಾ ಒಕ್ಕೊರಲಿಂದ ಕಿರುಚಿದರು.

"ನಿಮ್ಮೆಲ್ಲರಿಗೂ ಇದೇ ಇಷ್ಟವೆ?" ಮುಖ್ಯೋಪಾಧ್ಯಾಯರು ಖುಷಿಯಿಂದ ನಗುತ್ತಾ ಸಮ್ಮತಿಸಿದರು.

ಮರುಕ್ಷಣದಲ್ಲೇ ತೊಮೊಯೆದ ಐವತ್ತು ಮಕ್ಕಳೂ ಗ್ರಂಥಾಲಯದ ಬಂಡಿಯಲ್ಲಿ ಜಮಾಯಿಸಿದರು. ಉತ್ತೇಜಿತರಾಗಿ ತಮಗೆ ಬೇಕಾದ ಪುಸ್ತಕಗಳನ್ನು ಆಯ್ದುಕೊಳ್ಳತೊಡಗಿದರು. ಅವರಲ್ಲಿ ಅರ್ಧದಷ್ಟು ಜನ ಮಾತ್ರ ಕುಳಿತುಕೊಳ್ಳುವಷ್ಟು ಆಸನಗಳಿದ್ದರಿಂದ ಉಳಿದವರು ನಿಂತುಕೊಳ್ಳಬೇಕಾಯಿತು. ಆಗ ರೈಲುಬಂಡಿ ನಿಜವಾಗಿಯೂ ಜನರಿಂದ ತುಂಬಿತುಳುಕುವ, ನಿಜವಾದ ರೈಲುಗಾಡಿಯಂತೇ ಕಾಣುತ್ತಿತ್ತು, ತಮಾಷೆಯಾಗಿತ್ತು.

ಮಕ್ಕಳು ತುಂಬಾ ಖುಷಿಯಾಗಿದ್ದರು. ತೊತ್ತೊ-ಚಾನ್‌ಗಿನ್ನೂ ಸರಿಯಾಗಿ ಓದಲು ಬರುತ್ತಿರಲಿಲ್ಲ. ಅವಳು ತುಂಬಾ ಆಕರ್ಷಕವಾಗಿ ಕಂಡ ಚಿತ್ರಗಳುಳ್ಳ ಪುಸ್ತಕವನ್ನು ಆರಿಸಿಕೊಂಡಳು. ಎಲ್ಲರೂ ಪುಸ್ತಕಗಳನ್ನು ಆರಿಸಿಕೊಳ್ಳುವುದು ಮುಗಿದು ಓದಲು ತೊಡಗಿದ ಮೇಲೆ ಗ್ರಂಥಾಲಯ ನಿಶ್ಯಬ್ದಗೊಂಡಿತು. ಆದರೆ ಅದು ಹೆಚ್ಚು ಹೊತ್ತು ಉಳಿಯಲಿಲ್ಲ. ಬಹುಬೇಗ ಅಲ್ಲಲ್ಲಿ ದನಿಗಳು ಕೇಳಿಬರತೊಡಗಿದವು. ಕೆಲವರು ಜೋರಾಗಿ ಓದತೊಡಗಿದರು, ಮತ್ತೆ ಕೆಲವರು ತಮಗೆ ಗೊತ್ತಿಲ್ಲದ ಪದದ ಅರ್ಥವನ್ನು ಇತರರಲ್ಲಿ ಕೇಳತೊಡಗಿದರು. ಕೆಲವರು ಪುಸ್ತಕಗಳನ್ನು ಬದಲಿಸಿಕೊಳ್ಳಲು ಮುಂದಾದರು. ರೈಲುಗಾಡಿಯಲ್ಲೆಲ್ಲಾ ನಗುವೇ

ನಗು, ಗುಲ್ಲೇ ಗುಲ್ಲು. ಒಬ್ಬ ಹುಡುಗನಿಗೆ 'ಹಾಡುವ ಚಿತ್ರಗಳ' ಪುಸ್ತಕ ಸಿಕ್ಕಿತ್ತು. ಅದರಲ್ಲಿನ ಸಾಲುಗಳನ್ನು ಜೋರಾಗಿ ಓದಿಕೊಳ್ಳುತ್ತಾ ಅದಕ್ಕನುಗುಣವಾಗಿ ಚಿತ್ರ ಬರೆಯತೊಡಗಿದ. ಅಲ್ಲಿನ ಹಾಡನ್ನು ಜೋರಾಗಿ ಓದತೊಡಗಿದ.

ಒಂದು ಸೊನ್ನೆ ಒಂದು ಚುಕ್ಕೆ, ಒಂದು ಸೊನ್ನೆ ಒಂದು ಚುಕ್ಕೆ; ಮೂಗಿಗೆ ಉದ್ದ-ಅಡ್ಡದ ಗೆರೆಗಳು, ಮತ್ತೊಂದು ಸೊನ್ನೆ ಒಂದು ಚುಕ್ಕೆ; ಮೂರು ಕೂದಲು, ಮೂರು ಕೂದಲು, ಮೂರು ಕೂದಲು-ಅವಕ್ಕೊಂದೊಂದು ಸುತ್ತು; ಕಣ್ಣು ಮುಚ್ಚಿ ಕಣ್ಣು ಮುಚ್ಚಿ ತೆಗೆ, ಇಲ್ಲಿದ್ದಾಳೆ ನೋಡಿ ಧಡೂತಿ ಹೆಂಗಸು.

'ಅವಕ್ಕೊಂದೊಂದು ಸುತ್ತು' ಪದವನ್ನನುಸರಿಸಿ ಮುಖದ ಸ್ವರೂಪವನ್ನು ಬರೆಯಬೇಕು. ಮುಚ್ಚಿ ತೆರೆ ಹೇಳುವಾಗ ಮೂರು ಅರ್ಧ ಚಂದ್ರಾಕೃತಿಗಳನ್ನು ಬರೆಯಬೇಕು. ಎಲ್ಲ ಸರಿಯಾಗಿ ಬರೆದರೆ ರೂಪುಗೊಳ್ಳುತ್ತಿದ್ದುದು ಹಳೇಕಾಲದ ಜಪಾನೀ ತುರುಬನ್ನು ಕಟ್ಟಿಕೊಂಡಿರುವ ಧಡೂತಿ ಹೆಂಗಸಿನ ಮುಖ.



ಯಾವುದೇ ತರಗತಿಯಲ್ಲಿ ಯಾವುದೇ ವಿಷಯವನ್ನೂ ಕಲಿಯುವ ಸ್ವಾತಂತ್ರ್ಯವನ್ನು ಹೊಂದಿದ್ದ ತೊಮೊಯೆದಲ್ಲಿ ಮಕ್ಕಳು ಇತರರ ಚಟುವಟಿಕೆಯಿಂದ ತೊಂದರೆಪಟ್ಟುಕೊಳ್ಳುವುದು ಸಾಧ್ಯವಿರಲಿಲ್ಲ. ತಾವು ಮಾಡುವುದರಲ್ಲೇ ಸಂಪೂರ್ಣ ಮನಸ್ಸು ಕೊಡುವುದಕ್ಕೆ ಅವರನ್ನು ತಯಾರು ಮಾಡಲಾಗುತ್ತಿತ್ತು. ಹಾಗಾಗಿ ಧಡೂತಿ ಹೆಂಗಸಿನ ಚಿತ್ರ ಬಿಡಿಸುತ್ತಾ ಜೋರಾಗಿ ಹಾಡಿಕೊಳ್ಳುತ್ತಿದ್ದ ಮಗುವಿನೆಡೆಗೆ ಯಾರೂ ಗಮನ ಕೊಡಲಿಲ್ಲ. ಕೆಲವರು ಅವನನ್ನು ಸೇರಿಕೊಂಡರಷ್ಟೆ. ಆದರೆ ಉಳಿದವರು ತಮ್ಮ ತಮ್ಮ ಪುಸ್ತಕಗಳಲ್ಲೇ ಮುಳುಗಿಹೋಗಿದ್ದರು. ತೊತ್ತೊ-ಚಾನ್‌ಗೆ ಸಿಕ್ಕಿದ್ದು ಒಂದು ಜಾನಪದ ಕತೆ. ಯಾವಾಗಲೂ ವಿಪರೀತ ಹೂಸು ಬಿಡುತ್ತಿದ್ದ ಶ್ರೀಮಂತನ ಮಗಳೊಬ್ಬಳಿಗೆ ಯಾವ ಗಂಡೂ ಸಿಗುವುದಿಲ್ಲ. ಕೊನೆಗೊಮ್ಮೆ ಅವಳಿಗೊಬ್ಬ ಗಂಡ ಸಿಗುತ್ತಾನೆ. ಇದರಿಂದ ತುಂಬಾ ಉತ್ತೇಜನಗೊಂಡ ಅವಳು ಮದುವೆಯ ದಿನದಂದು ರಾತ್ರಿ ಎಂದಿಗಿಂತಲೂ ಜೋರಾಗಿ ಹೂಸು ಬಿಡುತ್ತಾಳೆ. ಈ ಹೂಸಿಗೆ ಸಿಕ್ಕ ಮದುವೆ

ಗಂಡು ಮಂಚದಿಂದ ಎಗರಿ ಕೋಣೆಯಲ್ಲಿ ಏಳೂವರೆ ಸಲ ಚಕ್ರಾಕಾರವಾಗಿ ತಿರುಗಿ ಜ್ಞಾನತಪ್ಪಿ ಬೀಳುತ್ತಾನೆ. ತುಂಬಾ ಮನರಂಜನೀಯವಾದ ಆ ಚಿತ್ರ ಅವನು ಕೋಣೆಯಲ್ಲಿ ಹಾರಾಡುತ್ತಿರುವುದನ್ನು ತೀರ ತಮಾಷೆಯಾಗಿ ತೋರಿಸುತ್ತಿತ್ತು. ಆನಂತರ ತೊಮೊಯೆದಲ್ಲಿ ಆ ಪುಸ್ತಕಕ್ಕೆ ಬೇಡಿಕೆಯೋ ಬೇಡಿಕೆ.

ಮಕ್ಕಳು ಇಷ್ಟೊಂದು ಉತ್ಸುಕತೆಯಿಂದ ಪುಸ್ತಕಗಳನ್ನು ನೋಡುತ್ತಿದ್ದುದರಿಂದ ಮುಖ್ಯೋಪಾಧ್ಯಾಯರಿಗೆ ಹೃದಯ ತುಂಬಿ ಬಂದಿತ್ತು.

ಅಂದು ಇಡೀ ದಿನವನ್ನು ಮಕ್ಕಳು ಗ್ರಂಥಾಲಯದ ರೈಲುಬಂಡಿಯಲ್ಲೇ ಕಳೆದರು.

ಆನಂತರದಿಂದ ಬಿಡುವಿದ್ದಾಗೆಲ್ಲಾ ಲೈಬ್ರರಿ ಅವರ ಅಚ್ಚುಮೆಚ್ಚಿನ ಸ್ಥಳವಾಗಿತ್ತು.

"ಲೈಬ್ರರಿಯ ಹತ್ತಿರ ಒಂದು ಕಕ್ಕಸ್ಸು ಕಟ್ಟಿಸುವುದು ಒಳ್ಳೆಯದು" ಎಂದು ಮುಖ್ಯೋಪಾಧ್ಯಾಯರೆಂದರು. ಏಕೆಂದರೆ, ಪುಸ್ತಕದಲ್ಲಿ ಮುಳುಗಿಹೋದ ಮಕ್ಕಳು ಕೊನೇ ಗಳಿಗೆಯವರೆಗೂ ಉಚ್ಚೆ ತಡೆದುಕೊಂಡಿದ್ದು, ಇನ್ನೇನು ಬಂದೇಬಿಟ್ಟಿತೆನ್ನುವಾಗ ಸಭಾಂಗಣದ ಹಿಂಭಾಗದಲ್ಲಿದ್ದ ಕಕ್ಕಸ್ಸಿಗೆ ಓಡುತ್ತಿದ್ದರು.

## ಬಾಲ

ಒಂದು ಮಧ್ಯಾಹ್ನ ಶಾಲೆ ಮುಗಿದ ನಂತರ, ತೊತ್ತೊ-ಚಾನ್ ಮನೆಗೆ ಹೋಗಲು ತಯಾರಾಗುತ್ತಿದ್ದಾಗ ಓಯಿೀ ಓಡುತ್ತಾ ಬಂದು ಮೆಲ್ಲಗೆ ಹೇಳಿದ, "ಹೆಡ್‌ಮಾಸ್ತರು ಯಾರನ್ನೋ ಸಿಕ್ಕಾಪಟ್ಟೆ ಬೈಯ್ಯುತ್ತಿದ್ದಾರೆ."

"ಎಲ್ಲಿ ?" ತೊತ್ತೊ-ಚಾನ್ ಕೇಳಿದಳು.

ಮುಖ್ಯೋಪಾಧ್ಯಾಯರು ಸಿಟ್ಟಾಗಿ ಯಾರನ್ನಾದರೂ ಬೈಯ್ಯುತ್ತಾರೆನ್ನುವುದೇ ಅವಳಿಗೆ ನಂಬಲಾಗಲಿಲ್ಲ. ಓಯೀ ಓಡುತ್ತಾ ಬಂದ ರೀತಿಯಲ್ಲೇ ಅವನಿಗೂ, ವಿಪರೀತ ಆಶ್ಚರ್ಯವಾಗಿರುವುದು ತಿಳಿಯುತ್ತಿತ್ತು.

"ಅವರು ಅಡಿಗೆ ಮನೇಲಿದ್ದಾರೆ", ಹೇಳುವಾಗ ಓಯಿಯ ಮುಗ್ಧ ಕಣ್ಣುಗಳು ಅರಳಿದ್ದವು. ಮೂಗಿನ ಹೊಳ್ಳೆಗಳು ತೆರೆದುಕೊಂಡಿದ್ದವು.

ತೊತ್ತೊ-ಚಾನ್ ಮತ್ತು ಓಯೀ ಕೈಕೈ ಹಿಡಿದುಕೊಂಡು ಮುಖ್ಯೋಪಾಧ್ಯಾಯರ ಮನೆ ಕಡೆ ಓಡಿದರು. ಅದು ಸಭಾಂಗಣದ ಪಕ್ಕಕ್ಕೇ ಇದ್ದು ಅಡಿಗೆ ಮನೆ ಶಾಲಾ ಮೈದಾನದ ಹಿಂಬದಿಗೆ ತೆರೆದುಕೊಳ್ಳುತ್ತಿತ್ತು. ತೊತ್ತೊ-ಚಾನ್ ಕಕ್ಕಸ್ಸು ಗುಂಡಿಯಲ್ಲಿ ಬಿದ್ದಿದ್ದಾಗ ಅವಳನ್ನು ತೊಳೆಸಲು ಅಡಿಗೆ ಮನೆಯ ಮೂಲಕ ಸ್ನಾನದ ಮನೆಗೆ ಎತ್ತಿಕೊಂಡು ಹೋಗಿದ್ದರು. ಇದೇ ಅಡಿಗೆಮನೆಯಲ್ಲೇ ಮಕ್ಕಳ ಊಟದಲ್ಲಿ ತಪ್ಪಿ ಹೋಗಿರಬಹುದಾದ ಸ್ವಲ್ಪ ನೆಲದ್ದು ಸ್ವಲ್ಪ ಜಲದ್ದು ತಯಾರಾಗುತ್ತಿದ್ದುದು.

ಇಬ್ಬರು ಮಕ್ಕಳೂ ಕಳ್ಳಹೆಜ್ಜೆ ಹಾಕಿ ಅಡಿಗೆ ಮನೆಯನ್ನು ಸಮೀಪಿಸಿದಾಗ ಮುಚ್ಚಿದ ಬಾಗಿಲ ಹಿಂದಿನಿಂದ ಮುಖ್ಯೋಪಾಧ್ಯಾಯರ ಕೋಪೋದ್ರಿಕ್ತ ದನಿ ಕೇಳಿಬರುತ್ತಿತ್ತು.

"ನೀವು ಸ್ವಲ್ಪವೂ ಯೋಚಿಸದೆ ತಾಕಾಹಾಶಿಯನ್ನು ನಿನಗೆ ಬಾಲವಿದೆಯಾ ಎಂದು ಕೇಳಿದ್ದಾದರೂ ಹೇಗೆ ?"

ಅವರು ತಮ್ಮ ತರಗತಿಯ ಉಪಾಧ್ಯಾಯಿನಿಯೆಂದೇ ಅವರಿಗೆ ಅರ್ಥವಾಯಿತು. "ನಾನದನ್ನು ಗಂಭೀರವಾಗಿ ತೆಗೆದುಕೊಳ್ಳಲಿಲ್ಲ", ಆಕೆ ಉತ್ತರಿಸುತ್ತಿದ್ದುದು ಅವರಿಗೆ ಕೇಳಿಸಿತು.

"ಆ ಸಮಯದಲ್ಲಿ ಆಕಸ್ಮಾತ್ತಾಗಿ ನಾನವನತ್ತ ನೋಡಿದೆ, ಅವನು ತುಂಬಾ ಮುದ್ದಾಗಿ ಕಾಣುತ್ತಿದ್ದ."

"ಆದರೆ ನೀವು ಹೇಳಿದುದರ ಪರಿಣಾಮ ನಿಮಗೆ ಅರ್ಥವಾಗುವುದಿಲ್ಲವಾ? ತಾಕಾಹಾಶಿಯ ಬಗ್ಗೆ ನಾನು ತೆಗೆದುಕೊಳ್ಳುವ ಕಾಳಜಿಯನ್ನು ನಿಮಗೆ ಅರ್ಥಮಾಡಿಸುವುದಾದರೂ ಹೇಗೆ?"

ಆ ದಿನ ಬೆಳಿಗ್ಗೆ ತಮ್ಮ ತರಗತಿಯಲ್ಲಿ ನಡೆದದ್ದನ್ನು ತೊತ್ತೊ-ಚಾನ್ ನೆನಪಿಸಿಕೊಂಡಳು. ತರಗತಿಯ ಅಧ್ಯಾಪಕಿ ಮಾನವನಿಗೆ ಮೂಲತಃ ಹೇಗೆ ಬಾಲಗಳಿದ್ದವು ಎಂಬುದನ್ನು ವಿವರಿಸುತ್ತಿದ್ದರು. ಮಕ್ಕಳಿಗೆಲ್ಲಾ ಅದು ತುಂಬಾ ತಮಾಷೆಯಾಗಿ ಕಂಡಿತ್ತು. ಆಕೆ, ದೊಡ್ಡವರ ಮಾತುಗಳಲ್ಲಿ ಹೇಳಬೇಕೆಂದರೆ, ಜೀವವಿಕಾಸವನ್ನು ಕುರಿತು ಹೇಳುತ್ತಿದ್ದಳು. ಅದು ಮಕ್ಕಳ ಮನವನ್ನು ತಟ್ಟಿತು. ಇನ್ನೂ ಅದರ ಕುರುಹಾಗಿ ಬೆನ್ನುಹುರಿಯ ಕೊನೆಯಲ್ಲಿ 'ಕಾಕ್ಸಿಕ್ಸ್' ಎನ್ನುವದೊಂದಿರುವುದಾಗಿ ಆಕೆ ಹೇಳಿದಾಗ ಪ್ರತಿಯೊಬ್ಬರೂ ತನ್ನದೆಲ್ಲಿದೆಯೆಂದು ಕಂಡುಕೊಳ್ಳಲು ಪ್ರಯತ್ನಿಸತೊಡಗಿದರು. ಇಡೀ ತರಗತಿ ಗುಲ್ಲೆದ್ದುಹೋಯಿತು. "ಇಲ್ಲಿ ಯಾರಿಗಾದರೂ ಇನ್ನೂ ಬಾಲ ಇರಲಿಕ್ಕೆ ಸಾಕು. ನಿನಗಿದೆಯೇನೋ ತಾಕಾಹಾಶಿ?"

ತಾಕಾಹಾಶಿ ಬೇಗ ಎದ್ದು ನಿಂತು, ಗಟ್ಟಿಯಾಗಿ ತಲೆಯಲ್ಲಾಡಿಸಿ ಜೋರಾಗಿ ಹೇಳಿದ "ಇಲ್ಲಪ್ಪಾ. ನನಗೆ ಇಲ್ಲವೇ ಇಲ್ಲ."

ಇದರ ಬಗ್ಗೆಯೇ ಮುಖ್ಯೋಪಾಧ್ಯಾಯರು ಮಾತನಾಡುತ್ತಿರುವುದೆಂದು ತೊತ್ತೊ-ಚಾನ್‌ಗೆ ಅರ್ಥವಾಯಿತು. ಈಗವರ ದನಿಯಲ್ಲಿ ಸಿಟ್ಟಿಗಿಂತ ಹೆಚ್ಚು ಬೇಸರ ತುಂಬಿಕೊಂಡಿತ್ತು.

"ಅವನಿಗೆ ಬಾಲವಿದೆಯೇ ಎಂದು ಕೇಳಿದಾಗ ತಾಕಾಹಾಶಿಗೆ ಹೇಗಾಗಬಹುದೆಂದು ನಿಮಗೆ ತಿಳಿಯುವುದಿಲ್ಲವೇ?"

ಅಧ್ಯಾಪಕಿ ಏನು ಹೇಳುತ್ತಿದ್ದಾರೆಂದು ಮಕ್ಕಳಿಗೆ ತಿಳಿಯಲಿಲ್ಲ. ಬಾಲದ ಬಗ್ಗೆ ಮುಖ್ಯೋಪಾಧ್ಯಾಯರೇಕೆ ಇಷ್ಟೊಂದು ಸಿಟ್ಟಾಗಿರುವರೆಂದು ತೊತ್ತೊ-ಚಾನ್‌ಳಿಗೆ ಅರ್ಥವಾಗಲಿಲ್ಲ. ಮುಖ್ಯೋಪಾಧ್ಯಾಯರು ತನ್ನನ್ನು ನಿನಗೆ ಬಾಲವಿದೆಯಾ ಎಂದು ಕೇಳಿದ್ದರೆ ಅವಳು ಖುಷಿಗೊಳ್ಳುತ್ತಿದ್ದಳು.

ಅವಳಿಗೆ ದೇಹದಲ್ಲಿ ಯಾವ ಅರೆ-ಕೊರೆಯೂ ಇಲ್ಲದ್ದರಿಂದ ಅವಳಿಗೆ ಏನೂ ಅನ್ನಿಸುತ್ತಿರಲಿಲ್ಲ. ಆದರೆ ತಾಕಾಹಾಶಿಯ ಬೆಳವಣಿಗೆ ನಿಂತುಹೋಗಿತ್ತು. ಅದು ಅವನಿಗೂ ತಿಳಿದಿತ್ತು. ಈ ಕಾರಣಕ್ಕಾಗಿಯೇ ಕ್ರೀಡಾ ದಿನದಂದು ತಾಕಾಹಾಶಿ ಮುಂದೆ ಬರುವಂತಹ ಆಟಗಳನ್ನು ಮುಖ್ಯೋಪಾಧ್ಯಾಯರು ರೂಪಿಸಿದ್ದರು. ತಾಕಾಹಾಶಿಯಂಥವರು ತಮ್ಮ ದೇಹದ ಬಗೆಗಿನ ಕೀಳರಿಮೆಯಿಂದ ಹೊರಬರಲಿ

ಎಂದು ಬತ್ತಲೆಯಾಗಿ ಈಜಲು ಪ್ರೋತ್ಸಾಹಿಸುತ್ತಿದ್ದರು. ತಾಕಾಹಾಶಿ ಮತ್ತು ಯಾಸುಕೀ-ಚಾನ್‌ರಂಥ ಅಂಗವಿಕಲ ಮಕ್ಕಳು ತಮ್ಮ ಕೀಳರಿಮೆಯನ್ನು ಮೀರಲು ಸಾಧ್ಯವಾಗುವಂತಹ ಎಲ್ಲವನ್ನೂ ಮುತುವರ್ಜಿಯಿಂದ ಅವರು ಮಾಡುತ್ತಿದ್ದರು. ಆದರೆ ತಾಕಾಹಾಶಿ ಮುದ್ದಾಗಿ ಕಂಡನೆಂಬ ಕಾರಣಕ್ಕೆ ಸ್ವಲ್ಪವೂ ಯೋಚಿಸದೆ ಅವನಿಗೆ ಬಾಲವಿದೆಯಾ ಎಂದು ಯಾರಾದರೂ ಕೇಳುತ್ತಾರೆಂಬುದನ್ನು ಹೇಗೆ ಯೋಚಿಸಿದರೂ ಮುಖ್ಯೋಪಾಧ್ಯಾಯರಿಗೆ ಜೀರ್ಣಿಸಿಕೊಳ್ಳಲು ಆಗುತ್ತಿರಲಿಲ್ಲ.

ಆಕೆ ಹೀಗೆ ಕೇಳುತ್ತಿದ್ದಾಗ ಮುಖ್ಯೋಪಾಧ್ಯಾಯರು ಆ ತರಗತಿಯ ಭೇಟಿಗಾಗಿ ಹೋಗಿದ್ದು ಅವರು ಹಿಂದೆ ನಿಂತು ಕೇಳಿಸಿಕೊಂಡಿದ್ದರು.

ತರಗತಿಯ ಅಧ್ಯಾಪಕಿ ಅಳುತ್ತಿರುವುದು ಈಗ ತೊತ್ತೊ-ಚಾನ್‌ಗೆ ಕೇಳಿಸುತ್ತಿತ್ತು. "ನಾನು ಮಾಡಿದ್ದು ತುಂಬಾ ತಪ್ಪಾಯ್ತು" ಆಕೆ ಬಿಕ್ಕಳಿಸುತ್ತಿದ್ದಳು. "ತಾಕಾಹಾಶಿಯ ಹತ್ತಿರ ಕ್ಷಮೆಯನ್ನು ನಾನು ಹೇಗೆ ಕೇಳಲಿ?"

ಮುಖ್ಯೋಪಾಧ್ಯಾಯರು ಏನೂ ಹೇಳಲಿಲ್ಲ. ತೊತ್ತೊ-ಚಾನ್‌ಗೆ ಗಾಜಿನ ಕಿಟಕಿಯ ಆಕಡೆ ಇದ್ದದ್ದರಿಂದ ಅವರ ಮುಖ ಸ್ಪಷ್ಟವಾಗಿ ಕಾಣುತ್ತಿರಲಿಲ್ಲ. ಅವರ ಬಳಿ ಓಡಿಹೋಗಲೇ ಎಂದು ಅವಳಿಗೆ ಅನ್ನಿಸಿತು. ವಿಷಯ ಏನೆಂದು ಅವಳಿಗೂ ಗೊತ್ತಾಗುತ್ತಿರಲಿಲ್ಲವಾದರೂ ಮುಖ್ಯೋಪಾಧ್ಯಾಯರು ನಿಜಕ್ಕೂ ಮಕ್ಕಳ ಸ್ನೇಹಿತರೆಂದು ಅವಳಿಗನಿಸಿತ್ತು. ಓಯಿಗೂ ಹಾಗೇ ಅನ್ನಿಸಿರಬೇಕು.

ತರಗತಿಯ ಅಧ್ಯಾಪಕಿಯನ್ನು ಮಿಕ್ಕ ಉಪಾಧ್ಯಾಯರುಗಳೆದುರು ಮಾತನಾಡಿಸದೆ ಅಡಿಗೆ ಮನೆಗೆ ಕರೆದು ಮಾತನಾಡುಸುತ್ತಿರುವುದನ್ನು ಕಂಡು ತೊತ್ತೊ-ಚಾನ್‌ಳಿಗೆ ಹೃದಯ ತುಂಬಿ ಬಂದಿತ್ತು. ತೊತ್ತೊ-ಚಾನ್‌ಳಿಗೆ ಆ ಸಮಯದಲ್ಲಿ ಇದು ಅರ್ಥವಾಗದೇ ಹೋದರೂ, ಅವರು ನಿಜಾರ್ಥದಲ್ಲಿ ಅತ್ಯುತ್ತಮ ಶಿಕ್ಷಣ ತಜ್ಞರೆಂಬುದನ್ನು ಅದು ತೋರಿಸುತ್ತಿತ್ತು. ಅವರ ಧ್ವನಿ ಮತ್ತು ಮಾತುಗಳು ಅವಳ ಹೃದಯದಲ್ಲಿ ಶಾಶ್ವತವಾಗಿ ಮನೆಮಾಡಿದ್ದುವು.

ವಸಂತ ಸಮೀಪಿಸಿತ್ತು. ತೊಮೊಯೆದಲ್ಲಿ ತೊತ್ತೊ-ಚಾನ್‌ಳ ಎರಡನೇ ವಸಂತ ಮತ್ತು ಹೊಸ ವರ್ಷದ ಪ್ರಾರಂಭ.

## ತೊಮೊಯೆದಲ್ಲಿ ತೊತ್ತೊ-ಚಾನ್‌ಳ ಎರಡನೇ ವರ್ಷ

ಶಾಲಾ ಆವರಣದಲ್ಲಿನ ಮರಗಳೆಲ್ಲಾ ಹೊಸ ಚಿಗುರೊಡೆಯುತ್ತಾ ಬಳ್ಳಿಗಳೆಲ್ಲಾ ಹೂಬಿಟ್ಟು ನಿಂತಿದ್ದವು. ವಿಧವಿಧದ ಹೂಗಳೆಲ್ಲಾ ಮುಖವರಳಿಸಿ ನಸುನಗುತ್ತಾ "ಹೇಗಿದ್ದೀರಿ?" ಎಂದು ಕೇಳುತ್ತಿರುವಂತಿತ್ತು, ತೊಮೊಯೆದ ಮಕ್ಕಳು ಕೈ-ಕಾಲು ತೊಳೆಯುವ ಸಣ್ಣ ಕೊಳದಲ್ಲಿದ್ದ ಚಿನ್ನದ ಬಣ್ಣದ ಮೀನುಗಳು ಖುಷಿಯಾಗಿ ಮೈ ಕೊಂಕಿಸುತ್ತಾ ಈಜಾಡಿಕೊಂಡಿದ್ದವು.

"ವಸಂತದ ಆಗಮನವಾಗಿದೆ" ಎಂದು ವಿಶೇಷವಾಗಿಯೇನೂ ಹೇಳಬೇಕಾಗಿರಲಿಲ್ಲ. ಥಳಥಳಿಸುವ ಕಾಲಕ್ಕೆ ಘೋಷಣೆಯೇನೂ ಬೇಕಾಗಿರಲಿಲ್ಲ.

ವಸಂತದ ಇರುವು ಸರ್ವಜನಿತ.

ತೊತ್ತೊ-ಚಾನ್ ತೊಮೊಯೆಗೆ ಅಮ್ಮನೊಡನೆ ಬಂದು ಸರಿಯಾಗಿ ಒಂದು ವರ್ಷವಾಗಿತ್ತು. ನೆಲದಿಂದ ಬೆಳೆಯುತ್ತಿರುವಂತಿದ್ದ ಗೇಟನ್ನು, ರೈಲುಗಾಡಿ ತರಗತಿಯನ್ನು ಕಂಡು ಅವಳೆಷ್ಟು ಪುಳಕಗೊಂಡಿದ್ದಳು! ಸೊಸಾಕು ಕೊಬಾಯಾಶಿ ತನ್ನ ಸ್ನೇಹಿತರಾದ ಮೇಲೆ ಕುಣಿದು ಕುಪ್ಪಳಿಸಿದ್ದಳು. ಈಗ ತೊತ್ತೊ-ಚಾನ್ ಮತ್ತು ಅವಳ ತರಗತಿಯವರು ಹಳಬರಾಗಿ ಎರಡನೇ ತರಗತಿ ಪ್ರವೇಶಿಸುತ್ತಿದ್ದರೆ ಒಂದನೇ ತರಗತಿಗೆ ಹೊಸದಾಗಿ ಬಂದ ಮಕ್ಕಳು ವರ್ಷದ ಹಿಂದೆ ತೊತ್ತೊ-ಚಾನ್ ಮಾಡಿದ್ದಂತೆಯೇ ಪ್ರತಿಯೊಂದನ್ನು ಕುತೂಹಲದಿಂದ ನೋಡುತ್ತಲಿದ್ದರು.

ತೊತ್ತೊ-ಚಾನ್ ಪಾಲಿಗೆ ಅದೊಂದು ಮಹತ್ವದ ವರ್ಷವಾಗಿತ್ತು. ಪ್ರತಿ ದಿನವನ್ನೂ ಹೊಸದರ ನಿರೀಕ್ಷೆಯಲ್ಲೇ ಕಳೆದಿದ್ದಳು. ಈಗಲೂ ಅವಳಿಗೆ ಬೀದಿ ಸಂಗೀತಗಾರರೆಂದರೆ ಇಷ್ಟವೇ. ಆದರೆ ಈಗ ಅದರ ಜತೆ ಇನ್ನೂ ಅನೇಕ ವಿಚಾರಗಳನ್ನು ಆನಂದಿಸಲು ಕಲಿತಿದ್ದಳು. ಹಳೆಯ ಶಾಲೆಯಲ್ಲಿ ಕಾಟ ತಾಳಲಾರದೆ ತರಗತಿಯಿಂದ ಹೊರಹಾಕಲ್ಪಟ್ಟ ಹುಡುಗಿ ತೊಮೊಯೆದ ಘನತೆವೆತ್ತ ಮಗುವಾಗಿದ್ದಳು.

ಅನೇಕ ತಂದೆ-ತಾಯಿಗಳು ತೊಮೊಯೆದ ಶಿಕ್ಷಣ ಪದ್ಧತಿಯನ್ನು ತಪ್ಪಾಗಿ ಗ್ರಹಿಸಿಕೊಂಡಿದ್ದರು. ತೊತ್ತೊ-ಚಾನ್‌ಳ ತಂದೆ-ತಾಯಿ ಕೂಡ ತಾವು ಮಾಡಿದ್ದು ಸರಿಯಾಯಿತೇ ಎಂದು ಯೋಚಿಸಿದ ಕ್ಷಣಗಳುಂಟು. ಕೊಬಾಯಾಶಿಯವರ ಶಿಕ್ಷಣ ಕ್ರಮವನ್ನು ಮೇಲು ಮೇಲಿಂದ ನೋಡಿ ಏನೇನೋ ಅರ್ಥಮಾಡಿಕೊಂಡಿದ್ದ ಕೆಲ ತಂದೆತಾಯಿಗಳು ತಮ್ಮ ಮಕ್ಕಳನ್ನು ಬೇರೆ ಶಾಲೆಗೆ ವರ್ಗಾಯಿಸಿದ್ದರು. ಆದರೆ ತೊಮೊಯೆ ಬಿಡಲು ಮಕ್ಕಳು ಸ್ವಲ್ಪವೂ ಇಷ್ಟಪಡುತ್ತಿರಲಿಲ್ಲ. ಬಿಡುವ ಸುದ್ದಿ ಕೇಳಿದರೇ ಅಳುತ್ತಿದ್ದರು. ಅದೃಷ್ಟವಶಾತ್ ತೊತ್ತೊ-ಚಾನ್‌ಳ ತರಗತಿಯವರು ಯಾರೂ ಬಿಡಲಿಲ್ಲ. ಆದರೆ ಅವಳಿಗಿಂತ ಒಂದು ತರಗತಿ ಮುಂದಿದ್ದ ಹುಡುಗನೊಬ್ಬ ಒಂದೇ ಸಮನೆ ಅಳುತ್ತಿದ್ದ. ನೆಲದ ಮೇಲೆ ಬಿದ್ದು ಹೊರಳಾಡುತ್ತಾ ಹತಾಶೆಯನ್ನು ಹೊರಚೆಲ್ಲುವಂತೆ ಮುಖ್ಯೋಪಾಧ್ಯಾಯರ ಬೆನ್ನ ಮೇಲೆ ಬಿಗಿ ಹಿಡಿದ ಮುಷ್ಟಿಯಿಂದ ಒಂದೇ ಸಮ ಗುದ್ದುತ್ತಿದ್ದ. ಮುಖ್ಯೋಪಾಧ್ಯಾಯರ ಕಣ್ಣುಗಳೂ ಅತ್ತು ಕೆಂಪಾಗಿದ್ದವು. ಕೊನೆಗೂ ಅವನ ತಂದೆ-ತಾಯಿ ಅವನನ್ನು ಶಾಲೆಯಿಂದ ಕರೆದುಕೊಂಡೇ ಹೋದರು. ಅವನು ಹೋಗುವಾಗ ಹಿಂದಿರುಗಿ ನೋಡುತ್ತಾ ಕೈ ಕೊಡವುತ್ತಾ ಹೋಗುತ್ತಿದ್ದ.

ಆದರೆ ಇಂತಹ ದುಃಖದ ಸನ್ನಿವೇಶಗಳು ಕಡಿಮೆಯೇ. ತೊತ್ತೊ-ಚಾನ್ ಈಗ ಹೊಸ ತರಗತಿಗೆ ಬಂದಿದ್ದಳು. ಬರಲಿರುವ ಆನಂದದ ದಿನಗಳು ಹಾಗೂ ವಿಸ್ಮಯಗಳ ನಿರೀಕ್ಷೆಯಲ್ಲಿದ್ದಳು. ಅವಳ ಪಾಟಿಚೀಲ ಈಗ ಸರಿಯಾಗಿ ಬೆನ್ನೇರಿ ಕುಳಿತಿತ್ತು.

## ಹಂಸದ ಕೊಳ

'ಹಂಸದ ಕೊಳ'ವೆನ್ನುವ ಬ್ಯಾಲೆಯನ್ನು ನೋಡಲು ತೊತ್ತೊ-ಚಾನ್ ಹಿಬಿಯ ಹಾಲಿಗೆ ಹೋಗಿದ್ದಳು. ಅತ್ಯುತ್ತಮ ತಂಡವೊಂದು ಪ್ರದರ್ಶನ ನೀಡುತ್ತಿತ್ತು. ತಂಡದಲ್ಲಿ ತೊತ್ತೊ-ಚಾನ್ ತಂದೆಯ ವಯೋಲಿನ್ ವಾದನವಿತ್ತು.

ಹಂಸಗಳ ರಾಣಿಯು ತಲೆಯ ಮೇಲೆ ಹೊಳೆಯುವ ಕಿರೀಟ ಧರಿಸಿ ಲೀಲಾಜಾಲವಾಗಿ ಗಾಳಿಯಲ್ಲಿ ನಿಜವಾದ ಹಂಸದ ರೀತಿಯಲ್ಲೇ ಹಾರಾಡುತ್ತಿದ್ದಳು ಅಥವಾ ಅವಳು ಹಾಗೆ ಹಾರಾಡುತ್ತಿರುವಂತೆ ತೊತ್ತೊ-ಚಾನ್‌ಳಿಗನ್ನಿಸಿತ್ತು. ರಾಜಕುಮಾರನು ಹಂಸ ರಾಣಿಯಲ್ಲಿ ಅನುರಕ್ತನಾಗಿ ಬೇರೆಲ್ಲರನ್ನು ಧಿಕ್ಕರಿಸಿದ್ದನು. ಕೊನೆಯದಾಗಿ ಅವರಿಬ್ಬರೂ ತುಂಬಾ ನಾಜೂಕಾಗಿ ನರ್ತಿಸಿದರು. ಸಂಗೀತ ಕೂಡ ತೊತ್ತೊ-ಚಾನ್‌ಳಿಗೆ ತುಂಬಾ ಹಿಡಿಸಿತ್ತು. ಮನೆಗೆ ಬಂದ ಮೇಲೂ ಅವಳಿಗೆ ಅದೇ ಗುಂಗು. ಮಾರನೆಯ ಮುಂಜಾನೆ ಎದ್ದವಳೇ ಹಲ್ಲನ್ನು ಉಜ್ಜದೆ ಅಡಿಗೆ ಮನೆಗೆ ನೇರ ಹೋಗಿ ಅಮ್ಮನ ಬಳಿ ಘೋಷಿಸಿಬಿಟ್ಟಳು "ನಾನು ಗೂಢಚಾರಿ ಆಗುವುದಿಲ್ಲ, ಬೀದಿ ಸಂಗೀತಗಾರಳೂ ಆಗುವುದಿಲ್ಲ, ಟಿಕೆಟ್ ಚೆಕ್ ಮಾಡುವವಳೂ ಆಗುವುದಿಲ್ಲ, ಬ್ಯಾಲೆ ನರ್ತಕಿಯಾಗಿ ಹಂಸದ ಕೊಳದಲ್ಲಿ ನರ್ತಿಸುವೆ."

"ಓಹೋ" ಎಂದಷ್ಟೇ ಅಂದಳು ಅವರಮ್ಮ.

ತೊತ್ತೊ-ಚಾನ್ ಬ್ಯಾಲೆ ನೋಡಿದ್ದು ಅದೇ ಮೊದಲು. ಆದರೆ ಸುಂದರವಾಗಿ ನರ್ತಿಸುವ ಅಮೇರಿಕನ್ ಯುವತಿ ಇಸದೋರ ಡಂಕನಳ ಬಗ್ಗೆ ಮುಖ್ಯೋಪಾಧ್ಯಾಯರಿಂದ ತುಂಬಾ ಕೇಳಿದ್ದಳು. ಕೊಬಾಯಾಶಿಯವರಂತೆಯೇ ಇಸದೋರ ಡಂಕನಳು ಕೂಡ ಡಾಲ್‌ಕ್ರೋಸ್‌ರಿಂದ ತುಂಬಾ ಪ್ರಭಾವಿತಳಾಗಿದ್ದಳು. ತನಗೆ ಅಚ್ಚುಮೆಚ್ಚಿನವರಾದ ಮುಖ್ಯೋಪಾಧ್ಯಾಯರು ಇಸದೋರ ಡಂಕನಳನ್ನು ಮೆಚ್ಚಿಕೊಂಡಿದ್ದಾರೆನ್ನುವುದೇ ತೊತ್ತೊ-ಚಾನ್‌ಗೆ ಸಾಕಾಗಿತ್ತು. ಅವಳ ನೃತ್ಯವನ್ನು ತೊತ್ತೊ-ಚಾನ್ ನೋಡಿಲ್ಲದಿದ್ದರೂ ಅವಳು ತನಗೆ ಚೆನ್ನಾಗಿ ಗೊತ್ತೆಂಬಂತೆ ಅವಳಿಗನಿಸುತ್ತಿತ್ತು. ಹಾಗಾಗಿ ನರ್ತಕಿಯಾಗುವುದು ಅಸಾಧ್ಯವಾದುದೇನೂ ಅಲ್ಲ ಎಂದು ಅವಳಿಗೆ ಅನಿಸಿತು.

ಶಾಲೆಗೆ ಬಂದು ಸಂಗೀತ ವ್ಯಾಯಾಮ ಕಲಿಸುತ್ತಿದ್ದ ಕೊಬಾಯಾಶಿಯವರ ಸ್ನೇಹಿತರೊಬ್ಬರ ಡಾನ್ಸ್ ಸ್ಟುಡಿಯೋ ಅಲ್ಲೇ ಹತ್ತಿರದಲ್ಲಿತ್ತು. ತೊತ್ತೊ-ಚಾನ್ ಶಾಲೆಯ ನಂತರ ಅವರ ಸ್ಟುಡಿಯೋಕ್ಕೆ ಹೋಗಿ ನೃತ್ಯ ಕಲಿಯಲು ಅವಳ ತಾಯಿ ಏರ್ಪಾಟು ಮಾಡಿದಳು. ತಾಯಿಯು ತೊತ್ತೊ-ಚಾನ್‌ಳಿಗೆ ಇದನ್ನು ಮಾಡು, ಅದನ್ನು ಮಾಡಬೇಡ ಎಂದು ಯಾವತ್ತೂ ಹೇಳುತ್ತಿರಲಿಲ್ಲ. ಆದರೆ ತೊತ್ತೊ-ಚಾನ್ ಏನಾದರೂ ಮಾಡಬೇಕೆಂದು ಇಷ್ಟಪಟ್ಟರೆ ಅದಕ್ಕವಳು ಸಮ್ಮತಿಸುತ್ತಿದ್ದಳು. ಮತ್ತೆ ಸಾವಿರ ಪ್ರಶ್ನೆಗಳನ್ನು ಕೇಳದೆ ಸುಮ್ಮನೆ ಕಲಿಯುವ ವ್ಯವಸ್ಥೆ ಮಾಡುತ್ತಿದ್ದಳು.

ತೊತ್ತೊ-ಚಾನ್ ತಾನು 'ಹಂಸ ಕೊಳದ' ನೃತ್ಯ ಮಾಡಬಲ್ಲ ದಿನಕ್ಕಾಗಿ ಎದುರು ನೋಡುತ್ತಲೇ ಪಾಠ ಕಲಿಯತೊಡಗಿದಳು. ಆದರೆ ಆ ಮಾಸ್ತರರದ್ದೇ ವಿಶೇಷ ವಿಧಾನ. ತೊಮೊಯೆದಲ್ಲಿ ಅವರು ಮಾಡುತ್ತಿದ್ದ ಸಂಗೀತ ವ್ಯಾಯಾಮದ ಜತೆಗೆ,

ಮಕ್ಕಳಿಗೆ ಪಿಯಾನೋ ಇಲ್ಲವೇ ಫೋನೋಗ್ರಾಫಿಕ್ ಸಂಗೀತ ಕಲಿಯಲು ಉತ್ತೇಜಿಸುತ್ತಿದ್ದರು. ಯಾತ್ರಿಗಳು ಮೌಂಟ್ ಫ್ಯೂಜಿಯನ್ನು ಏರುವಾಗ ಹಾಡುವ "ನನ್ನಾತ್ಮವನ್ನು ತೊಳೆ, ಓ, ದೇವನೆ, ಪರ್ವತದ ಮೇಲೆ ಬೆಳಗು" ಮುಂತಾದ ಸಾಲುಗಳನ್ನು ಹೇಳಿಕೊಡುತ್ತಿದ್ದರು. ಅವರೆಲ್ಲಾ ಹಾಡುತ್ತಿರುವಾಗಲೇ ಮಾಸ್ತರು "ಪೋಸ್ ಕೊಡಿ" ಎಂದು ಕೂಗುವರು. ಮಕ್ಕಳು ಯಾವುದಾದರೂ ಒಂದು ಪೋಸ್‌ನಲ್ಲೇ ಅಲುಗಾಡದೆ ನಿಲ್ಲಬೇಕು. ಮಾಸ್ತರೂ "ಆಹಾ !" "ಓಹೋ !" ಹೀಗೆ ಏನಾದರೂ ಉದ್ಗರಿಸುತ್ತಾ ಪೋಸ್ ಕೊಡುವರು. ಕೆಲಸಮಯ ಮೇಲೆ ಆಕಾಶದಲ್ಲಿ ದೇವರನ್ನು ಪ್ರಾರ್ಥಿಸುವಂತೆ, ಮತ್ತೆ ಕೆಲಸಮಯ ತಲೆ ಮೇಲೆ ಎರಡೂ ಕೈ ಹೊತ್ತು ಅಪಾರ ಶೋಕದಿಂದೆಂಬಂತೆ ಕವುಚಿ ಕೂರುವರು. ತೊತ್ತೊ-ಚಾನ್ ಮನದಲ್ಲಿ ಕಿರೀಟ ಮತ್ತು ಸುಂದರ ನೆರಿಗೆಯ ಬಿಳಿ ಉಡುಪು ತೊಟ್ಟ ಹಂಸದ ಚಿತ್ರವೇ ಮನೆಮಾಡಿಬಿಟ್ಟಿತ್ತು. ಅದು 'ಪರ್ವತದ ಮೇಲೆ ಬೆಳಗು'ವಂಥದ್ದೇನೂ ಆಗಿರಲಿಲ್ಲ.

ಒಂದು ದಿನ ತೊತ್ತೊ-ಚಾನ್ ಧೈರ್ಯ ತಂದುಕೊಂಡು ಮಾಸ್ತರ ಬಳಿಗೆ ಹೋದಳು. ತಲೆ ತುಂಬಾ ಗುಂಗುರು ಕೂದಲಿದ್ದ ಆತ ಕೂದಲನ್ನು ಸಣ್ಣಗೆ ಕತ್ತರಿಸಿಕೊಂಡಿದ್ದರು. ತೊತ್ತೊ-ಚಾನ್ ತನ್ನ ತೋಳುಗಳನ್ನು ಹಂಸದ ರೆಕ್ಕೆಯಂತೆ ಬಿಚ್ಚಿ ತೋರಿಸುತ್ತಾ "ನಾವು ಇಂಥದ್ದನ್ನು ಮಾಡುವುದಿಲ್ಲವೇ ?" ಎಂದು ಕೇಳಿದಳು.

"ನಾವಿಲ್ಲಿ ಅಂತಹ ನೃತ್ಯ ಮಾಡುವುದಿಲ್ಲ" ಅವರೆಂದರು.

ದುಂಡಗಿನ ದೊಡ್ಡ ಕಣ್ಣುಗಳನ್ನು ಫಳುಕಿಸುತ್ತಾ ಅವರು ಸುಂದರವಾಗಿ ಕಂಡರು.

ಆನಂತರ ತೊತ್ತೊ-ಚಾನ್ ಸ್ಟುಡಿಯೋಗೆ ಹೋಗುವುದನ್ನು ನಿಲ್ಲಿಸಿಬಿಟ್ಟಳು. ಬ್ಯಾಲೆ ಷೂಗಳನ್ನು ತೊಡದೆ, ಬರೀ ಕಾಲಿನಲ್ಲಿ ನೆಗೆಯುತ್ತಾ ಹಾರಾಡುವುದು, ತನ್ನ ಮನಸ್ಸಿಗೆ ಬಂದಂತಹ ಪೋಸುಗಳನ್ನು ಕೊಡುವುದು ಇವೆಲ್ಲಾ ತೊತ್ತೊ-ಚಾನ್‌ಗೆ ಇಷ್ಟವೇ. ಆದರೆ ಆ ಫಳಗುಟ್ಟುವ ಕಿರೀಟವನ್ನು ಹಾಕಿಕೊಳ್ಳುವ ಆಸೆ ಅವಳಲ್ಲಿ ತೀವ್ರವಾಗಿತ್ತಲ್ಲ !

"ಹಂಸದ ಕೊಳ ಚೆನ್ನಾಗೇ ಇರುತ್ತದೆ. ಆದರೆ ನಿನಗಿಷ್ಟ ಬಂದಂತೆ ನೃತ್ಯ ಹೇಳಿಕೊಡಲು ಸಾಧ್ಯವಿಲ್ಲವಲ್ಲ" ಮಾಸ್ತರರೆಂದಿದ್ದರು.

ಕೆಲವು ವರ್ಷಗಳ ನಂತರವಷ್ಟೇ ತೊತ್ತೊ-ಚಾನ್ ಆತನ ಹೆಸರು ಬಾಕು ಇಷೀ ಎಂದು ಕಂಡುಹಿಡಿದಳು. ಆತ ಜಪಾನಿಗೆ ಮುಕ್ತ ಬ್ಯಾಲೆಯನ್ನು ಪರಿಚಯಿಸಿದ್ದು ಮಾತ್ರವಲ್ಲ ಆ ಪ್ರದೇಶಕ್ಕೆ ಜಿಯುಗಾವೋಕ (ಮುಕ್ತ ಬೆಟ್ಟ) ಎಂಬ ಹೆಸರನ್ನು ಕೊಟ್ಟರು. ತೊತ್ತೊ-ಚಾನ್‌ಳಿಗೆ ಮುಕ್ತ ಬ್ಯಾಲೆಯ ಆನಂದವನ್ನು ಕಲಿಸಲು ಪ್ರಯತ್ನಿಸಿದ್ದ ಅವರಿಗೆ ಆಗ ಐವತ್ತು ವರ್ಷ.

## ಬೇಸಾಯದ ಮಾಸ್ತರು

"ಇವತ್ತು ಇವರೇ ನಿಮ್ಮ ಉಪಾಧ್ಯಾಯರು. ಇವರು ನಿಮಗೆ ಏನೆಲ್ಲಾ ತೋರಿಸಿಕೊಡುತ್ತಾರೆ ಗೊತ್ತಾ ?" ಹೀಗೆನ್ನುತ್ತಾ ಮುಖ್ಯೋಪಾಧ್ಯಾಯರು ಹೊಸ

ಮಾಸ್ತರನ್ನು ಪರಿಚಯಿಸಿದರು. ತೊತ್ತೊ-ಚಾನ್ ಆತನನ್ನು ಸರಿಯಾಗಿ ನೋಡಿದಳು. ಮೊದಲನೆಯದಾಗಿ, ಆತ ಉಪಾಧ್ಯಾಯರಂತೆ ಬಟ್ಟೆ ತೊಟ್ಟಿರಲಿಲ್ಲ. ಆತ ಅಂಗಿಯ ಮೇಲೆ ಹತ್ತಿಯ ಒಂದು ತುಂಡು ಜಾಕೆಟನ್ನು ತೊಟ್ಟಿದ್ದರು. ಕತ್ತಿಗೆ ಟವಲನ್ನು ಸುತ್ತಿದ್ದರು. ನೀಲಿ ಬಣ್ಣದ ಹತ್ತಿ ಬಟ್ಟೆಯ ನಿಕ್ಕರಿನ ತುಂಬಾ ಅಲ್ಲಲ್ಲಿ ತೇಪೆಗಳಿದ್ದವು. ಷೂಗೆ ಬದಲಾಗಿ ಆತ ಕೆಲಸಗಾರರು ಹಾಕಿಕೊಳ್ಳುವ ಎರಡು ಬೆರಳಿನ ದಪ್ಪ ರಬ್ಬರಿನ ಕಾಲುಚೀಲಗಳನ್ನು ಹಾಕಿಕೊಂಡಿದ್ದರು. ಆತನ ತಲೆಯ ಮೇಲೆ ತುಂಬಾ ಹಳೆಯದಾಗಿ ಕಾಣುತ್ತಿದ್ದ ಹುಲ್ಲಿನ ಹ್ಯಾಟಿತ್ತು.

ಮಕ್ಕಳೆಲ್ಲ ಕುಹೋನ್‌ಬುತ್ಸು ದೇವಾಲಯದ ಕೊಳದ ಬಳಿ ಸೇರಿಕೊಂಡರು.

ಮಾಸ್ತರನ್ನು ನೋಡುತ್ತಿದ್ದಂತೆಯೇ ಅವರನ್ನು ಹಿಂದೆ ಎಲ್ಲೋ ನೋಡಿರುವುದರ ನೆನಪಾಯಿತು ತೊತ್ತೊ-ಚಾನ್‌ಳಿಗೆ.

ಆದರೆ ಎಲ್ಲಿ? ಯೋಚಿಸಿದಳು. ಆತನ ಸ್ನೇಹಮಯ ಮುಖ ಬಿಸಿಲಿನ ಝಳಕ್ಕೆ ಸುಕ್ಕಾಗಿ ಮುರುಟಿಕೊಂಡಿತ್ತು. ಆತ ನಡುವಿನ ಬೆಲ್ಟಿನಂತೆ ಕಟ್ಟಿಕೊಂಡಿದ್ದ ಸಣ್ಣ ಉದ್ದನೆಯ ಪೈಪು ಕೂಡ ಪರಿಚಿತವಾಗಿ ಕಂಡಿತು. ಇದ್ದಕ್ಕಿದ್ದಂತೆ ನೆನಪಾಯಿತು.

"ಹಳ್ಳದ ಬದಿ ಹೊಲದಲ್ಲಿ ಕೆಲಸ ಮಾಡುವ ರೈತರಲ್ಲವಾ ನೀವು?" ಅವಳು ಕಣ್ಣರಳಿಸಿ ಕೇಳಿದಳು.

"ಹೌದು" ಮಾಸ್ತರರೆಂದರು. ಅವರು ನಕ್ಕಾಗ ಮುಖ ಮತ್ತಷ್ಟು ಸುರುಟಿಕೊಂಡಿತು. "ನೀವು ಕುಹೋನ್‌ಬುತ್ಸುಗೆ ನಡೆದು ಹೋಗುವಾಗಲೆಲ್ಲಾ ಹೊಲವನ್ನು ದಾಟಿ ಹೋಗುವಿರಲ್ಲಾ ಅದೇ ನನ್ನ ಹೊಲ. ಅದರ ತುಂಬಾ ಸಾಸಿವೆಯ ಗಿಡಗಳು ಹೂ ಬಿಟ್ಟಿವೆಯಲ್ಲ."

"ಓಹೋ, ಹಾಗಾದರೆ ನೀವಿವತ್ತು ನಮ್ಮ ಮಾಸ್ತರಾಗುತ್ತೀರಿ." ಮಕ್ಕಳು ಪುಳಕಿತರಾಗಿ ಕೂಗಿದರು.

"ಹಾಗೇನಿಲ್ಲ" ಆತ ತಲೆಯಲ್ಲಾಡಿಸುತ್ತಾ ಹೇಳಿದರು. "ನಾನು ಮಾಸ್ತರನೇನಲ್ಲ ನಾನೊಬ್ಬ ರೈತ ಅಷ್ಟೇ. ನಿಮ್ಮ ಹೆಡ್‌ಮಾಸ್ತರು ಇದನ್ನು ಮಾಡುವಂತೆ ನನಗೆ ಹೇಳಿದ್ದಾರೆ ಅಷ್ಟೆ."

"ಹೌದು, ಅವರು ಮಾಸ್ತರರೇ. ಅವರು ನಿಮ್ಮ ಬೇಸಾಯದ ಮಾಸ್ತರು" ಅವರ ಪಕ್ಕ ನಿಂತು ಮುಖ್ಯೋಪಾಧ್ಯಾಯರು ಹೇಳಿದರು. "ಹೊಲದ ಬಿತ್ತನೆ ಮಾಡುವುದನ್ನು ನಿಮಗೆ ಕಲಿಸಿಕೊಡಲು ಅವರು ದೊಡ್ಡ ಮನಸ್ಸು ಮಾಡಿ ಒಪ್ಪಿಕೊಂಡಿದ್ದಾರೆ. ಈಗ ಮಕ್ಕಳಿಗೆ ಏನು ಮಾಡಬೇಕೆಂದು ಹೇಳಿಕೊಡಿ. ಶುರು ಮಾಡೋಣ."

ಮಾಮೂಲಿ ಶಾಲೆಗಳಲ್ಲಿ ಮಕ್ಕಳಿಗೆ ಯಾವುದೇ ಪಾಠ ಹೇಳಿಕೊಡುವ ಯಾರಿಗಾದರೂ ಶೈಕ್ಷಣಿಕ ಹಿನ್ನೆಲೆ ಇರಲೇಬೇಕು. ಆದರೆ ಕೊಬಾಯಾಶಿಯರು ಇದಕ್ಕೆಲ್ಲ ಕವಡೆ ಕಿಮ್ಮತ್ತು ಕೊಡುತ್ತಿರಲಿಲ್ಲ. ಮಕ್ಕಳು ನೋಡಿ ಕಲಿಯುವುದೂ ಸಾಕಷ್ಟು ಇರುತ್ತದೆಂದು ಅವರು ನಂಬಿದ್ದರು.

"ಬನ್ನಿ, ಪ್ರಾರಂಭಿಸೋಣ" ರೈತ ಉಪಾಧ್ಯಾಯರೆಂದರು.

ಇವರೆಲ್ಲ ಸೇರಿಕೊಂಡಿದ್ದ ಕುಹೋನ್‌ಬುತ್ಸು ಕೊಳದ ಪಕ್ಕದ ಜಾಗ ತುಂಬಾ ಮನೋಹರವಾಗಿತ್ತು. ಕೊಳದ ಸುತ್ತ ಮರಗಳು ಬೆಳೆದು ನೆರಳು ಕೊಡುತ್ತಿದ್ದವು. ಮಕ್ಕಳಿಗೆ ಸಹಾಯವಾಗುವಂತೆ ಬೇಸಾಯಕ್ಕೆ ಬೇಕಾಗುವ ಗುದ್ದಲಿ-ಸನಿಕೆಗಳನ್ನು ಇರಿಸಲು ಮುಖ್ಯೋಪಾಧ್ಯಾಯರು ಈಗಾಗಲೇ ರೈಲುಬಂಡಿಯ ಭಾಗವೊಂದನ್ನು ಅಲ್ಲಿಗೆ ತಂದಿರಿಸಿದ್ದರು. ಇವರು ಉಳುಮೆ ಮಾಡಬೇಕಾದ ಜಾಗದ ಮಧ್ಯದಲ್ಲಿ ಇರಿಸಲ್ಪಟ್ಟ ಈ ಅರ್ಧ ರೈಲುಬಂಡಿ ನೀಟಾಗಿ ಕಾಣುತ್ತಿತ್ತು.

ಗುದ್ದಲಿ-ಸನಿಕೆಗಳನ್ನು ತೆಗೆದುಕೊಂಡು ಕಳೆ ತೆಗೆಯಲು ಪ್ರಾರಂಭಿಸುವಂತೆ ಬೇಸಾಯದ ಮಾಸ್ತರು ಮಕ್ಕಳಿಗೆ ಹೇಳಿದರು. ಕಳೆಯ ಬಗ್ಗೆ ಅವರು ಮಕ್ಕಳಿಗೆ ವಿವರಿಸಿದರು. ಅವು ಎಷ್ಟು ಗಟ್ಟಿಯಾಗಿರುತ್ತವೆ, ಕೆಲವು ಹೇಗೆ ಬೆಳೆಗಳಿಗಿಂತ ವೇಗವಾಗಿ ಬೆಳೆದು ಬಿಡುತ್ತವೆ ಮತ್ತು ಬೆಳೆಗಳಿಗೆ ಸೂರ್ಯರಶ್ಮಿ ಬೀಳದಂತೆ ಮಾಡುತ್ತವೆ, ಕಳೆಗಳು ಹೇಗೆ ಕೆಟ್ಟ ಕೀಟಗಳಿಗೆ ಆಶ್ರಯಸ್ಥಾನಗಳಾಗಿರುತ್ತವೆ, ಮಣ್ಣಿನ ಸಾರವನ್ನೆಲ್ಲಾ ಹೀರಿಕೊಂಡು ಹೇಗೆ ಬೆಳೆಗಳಿಗೆ ಮಾರಕ ಎಂಬಿತ್ಯಾದಿ ವಿವರಗಳನ್ನೆಲ್ಲಾ ಹೇಳಿದರು. ಅವರು ಮಾತನಾಡುತ್ತಿದ್ದಾಗ ಅವರ ಕೈಗಳು ಮಾತ್ರ ಕಳೆ ಕೀಳುವುದನ್ನು ನಿಲ್ಲಿಸಲಿಲ್ಲ. ಮಕ್ಕಳೂ ಅವರಂತೆಯೇ ಮಾಡಿದರು. ಆನಂತರ ಅವರು ಗುದ್ದಲಿಯಿಂದ ಅಗೆಯುವುದನ್ನು, ಸಾಲು ಮಾಡುವುದನ್ನು ತೋರಿಸಿಕೊಟ್ಟರು. ಗೊಬ್ಬರ ಹಾಕಿ ತೋರಿಸಿದರು. ಒಟ್ಟಾರೆ ಹೊಲದ ಕೆಲಸವೆಲ್ಲವನ್ನೂ ಮಾಡಿ ತೋರಿಸುತ್ತಾ ಜತೆಯಲ್ಲೇ ವಿವರಿಸುತ್ತಾ ಹೇಳಿಕೊಟ್ಟರು.

ಒಂದು ಸಣ್ಣ ಹಾವು ಮೆಲ್ಲಗೆ ತಲೆಎತ್ತಿ ತಾಯಿ-ಚಾನ್‌ನ ಕೈಯನ್ನು ಕಚ್ಚಿಯೇ ಬಿಟ್ಟಿತು. ಸ್ವಲ್ಪ ದೊಡ್ಡ ಹುಡುಗನಾದ ಅವನಿಗೆ ಮಾಸ್ತರು ಆಶ್ವಾಸನೆ ಕೊಟ್ಟರು, "ಇಲ್ಲಿರುವ ಹಾವುಗಳು ವಿಷದ ಹಾವುಗಳಲ್ಲ, ನೀವು ಏನೂ ಮಾಡದಿದ್ದರೆ ಅವು ನಿಮಗೆ ಏನೂ ಮಾಡುವುದಿಲ್ಲ."

ಹೊಲದ ಉಳುಮೆ ಮಾಡುವುದನ್ನು ಹೇಳಿಕೊಡುವುದರ ಜತೆಗೆ ಬೇಸಾಯದ ಉಪಾಧ್ಯಾಯರು ಮಕ್ಕಳಿಗೆ ಕೀಟಗಳು, ಚಿಟ್ಟೆಗಳು, ಹವಾಮಾನ ಮತ್ತು ಇನ್ನೂ ಅನೇಕ ವಿಷಯಗಳ ಬಗ್ಗೆ ಆಸಕ್ತಿಯುಳ್ಳ ವಿಷಯಗಳನ್ನು ಹೇಳಿದರು. ಅವರು ಹೇಳುತ್ತಿದ್ದುದ್ದೆಲ್ಲಾ ಅನುಭವದಿಂದಲೇ ಪಡಕೊಂಡದ್ದೆಂಬುದನ್ನು ಅವರ ಬಲಶಾಲಿ ಕೈಗಳ ಚಲನದ ರೀತಿಯಿಂದಲೇ ತಿಳಿಯುತ್ತಿತ್ತು.

ಉಪಾಧ್ಯಾಯರ ನೆರವಿನೊಂದಿಗೆ ಹೊಲವನ್ನು ನಾಟಿ ಮಾಡಿ ಮುಗಿಸುವ ವೇಳೆಗೆ ಮಕ್ಕಳೆಲ್ಲಾ ಬೆವರಿನಿಂದ ತೊಯ್ದು ಹೋಗಿದ್ದರು. ಕೆಲವೊಂದು ಸಾಲುಗಳು ಸ್ವಲ್ಪ ಸೊಟ್ಟಗಿದ್ದದ್ದನ್ನು ಬಿಟ್ಟರೆ ಆ ಹೊಲದಲ್ಲಿ ಯಾವ ಕಡೆಯಿಂದ ನೋಡಿದರೂ ಸಸಿಗಳ ಸಾಲು ಸ್ಪಷ್ಟವಾಗಿ ತೋರುತ್ತಿತ್ತು.

ಆ ದಿನದಿಂದ ಮಕ್ಕಳು ಆ ರೈತರನ್ನು ತುಂಬಾ ಗೌರವಿಸುತ್ತಿದ್ದರು. ಅವರನ್ನು ಎಲ್ಲಾದರೂ ಕಂಡರೆ, ಅವರು ತುಂಬಾ ದೂರದಲ್ಲಿದ್ದರೂ, "ಅಗೋ ಅಲ್ಲಿ, ನಮ್ಮ ಬೇಸಾಯದ ಮಾಸ್ತರು" ಎಂದು ಕೂಗುತ್ತಿದ್ದರು. ಆತನ ಹತ್ತಿರ ಗೊಬ್ಬರ ಉಳಿದಾಗಲೆಲ್ಲಾ ಅದನ್ನು ಮಕ್ಕಳ ಹೊಲಕ್ಕೆ ತಂದು ಚೆಲ್ಲುತ್ತಿದ್ದರು. ಅವರ ಬೆಳೆಗಳು

ಚೆನ್ನಾಗಿ ಬೆಳೆದವು. ಪ್ರತಿದಿನ ಯಾರಾದರೊಬ್ಬರು ಹೊಲದ ಕಡೆ ಹೋಗಿಬಂದು ಅದು ಹೇಗೆ ಬೆಳೆಯುತ್ತಿದೆಯೆಂದು ಮುಖ್ಯೋಪಾಧ್ಯಾಯರಿಗೂ ಇತರ ಮಕ್ಕಳಿಗೂ ಹೇಳುತ್ತಿದ್ದರು. ತಾವೇ ಬಿತ್ತಿದ ಬೀಜ ಮೊಳಕೆಯೊಡೆದು ಬೆಳೆಯುವುದನ್ನು ಕಾಣುವುದರಲ್ಲಿ ಇರುವ ವಿಸ್ಮಯ ಮತ್ತು ಆನಂದಗಳನ್ನು ಮಕ್ಕಳೆಲ್ಲಾ ಕಂಡುಕೊಂಡರು. ಯಾವಾಗ, ಎಲ್ಲಿ ಮೂರು ನಾಲ್ಕು ಜನ ಸೇರಿಕೊಂಡರೂ ಅವರ ಮಾತು ತಮ್ಮ ಹೊಲದ ಪ್ರಗತಿಯತ್ತ ತಿರುಗುತ್ತಿತ್ತು.

ಪ್ರಪಂಚದಲ್ಲೆಡೆ ಭಯಂಕರ ಘಟನೆಗಳು ನಡೆಯಲು ಪ್ರಾರಂಭವಾಗಿದ್ದುವು. ಆದರೆ ತಮ್ಮ ಹೊಲವನ್ನು ಕುರಿತು ಮಾತನಾಡುವ ಮಕ್ಕಳು ಮಾತ್ರ ಇನ್ನೂ ಶಾಂತಿಯ ಗರ್ಭದಲ್ಲೇ ಸುರಕ್ಷಿತವಾಗಿ ಅಡಗಿಕೊಂಡಿದ್ದರು.

## ಬಯಲಿನಲ್ಲಿ ಅಡುಗೆ

ಒಂದು ದಿನ ಶಾಲೆ ಮುಗಿದ ನಂತರ, ತೊತ್ತೊ-ಚಾನ್ ಯಾರೊಂದಿಗೂ ಮಾತನಾಡದೆ ಯಾರೊಬ್ಬರಿಗೂ ಹೋಗಿ ಬರುತ್ತೇನೆಂದು ಹೇಳದೆ ಜಿಯುಗಾವೋಕ ಕಡೆಗೆ ಓಡಿದಳು. ತನ್ನಷ್ಟಕ್ಕೆ ತಾನೇ "ಸಿಡಿಲು ಕಮ್ಮರಿ ಬಯಲು ಅಡಿಗೆ (ಥಂಡರ್ ಕ್ಯಾನ್ಯಾನ್ ಫೀಲ್ಡ್ ಕಿಚನ್)" ಎಂದು ಬಾರಿ ಬಾರಿ ಹೇಳಿಕೊಳ್ಳುತ್ತಿದ್ದಳು.

ಅದು ಸಣ್ಣ ಹುಡುಗಿಗೆ ಕಷ್ಟದ ವಾಕ್ಯವೇ ಆಗಿತ್ತು. ಆದರೆ 'ರಾಕುಗೊ' ಎನ್ನುವ ಸಚಿತ್ರ ಕಥಾ ಪುಸ್ತಕದಲ್ಲಿರುವ ಹೆಸರಿನಷ್ಟೇನೂ ಕಷ್ಟಕರವಾಗಿರಲಿಲ್ಲ. ತೊತ್ತೊ-ಚಾನ್ ಈ ಪದಗಳನ್ನು ಮರೆಯದಿರಲು ತುಂಬಾ ಏಕಾಗ್ರತೆ ವಹಿಸ ಬೇಕಾಗಿತ್ತು. ಯಾರಾದರೂ ಇದ್ದಕ್ಕಿದ್ದಂತೆ "ಜುಗೇಮು-ಜುಗೇಮು" ಎಂದು ಪ್ರಾರಂಭವಾಗುವ ಆ ಪ್ರಸಿದ್ಧ ಉದ್ದನೆಯ ಹೆಸರನ್ನು ಹೇಳಲು ಪ್ರಾರಂಭಿಸದಿದ್ದರೆ ಅವಳಿಗೆ ಅದು ಪೂರ್ತಿ ಮರೆತುಹೋಗಿಬಿಡುವ ಅಪಾಯವೂ ಇತ್ತು. ನೀರು ನಿಂತ ಸಣ್ಣ ಗುಂಡಿಗಳನ್ನು ಹಾರುವಾಗ ಹೊರಡುವ ಒಂದು ಸಣ್ಣ ಉದ್ಗಾರ ಕೂಡ ಇದನ್ನು ಮರೆಸಿಬಿಡುವ ಸಾಧ್ಯತೆ ಇದ್ದುದ್ದರಿಂದ ನೇರ ನಡೆಯುತ್ತಾ ಅದನ್ನೇ ಪದೇ ಪದೇ ಹೇಳಿಕೊಳ್ಳತೊಡಗಿದಳು. ಅದೃಷ್ಟವಶಾತ್ ರೈಲಿನಲ್ಲಿ ಅವಳನ್ನು ಯಾರೂ ಮಾತನಾಡಿಸಲಿಲ್ಲ, ಮತ್ತು ಕುತೂಹಲ ಕೆರಳಿಸುವಂಥದ್ದೇನನ್ನೂ ಕಂಡುಹಿಡಿಯಲು ಅವಳು ಪ್ರಯತ್ನಿಸಲಿಲ್ಲ. ಹೀಗಾಗಿ ಒಂದೇ ಒಂದು "ಅದೇನದು ?" ಇಲ್ಲದೆ ಸ್ಟೇಷನ್ ತಲುಪಿದಳು. ಆದರೆ ಅವಳು ಸ್ಟೇಷನ್ ಬಿಡುವಾಗ ಅಲ್ಲಿ ಕೆಲಸ ಮಾಡುವ ಅವಳ ಪರಿಚಯದ ಒಬ್ಬ ಮನುಷ್ಯ "ಹಲೋ, ಆಗಲೇ ಬಂದಾಯಿತಾ ?" ಎಂದು ಕೇಳಿದ. ಅವನಿಗೆ ಉತ್ತರಿಸಲು ಬಾಯಿತೆರೆದವಳು ಅನಾಹುತವಾದೀತೆಂದು ಅವನತ್ತ ಕೈಬೀಸಿ ಮನೆಗೆ ಓಡಿದಳು. ಮನೆಯ ಮುಂಬಾಗಿಲು ಪ್ರವೇಶಿಸುತ್ತಿದ್ದಂತೆಯೇ ಅಮ್ಮನನ್ನು ಕೂಗಿ ಹೇಳಿದಳು "ಸಿಡಿಲು ಕಮ್ಮರಿ ಬಯಲು ಅಡಿಗೆ !" ಮೊದಲು ಅಮ್ಮನಿಗೆ ಏನೂ ತಿಳಿಯಲಿಲ್ಲ. ಜೂಡೋ ಉದ್ಗಾರವಿರಬೇಕು ಅಥವಾ ನಲವತ್ತೇಳು ರೋನಿನ್‌ರ ಮೆರವಣಿಗೆಯ ಘೋಷಣೆಯಿರಬೇಕೆಂದು ತಿಳಿದಳು. ಕೊನೆಗೆ ಅವಳಿಗೆ

ಅರ್ಥವಾಯಿತು. ಜಿಯುಗಾವ್ರೋಕದ ಹಿಂದಿನ ತೊಡೊರೊಕಿ ನಿಲ್ದಾಣದ ಸಮೀಪ ಒಂದು ಸುಂದರ ತಾಣವಿತ್ತು. ಅದರ ಹೆಸರು ತೊಡೊರೊಕಿ ಕೀಕೋಕು ಅಥವಾ ಥಂಡರ್ ಕ್ಯಾನ್ಯಾನ್. ಟೋಕಿಯೋದ ಅತ್ಯಂತ ಆಕರ್ಷಕ ಸ್ಥಳಗಳಲ್ಲಿ ಅದು ಒಂದಾಗಿತ್ತು. ಅಲ್ಲಿ ಒಂದು ಜಲಪಾತ, ತೊರೆ ಮತ್ತು ಸುಂದರ ಕಾಡುಗಳಿದ್ದವು. ಬಯಲು ಅಡಿಗೆಯೆಂದರೆ, ಬಹುಷಃ ಮಕ್ಕಳು ಅಲ್ಲಿ ಹೋಗಿ ಅಡುಗೆ ಮಾಡಿ ಊಟ ಮಾಡುತ್ತಿರಬೇಕು. ಮಕ್ಕಳಿಗೆ ಈ ಪದಗಳನ್ನು ಕಲಿಯುವುದು ಎಷ್ಟು ಕಷ್ಟ ಎಂದುಕೊಂಡಳು ಅಮ್ಮ. ಆದರೆ ಮಕ್ಕಳಿಗೆ ಆಸಕ್ತಿ ಹುಟ್ಟಿದ್ದೇ ತಡ ಅವರದನ್ನು ಎಷ್ಟೊಂದು ಸುಲಭವಾಗಿ ಕಲಿತುಬಿಡುತ್ತಾರೆನ್ನುವುದು ಸ್ಪಷ್ಟವಾಗಿತ್ತು.

ತೊತ್ತೊ-ಚಾನ್ ಅಮ್ಮನಿಗೆ ಆ ಕಷ್ಟದ ಪದಗಳ ಬಗ್ಗೆ ಒಂದೊಂದಾಗಿ ಎಲ್ಲ ಮಾಹಿತಿಕೊಟ್ಟಳು. ಬರುವ ಶುಕ್ರವಾರ ಬೆಳಿಗ್ಗೆ ಎಲ್ಲ ಮಕ್ಕಳು ಶಾಲೆಯಲ್ಲಿ ಸೇರಬೇಕು. ಅವರು ತರಬೇಕಾದ್ದೆಂದರೆ ಒಂದು ಸೂಪಿನ ಬಟ್ಟಲು (ಬಾಲ್), ಒಂದು ಅನ್ನದ ಪಾತ್ರೆ, ಊಟದ ಕಡ್ಡಿ (ಚಾಪ್ ಸ್ಟಿಕ್) ಮತ್ತು ಒಂದು ಬಟ್ಟಲು ಅಕ್ಕಿ. ಒಂದು ಬಟ್ಟಲು ಅಕ್ಕಿಯನ್ನು ಬೇಯಿಸಿದಾಗ ಅದು ಎರಡು ಬಟ್ಟಲಾಗುತ್ತದೆಂದು



ಮುಖ್ಯೋಪಾಧ್ಯಾಯರು ಹೇಳಿದ್ದನ್ನು ಹೇಳಲು ಅವಳು ಮರೆಯಲಿಲ್ಲ. ಅವರು ಹಂದಿ ಮಾಂಸದ ಸೂಪನ್ನು ಮಾಡುವುದರಿಂದ ಅವಳಿಗೆ ಸ್ವಲ್ಪ ಹಂದಿಮಾಂಸ ಮತ್ತು ಸ್ವಲ್ಪ ತರಕಾರಿ ಬೇಕಾಗಿತ್ತು. ಮಧ್ಯಾಹ್ನಕ್ಕೆ ಬೇಕಾದರೆ ಸ್ವಲ್ಪ ತಿಂಡಿ ಏನಾದರೂ ತರಬಹುದಾಗಿತ್ತು.

ಮುಂದಿನ ದಿನಗಳಲ್ಲಿ ತೊತ್ತೊ-ಚಾನ್ ಅಮ್ಮನಿಗೆ ಅಂಟಿಕೊಂಡಂತೆ ಅಡಿಗೆ ಮನೆಯಲ್ಲೇ ಇದ್ದು ಅಮ್ಮ ಚಾಕುವನ್ನು ಹೇಗೆ ಬಳಸುತ್ತಾಳೆ, ಪಾತ್ರೆಯನ್ನು ಹೇಗೆ ಹಿಡಿಯುತ್ತಾಳೆ, ಅನ್ನವನ್ನು ಹೇಗೆ ಬಡಿಸುತ್ತಾಳೆ ಎಂದೆಲ್ಲಾ ಎಚ್ಚರಿಕೆಯಿಂದ ನೋಡಿಕೊಂಡಳು. ಅಡಿಗೆ ಮನೆಯಲ್ಲಿದ್ದು ಅಮ್ಮನ ಕೆಲಸ ನೋಡುವುದಕ್ಕೆ ಚೆನ್ನಾಗಿತ್ತು. ಆದರೆ ತೊತ್ತೊ-ಚಾನ್‌ಳಿಗೆ ತುಂಬಾ ಹಿಡಿಸಿದ್ದೆಂದರೆ, ಅಮ್ಮ ಯಾವುದಾದರೂ ಬಿಸಿಯ ಮುಚ್ಚಳವನ್ನು ಎತ್ತಿದ ತಕ್ಷಣ "ಓ ಬಿಸಿ" ಎಂದು ಹೇಳುತ್ತಾ ತನ್ನ ಹೆಬ್ಬೆರಳು ಮತ್ತು ತೋರು ಬೆರಳುಗಳಿಂದ ಹಾಲೆಯನ್ನು ಹಿಡಿದುಕೊಳ್ಳುತ್ತಿದ್ದ ರೀತಿ. "ಕಿವಿಯ ಹಾಲೆಗಳು ತಣ್ಣಗಿರುತ್ತವೆ" ಅಮ್ಮ ವಿವರಿಸಿದ್ದಳು. ಅಡಿಗೆ ಮನೆಯಲ್ಲಿ ತುಂಬಾ ನಿಪುಣತೆಯಿಂದ, ಪ್ರೌಢಳಂತೆ ಕೆಲಸ ನಿರ್ವಹಿಸುತ್ತಿದ್ದ ಅಮ್ಮನ ರೀತಿ-ನೀತಿ ತೊತ್ತೊ-ಚಾನ್‌ಳಿಗೆ ತುಂಬಾ ಹಿಡಿಸಿತ್ತು. "ನಾನು ಸಿಡಿಲು ಕಮ್ಮರಿ ಬಯಲು ಅಡಿಗೆ ಮಾಡುವಾಗ ಅಮ್ಮನಂತೆಯೇ ಮಾಡುತ್ತೇನೆ" ಎಂದು ತನ್ನಷ್ಟಕ್ಕೇ ಹೇಳಿಕೊಂಡಳು.

ಶುಕ್ರವಾರ ಕೊನೆಗೂ ಬಂದೇಬಿಟ್ಟಿತು. ರೈಲಿನಿಂದಿಳಿದು ಅವರೆಲ್ಲಾ ಸಿಡಿಲು ಕಮ್ಮರಿಯನ್ನು ತಲುಪಿದಾಗ ಮುಖ್ಯೋಪಾಧ್ಯಾಯರು ಕಾಡಿನಲ್ಲಿ ಎಲ್ಲ ಮಕ್ಕಳೂ ಇರುವುದನ್ನು ಖಚಿತಪಡಿಸಿಕೊಂಡರು. ದಟ್ಟ ಮರಗಳ ನಡುವಿನಿಂದ ತೂರಿಬಂದ ಸೂರ್ಯರಶ್ಮಿ ಅವರ ಪ್ರೀತಿಪಾತ್ರ ಚಿಣ್ಣರ ಮುಖದ ಮೇಲೆ ಪ್ರತಿಫಲಿಸಿತ್ತು. ಮುಖ್ಯೋಪಾಧ್ಯಾಯರು ಏನು ಹೇಳುತ್ತಾರೆಂದು ಕೇಳಲು ಮಕ್ಕಳೆಲ್ಲಾ ಕಾದಿದ್ದರು. ಅವರ ಹಿಂಬದಿಯಲ್ಲಿ ವಿಖ್ಯಾತ ಜಲಪಾತ ಲಯಬದ್ಧವಾಗಿ ಧುಮ್ಮಿಕ್ಕುತ್ತಿತ್ತು. "ಈಗ" ಮುಖ್ಯೋಪಾಧ್ಯಾಯರು ಪ್ರಾರಂಭಿಸಿದರು, "ನಾವು ಗುಂಪುಗಳಲ್ಲಿ ಭಾಗವಾಗಿ ಉಪಾಧ್ಯಾಯರುಗಳು ತಂದಿರುವ ಇಟ್ಟಿಗೆಗಳಿಂದ ಒಲೆಗಳನ್ನು ಹಾಕುವ. ಬಳಿಕ ನಿಮ್ಮಲ್ಲಿ ಕೆಲವರು ತೊರೆಯಲ್ಲಿ ಅಕ್ಕಿಯನ್ನು ತೊಳೆದು ತಂದು ಬೇಯಲು ಹಾಕಬಹುದು. ನಂತರ ಹಂದಿ ಮಾಂಸದ ಸೂಪು ಮಾಡಲು ಪ್ರಾರಂಭಿಸೋಣ. ಸರಿ, ಈಗ ಶುರು ಮಾಡೋಣವಾ ?"

ಮಕ್ಕಳು "ಕಲ್ಲು, ಕತ್ತರಿ, ಕಾಗದ" ಎಂದು ಹೇಳುತ್ತಾ ಬೇರೆಬೇರೆ ಗುಂಪುಗಳಲ್ಲಿ ಭಾಗವಾದರು. ಕೇವಲ 50 ಮಕ್ಕಳಿದ್ದುದರಿಂದ ಆರು ಗುಂಪೇ ಸಾಕಾಗುವಂತಿತ್ತು. ಸಣ್ಣ ಗುಂಡಿಗಳನ್ನು ತೋಡಿ ಸುತ್ತಲೂ ಇಟ್ಟಿಗೆಗಳನ್ನು ಇಡಲಾಯಿತು. ನಂತರ ಸೂಪಿನ ಮತ್ತು ಅನ್ನದ ಪಾತ್ರೆಗಳನ್ನು ಇಡುವಾಗ ಆಧಾರವಾಗಿರಲೆಂದು ಸಣ್ಣ ಕಬ್ಬಿಣದ ತಂತಿಯನ್ನು ಸುತ್ತಲೂ ಸುತ್ತಿದ್ದರು. ಇದೊಂದು ಕಡೆ ನಡೆಯುತ್ತಿದ್ದರೆ, ಕೆಲವರು ಕಾಡಿನಿಂದ ಪುರುಲೆಯನ್ನು ಆರಿಸಿ ತಂದರು. ಮತ್ತೆ ಕೆಲವರು ತೊರೆಯಲ್ಲಿ ಅಕ್ಕಿ ತೆಳೆದು ತರಲು ಹೋದರು. ಮಕ್ಕಳೇ ಮುಂದಾಗಿ ತಮ್ಮ ತಮ್ಮಲ್ಲೇ

ಕೆಲಸಗಳನ್ನು ಹಂಚಿಕೊಂಡಿದ್ದರು. ತೊತ್ತೊ-ಚಾನ್ ತರಕಾರಿ ಹೆಚ್ಚಿ ಕೊಡಲು ಮತ್ತು ಸೂಪನ್ನು ನೋಡಿಕೊಳ್ಳಲು ಮುಂದಾದಳು. ತೊತ್ತೊ-ಚಾನ್‌ಳಿಗಿಂತ ಎರಡು ವರ್ಷ ದೊಡ್ಡವನಾಗಿದ್ದ ಹುಡುಗನೊಬ್ಬ ತರಕಾರಿ ಹೆಚ್ಚಲು ತಾನೂ ಮುಂದೆ ಬಂದು ತುಂಬಾ ದೊಡ್ಡದಾಗಿ ಇಲ್ಲವೇ ತುಂಬಾ ಸಣ್ಣದಾಗಿ ಕತ್ತರಿಸುತ್ತಾ ಫಜೀತಿಗೆ ತಂದಿಟ್ಟನು. ಮೂಗಿನಿಂದ ನೀರು ಸುರಿಯುತ್ತಿದ್ದರೂ, ಎಡಬಿಡದೆ ಕೆಲಸ ಮಾಡುತ್ತಲೇ ಇದ್ದನು. ತೊತ್ತೊ-ಚಾನ್ ಅಮ್ಮನನ್ನು ಅನುಕರಿಸಿ ಆಲೂಗಡ್ಡೆ, ಈರುಳ್ಳಿ, ಬೀಟ್‌ರೂಟ್ ಬದನೆಕಾಯಿಗಳನ್ನೆಲ್ಲಾ ಒಂದೇ ಸಮನಾದ ತುಂಡುಗಳಾಗಿ ಕುಶಲತೆಯಿಂದ ಕತ್ತರಿಸಿದಳು. ಬಿಳೀ ಬದನೆ ಮತ್ತು ಸೌತೆಕಾಯಿಗಳನ್ನು ತೆಳುವಾದ ಹೋಳುಗಳಾಗಿ ಸೀಳಿ ಉಪ್ಪನ್ನು ಹಚ್ಚಿ ಉಪ್ಪಿನಕಾಯಿ ಮಾಡುವುದನ್ನು ವಹಿಸಿಕೊಂಡಳು. ಸಣ್ಣಪುಟ್ಟ ಕೆಲಸಗಳಲ್ಲಿ ತೊಂದರೆ ಪಡುತ್ತಿದ್ದ ದೊಡ್ಡ ಹುಡುಗರನೇಕರಿಗೆ ಕೆಲ ಸಲಹೆಗಳನ್ನು ಕೊಟ್ಟಳು. ತಾನು ನಿಜವಾಗಿಯೂ ಅಮ್ಮನೇ ಆಗಿಬಿಟ್ಟಿರುವಂತೆ ತೊತ್ತೊ-ಚಾನ್‌ಳಿಗೆ ಅನ್ನಿಸತೊಡಗಿತ್ತು. ಅವಳ ಉಪ್ಪಿನಕಾಯಿ ಎಲ್ಲರಿಗೂ ಇಷ್ಟವಾಗಿತ್ತು.

''ಸುಮ್ಮನೆ ಮಾಡಿ ನೋಡೋಣ ಅಂತ ಮಾಡಿದೆ, ಅಷ್ಟೆ'' ಅವಳು ಹೆಚ್ಚುಗಾರಿಕೆ ತೋರದಿರಲು ಪ್ರಯತ್ನಿಸಿದಳು.

ಹಂದಿ ಮಾಂಸದ ಸಾರಿಗೆ ಒಗ್ಗರಣೆ ಕೊಡಬೇಕಾಗಿ ಬಂದಾಗ, ಎಲ್ಲರ ಬಳಿಯೂ ಈರುಳ್ಳಿ ಕೇಳಬೇಕಾಯಿತು. ಎಲ್ಲ ಗುಂಪಿನಿಂದಲೂ ಆಶ್ಚರ್ಯದ ''ವಾವ್, ರೇ'' ಎಂಬ ಉದ್ಗಾರಗಳೂ, ನಗುವೂ ತೇಲಿಬರುತ್ತಿತ್ತು. ಈ ದನಿಯೊಂದಿಗೆ ತಾವೂ ಸೇರುವಂತೆ ಕಾಡಿನಲ್ಲಿನ ಹಕ್ಕಿಗಳು ಚಿಲಿಪಿಲಿಗುಟ್ಟುತ್ತಿದ್ದವು. ಎಲ್ಲ ಪಾತ್ರೆಗಳಿಂದಲೂ ಬಾಯಲ್ಲಿ ನೀರೂರಿಸುವ ವಾಸನೆ ಹೊಡೆಯತೊಡಗಿತು. ಇವತ್ತಿನ ತನಕ ಮಕ್ಕಳು ಅಡಿಗೆ ಮಾಡುವುದನ್ನು ವಿವರವಾಗಿ ನೋಡಿರುವುದಾಗಲೀ ಅಥವಾ ಒಲೆ ಬೆಂಕಿ ಸರಿಪಡಿಸುವುದಾಗಲೀ ಮಾಡಿರಲಿಲ್ಲ. ಟೇಬಲಿನಲ್ಲಿ ತಮ್ಮ ಮುಂದೆ ಇಟ್ಟುದನ್ನು ತೆಪ್ಪಗೆ ತಿನ್ನುತ್ತಿದ್ದರಷ್ಟೇ. ತಾವೇ ಅಡಿಗೆ ಮಾಡುವಾಗ ಸಿಗುವ ಆನಂದ, ಅಡಿಗೆ ಕೆಟ್ಟು ಹೋದಾಗ ಆಗುವ ಬೇಸರ, ಬೇರೆ ಬೇರೆ ಪದಾರ್ಥಗಳನ್ನು ಹಾಕುತ್ತಾ ಹೋದಾಗ ಆಗುವ ಬದಲಾವಣೆಗಳು ಇವೆಲ್ಲ ಅವರಿಗೆ ಹೊಸ ಅನುಭವವೇ ಆಗಿತ್ತು.

ಕೊನೆಗೊಮ್ಮೆ ಎಲ್ಲ ಒಲೆಗಳ ಮೇಲಿನ ಅಡುಗೆಯೂ ಪೂರ್ಣಗೊಂಡಿತ್ತು. ಮಕ್ಕಳೆಲ್ಲ ವರ್ತುಲಾಕಾರದಲ್ಲಿ ಕೂರಲು ಸಾಧ್ಯವಾಗುವಂತೆ ಮುಖ್ಯೋಪಾಧ್ಯಾಯರು ಹುಲ್ಲಿನ ಮೇಲೆ ಜಾಗ ಹೊಂದಿಸಿದರು. ಪ್ರತಿ ಗುಂಪಿನ ಮುಂದೆಯೂ ಒಂದು ಸೂಪಿನ ಪಾತ್ರೆ ಮತ್ತು ಒಂದು ಅನ್ನದ ಪಾತ್ರೆ ಇರಿಸಲಾಗಿತ್ತು. ಆದರೆ ತನ್ನ ಹೃದಯ ಹೊಕ್ಕಿದ್ದ ಕ್ರಿಯೆಯನ್ನು ಮಾಡುವವರೆಗೆ ತನ್ನ ಗುಂಪಿನ ಮುಂದೆ ಇರಿಸಿದ್ದ ಸೂಪಿನ ಪಾತ್ರೆಯನ್ನು ತೆಗೆಯಲು ತೊತ್ತೊ-ಚಾನ್ ಬಿಡಲಿಲ್ಲ. ಬಿಸಿ ಮುಚ್ಚಳವನ್ನು ತೆಗೆಯುತ್ತಾ ''ಓ ಬಿಸಿ'' ಎಂದು ಸ್ವಲ್ಪ ಪ್ರಜ್ಞಾಪೂರ್ವಕವಾಗಿಯೇ ಘೋಷಿಸುತ್ತಾ ತನ್ನೆರಡು ಕೈಬೆರಳುಗಳಿಂದ ಕಿವಿ ಹಾಲೆಯನ್ನು ಮುಟ್ಟಿಕೊಂಡಳು. ಆ ನಂತರವಷ್ಟೇ ''ಈಗ ಅದನ್ನು ತಗೋ'' ಎಂದು

ಅವಳು ಹೇಳಿದ್ದು. ಅವಳ ಈ ಕ್ರಿಯೆ ಯಾರ ಮೇಲೂ ಯಾವುದೇ ಪರಿಣಾಮ ಬೀರಲಿಲ್ಲ. ಆದರೆ ತೊತ್ತೊ-ಚಾನ್‌ಳಿಗೆ ಮಾತ್ರ ತುಂಬಾ ತೃಪ್ತಿಯಾಗಿತ್ತು.

ಎಲ್ಲರ ದೃಷ್ಟಿಯೂ ಅನ್ನದ ಪಾತ್ರೆಗಳ ಮತ್ತು ಹಬೆಯಾಡುವ ಸೂಪಿನ ಬಟ್ಟಲುಗಳ ಮೇಲೆ ನೆಟ್ಟಿತ್ತು. ಮಕ್ಕಳು ತಾವೇ ಮಾಡಿದ ಮೊಟ್ಟ ಮೊದಲ ಅಡುಗೆ ಇದು.

"ಅಗಿಯಿರಿ, ಅಗಿಯಿರಿ" ಹಾಡಿದ ನಂತರ 'ತಾದಾಕಿಮಾಸು' ಹೇಳಿದ ಮೇಲೆ ಕಾಡಿನಲ್ಲಿ ಎಲ್ಲವೂ ನಿಶ್ಶಬ್ದವಾಯಿತು. ಜಲಪಾತದ ಭೋರ್ಗರೆತ ಬಿಟ್ಟರೆ ಉಳಿದೆಲ್ಲವೂ ಮೌನವಾಗಿತ್ತು.

## "ನೀನು ನಿಜವಾಗಿಯೂ ಒಳ್ಳೆಯ ಹುಡುಗಿ !"

"ನೀನು ನಿಜವಾಗಿಯೂ ಒಳ್ಳೆಯ ಹುಡುಗಿ ಗೊತ್ತಾ!" ಪ್ರತಿಸಲ ತೊತ್ತೊ-ಚಾನ್‌ಳನ್ನು ನೋಡಿದಾಗ ಮುಖ್ಯೋಪಾಧ್ಯಾಯರು ಹೇಳುತ್ತಿದ್ದ ಮಾತಿದು. ಆತ ಪ್ರತಿಸಲ ಹೇಳಿದಾಗಲೂ ತೊತ್ತೊ-ಚಾನ್ ಮುಗುಳ್ನಕ್ಕು, ಕೊಂಚ ಕುಪ್ಪಳಿಸಿ ಮತ್ತೆ ಹೇಳುವಳು "ಹೌದು ನಾನು ಒಳ್ಳೆಯ ಹುಡುಗಿ" ಹಾಗೆಂದು ಅವಳು ನಂಬಿಕೊಂಡಿದ್ದಳು ಕೂಡ.

ನಿಜವಾಗಿಯೂ ತೊತ್ತೊ-ಚಾನ್ ಅನೇಕ ರೀತಿಯಲ್ಲಿ ಒಳ್ಳೆಯ ಹುಡುಗಿಯಾಗಿದ್ದಳು. ಅವಳು ಎಲ್ಲರ ಜತೆ-ಅದೂ ವಿಶೇಷವಾಗಿ ದೈಹಿಕ ನ್ಯೂನತೆಗಳಿದ್ದ ಸ್ನೇಹಿತರ ಜತೆ ಸ್ನೇಹದಿಂದಿರುತ್ತಿದ್ದಳು. ಯಾವಾಗಲೂ ಅವರ ಪರವಹಿಸಿಕೊಳ್ಳುತ್ತಿದ್ದಳು. ಬೇರೆ ಶಾಲೆಯ ಮಕ್ಕಳು ಕ್ರೂರ ಮಾತುಗಳನ್ನೇನಾದರೂ, ಆಡಿದ್ದೇ ಆದರೆ, ಕೊನೆಯಲ್ಲಿ ತಾನು ಅಳಬೇಕಾಗಿ ಬಂದರೂ ಲೆಕ್ಕಿಸದೆ ಜಗಳಕ್ಕೆ ಏರಿ ಹೋಗುತ್ತಿದ್ದಳು. ಯಾವುದೇ ಪ್ರಾಣಿಗೆ ಏನೇ ಗಾಯವಾಗಿದ್ದರೂ ತನ್ನಿಂದ ಸಾಧ್ಯವಾದ ಸಹಾಯ ಮಾಡುತ್ತಿದ್ದಳು. ಆದರೆ ಅದೇ ಸಮಯದಲ್ಲಿ, ಏನಾದರೂ ವಿಶೇಷವಾದದ್ದು ಕಂಡಾಗ ತನ್ನ ಕುತೂಹಲವನ್ನು ತಣಿಸಲು ಹೋಗಿ ಒಂದಲ್ಲಾ ಒಂದು ಫಜೀತಿಗೆ ಸಿಕ್ಕಿಹಾಕಿಕೊಳ್ಳುತ್ತಿದ್ದ ರೀತಿ ಉಪಾಧ್ಯಾಯರಿಗೆಲ್ಲಾ ಆಶ್ಚರ್ಯ ತರಿಸುತ್ತಿತ್ತು.

ಅವಳು ಅನೇಕ ವಿಧದ ಆಶ್ಚರ್ಯಪಡುವಂಥ ಕಾರ್ಯಗಳನ್ನು ಮಾಡುತ್ತಿದ್ದಳು. ಬೆಳಗಿನ ಸಭೆಗೆ ಬರುವಾಗ ತನ್ನ ಜಡೆಗಳೆರಡನ್ನೂ ಕಂಕುಳ ಸಂದಿನಲ್ಲಿ ಸಿಕ್ಕಿಸಿ ಕೊಂಡರೇನು ಮಾಡುವುದೆಂದು ತಲೆಕೆಡಿಸಿಕೊಳ್ಳುವಳು. ಒಂದು ದಿನ ರೈಲು ಬಂಡಿ ಗುಡಿಸುವುದು ಅವಳ ಸರದಿಯಾಗಿತ್ತು. ಅವಳು ಅಲ್ಲಿ ಒಂದು ಕಳ್ಳ ಬಾಗಿಲನ್ನು ಗುರುತಿಸಿದ್ದಳು. ಗುಡಿಸಿದ ಕಸವನ್ನೆಲ್ಲ ಅದರಲ್ಲಿ ತುಂಬಿದಳು. ರೈಲುಬಂಡಿ ಓಡಾಡುತ್ತಿದ್ದಾಗ ಅದರ ಯಂತ್ರಗಳನ್ನು ಪರೀಕ್ಷಿಸಲು ಮೂಲತಃ ಉಪಯೋಗಿಸುತ್ತಿದ್ದ ಬಾಗಿಲು ಅದು. ಆನಂತರ ಅವಳಿಗೆ ಅದನ್ನು ಪುನಃ ಮುಚ್ಚಲು ಸಾಧ್ಯವಾಗದೆ ಎಲ್ಲರಿಗೂ ವಿಪರೀತ ತೊಂದರೆ ಕೊಟ್ಟಿದ್ದಳು. ಮಾಂಸದಂಗಡಿಯಲ್ಲಿ

ಮಾಂಸವನ್ನು ಹೇಗೆ ಕೊಂಡಿಗಳಲ್ಲಿ ಜೋತು ಹಾಕುತ್ತಾರೆನ್ನುವುದನ್ನು ಯಾರೋ ಅವಳಿಗೆ ವಿವರಿಸಿದ್ದರು. ಒಂದು ದಿನ ಅವಳು ವ್ಯಾಯಾಮಕ್ಕೆಂದು ಹಾಕಿದ್ದ ಅಡ್ಡ ಸರಳುಗಳಲ್ಲಿ ಒಂದನ್ನು ಎಗರಿ ಹಿಡಿದು ಮೇಲಿಂದ ಜೋತುಬಿದ್ದಳು. ಸಾಕಷ್ಟು ಸಮಯ ಹಾಗೇ ಜೋತುಬಿದ್ದಿದ್ದಳು. ಯಾರಾದರೂ ಉಪಾಧ್ಯಾಯರು ಅವಳನ್ನು ಕಂಡು "ಅಲ್ಲೇನು ಮಾಡುತ್ತಿದ್ದೀಯಾ" ಎಂದು ಕೇಳಿದರೆ "ನಾನಿವತ್ತು ಮಾಂಸದ ತುಂಡು" ಎಂದು ಕೂಗಿ ಹೇಳುತ್ತಿದ್ದಳು. ಒಮ್ಮೆ ಆಯತಪ್ಪಿ ಧಡಾರೆಂದು ನೆಲಕ್ಕೆ ಬಿದ್ದಿದ್ದಳು. ಬಿದ್ದ ರಭಸಕ್ಕೆ ಶ್ವಾಸಕೋಶದ ಗಾಳಿಯೆಲ್ಲ ಹೊರಬಂದು ಎದೆ ಹಿಡಿದುಕೊಂಡಂತಾಗಿ ಎಷ್ಟೋ ಹೊತ್ತು ಮಾತನಾಡಲು ಆಗಿರಲಿಲ್ಲ. ಇನ್ನೊಂದು ದಿನ ಕಕ್ಕಸ್ಸು ಗುಂಡಿಗೆ ಧುಮುಕಿದ್ದ ಕತೆ ಎಲ್ಲರಿಗೂ ಗೊತ್ತು.

ಅವಳು ಯಾವಾಗಲೂ ಇಂತಹ ಅಸಂಖ್ಯಾತ ಚಟುವಟಿಕೆಗಳಲ್ಲಿ ತೊಡಗಿ ಏನಾದರೂ ತೊಂದರೆ ಮಾಡಿಕೊಳ್ಳುತ್ತಲೇ ಇರುತ್ತಿದ್ದಳು. ಆದರೆ ಮುಖ್ಯೋಪಾಧ್ಯಾಯರು ಎಂದೂ ತಂದೆ-ತಾಯಿಗಳಿಗೆ ದೂರು ಕಳಿಸಿರಲಿಲ್ಲ. ಬೇರೆ ಮಕ್ಕಳ ವಿಚಾರದಲ್ಲೂ ಹಾಗೆಯೇ. ಏನೇ ವಿಷಯವಾದರೂ ಅದು ಸಂಬಂಧಪಟ್ಟ ಮಗು ಮತ್ತು ಮುಖ್ಯೋಪಾಧ್ಯಾಯರ ನಡುವೆಯೇ ಇತ್ಯರ್ಥವಾಗಿ ಬಿಡುತ್ತಿತ್ತು. ತೊತ್ತೊ-ಚಾನ್ ಜೊತೆಗೆ ಮೊದಲ ದಿನ ನಾಲ್ಕು ಗಂಟೆಗಳ ಕಾಲ ಮಾತನಾಡಿದ ಹಾಗೆಯೇ, ಯಾವುದೇ ಘಟನೆಯ ಬಗ್ಗೆ ಮಗು ಏನು ಹೇಳುತ್ತದೆ ಎಂದು ವಿವರವಾಗಿ ಕೇಳಿಸಿಕೊಳ್ಳುತ್ತಿದ್ದರು. ಅವರ ನೆಪಗಳನ್ನು, ಸಮರ್ಥನೆಗಳನ್ನು ಕೇಳುತ್ತಿದ್ದರು. ಮಗು ಏನಾದರೂ ನಿಜವಾಗಿಯೂ ಕೆಟ್ಟದ್ದನ್ನೇ ಮಾಡಿದ್ದರೆ ಮತ್ತು ಕೊನೆಗೆ ಆ ತಪ್ಪನ್ನು ಕಂಡುಕೊಂಡದ್ದೇ ಆದರೆ, ಆಗ ಅವರು ಹೇಳುವರು "ಈಗ ತಪ್ಪೊಪ್ಪಿಕೋ."

ತೊತ್ತೊ-ಚಾನ್‌ಳ ವಿಚಾರದಲ್ಲಿ ಬೇರೆ ಮಕ್ಕಳ ತಂದೆ-ತಾಯಿಗಳು ಮತ್ತು ಇತರ ಉಪಾಧ್ಯಾಯರುಗಳ ಆಕ್ಷೇಪಣೆ ಮುಖ್ಯೋಪಾಧ್ಯಾಯರ ಕಿವಿ ತಲುಪದೇ ಇರಲಿಲ್ಲ. ಆದ್ದರಿಂದಲೇ, ಅವಕಾಶ ಸಿಕ್ಕಾಗಲೆಲ್ಲಾ ಅವರು ತೊತ್ತೊ-ಚಾನ್‌ಳಿಗೆ "ನೀನು ನಿಜವಾಗಿಯೂ ಒಳ್ಳೆಯ ಹುಡುಗಿ ಗೊತ್ತಾ!" ಎಂದು ಹೇಳುತ್ತಿದ್ದುದು. ಯಾರಾದರೂ ದೊಡ್ಡವರು ಅವರು ಹಾಗೆ ಹೇಳುತ್ತಿದ್ದುದನ್ನು ಕೇಳಿದ್ದರೆ ಅವರು "ನಿಜವಾಗಿಯೂ" ಎಂದು ಒತ್ತು ಕೊಟ್ಟು ಹೇಳುತ್ತಿದ್ದುದರ ಗುಟ್ಟು ಅವರಿಗೆ ಅರಿವಾಗುತ್ತಿತ್ತು.

ಮುಖ್ಯೋಪಾಧ್ಯಾಯರು ತೊತ್ತೊ-ಚಾನ್‌ಳಿಗೆ ಇದನ್ನು ಅರ್ಥಮಾಡಿಸ ಬೇಕಾಗಿತ್ತು: "ನೀನು ಅನೇಕ ವಿಚಾರಗಳಲ್ಲಿ ಒಳ್ಳೆಯ ಹುಡುಗಿಯಲ್ಲ ಎಂದು ಅನೇಕರು ಭಾವಿಸಬಹುದು. ಆದರೆ ನಿನ್ನ ನಿಜವಾದ ಗುಣ ಕೆಟ್ಟದಲ್ಲ. ಅದರಲ್ಲಿ ತುಂಬಾ ಒಳ್ಳೆಯ ಅಂಶಗಳಿವೆ. ನನಗದು ಚೆನ್ನಾಗಿ ಗೊತ್ತು." ಆದರೆ ತೊತ್ತೊ-ಚಾನ್‌ಳಿಗೆ ಇದು ಅರ್ಥವಾದದ್ದು ಎಷ್ಟೋ ವರ್ಷಗಳ ನಂತರವಷ್ಟೇ. ಆತ ಹೇಳುತ್ತಿರುವುದರ ನಿಜವಾದ ಅರ್ಥ ತಿಳಿಯದೇ ಹೋದರೂ "ತಾನು ಒಳ್ಳೆಯ ಹುಡುಗಿ" ಎಂಬ ಭಾವನೆಯನ್ನು ಮುಖ್ಯೋಪಾಧ್ಯಾಯರು ಅವಳಲ್ಲಿ ಆಳವಾಗಿ

ಬೇರೂರುವಂತೆ ಮಾಡಿದ್ದರು. ಏನಾದರೂ ಕೆಲಸ ಮಾಡುತ್ತಿರುವಾಗಲೂ ಅವಳ ಹೃದಯದಲ್ಲಿ ಅವರ ಈ ಮಾತು ಪ್ರತಿಧ್ವನಿಸುತ್ತಿತ್ತು. ಅನೇಕ ಸಲ ತನ್ನ ಕ್ರಿಯೆಯ ಬಗ್ಗೆ ಮತ್ತೆ ಯೋಚಿಸಿ "ದೇವರೇ, ತಪ್ಪಿದ್ದರೆ ಕ್ಷಮಿಸು" ಎಂದುಕೊಳ್ಳುತ್ತಿದ್ದಳು.

ಕೊಬಾಯಾಶಿಯವರು ಅವಳು ತೊಮೊಯೆದಲ್ಲಿದಷ್ಟು ದಿನವೂ ನಿರಂತರವಾಗಿ ಹೇಳುತ್ತಲೇ ಇದ್ದ ಆ ಮಾತು ಅವಳ ಇಡೀ ಬದುಕು ರೂಪುಗೊಳ್ಳಲು ತಳಹದಿಯಾಗಿತ್ತು, "ನೀನು ನಿಜವಾಗಿಯೂ ಒಳ್ಳೆಯ ಹುಡುಗಿ ಗೊತ್ತಾ!"

## ಅವನ ವಧು

ತೊತ್ತೊ-ಚಾನ್‌ಗೆ ತುಂಬಾ ದುಃಖವಾಗಿತ್ತು.

ಆಗ ಅವಳು ಮೂರನೇ ತರಗತಿಯಲ್ಲಿದ್ದಳು, ತಾಯಿ-ಚಾನ್‌ನನ್ನು ತುಂಬಾ ಇಷ್ಟಪಡುತ್ತಿದ್ದಳು. ಅವನು ಬುದ್ಧಿವಂತ, ಭೌತಶಾಸ್ತ್ರದಲ್ಲಿ ಆಸಕ್ತ. ಅವನು ಇಂಗ್ಲಿಷನ್ನು ಕಲಿಯುತ್ತಿದ್ದ. 'ನರಿ' ಎನ್ನುವುದಕ್ಕೆ ಇಂಗ್ಲಿಷ್‌ನ ಪದವನ್ನು ತೊತ್ತೊ-ಚಾನ್‌ಗೆ ಹೇಳಿಕೊಟ್ಟವನೇ ಅವನು.

"ತೊತ್ತೊ-ಚಾನ್" ಅವನೆಂದ, "ನರಿಗೆ ಇಂಗ್ಲಿಷದಲ್ಲಿ ಏನು ಹೇಳ್ತಾರೆ ಗೊತ್ತಾ ? ಫಾಕ್ಸ್."

"ಫಾಕ್ಸ್."

ಇಡೀ ದಿನ ತೊತ್ತೊ-ಚಾನ್ ಆ ಪದದ ಗುಂಗಿನಲ್ಲೇ ಕಳೆದಳು. ಆನಂತರದಿಂದ ಪ್ರತಿದಿನ ರೈಲುಬಂಡಿ ತರಗತಿ ತಲುಪಿದ್ದೇ ತಡ ತಾಯಿ-ಚಾನ್‌ನ ಪೆನ್ಸಿಲ್ ಪೆಟ್ಟಿಗೆಯಲ್ಲಿನ ಎಲ್ಲ ಪೆನ್ಸಿಲ್ಲುಗಳನ್ನು ತನ್ನ ಸಣ್ಣ ಚಾಕುವಿನಿಂದ ಚೂಪಾಗಿ ಹೆರೆದು ಕೊಡುತ್ತಿದ್ದಳು. ತನ್ನವರ ಬಗ್ಗೆ ಅವಳಿಗೆ ಯೋಚನೆಯಿರಲಿಲ್ಲ. ಅದನ್ನು ಹಲ್ಲಿನಲ್ಲಿಯೋ ಹೇಗೇಗೋ ಕಿತ್ತುಗೊಳ್ಳುತ್ತಿದ್ದಳು.

ಇಷ್ಟೆಲ್ಲಾ ಇದ್ದರೂ ತಾಯಿ-ಚಾನ್‌ನು ಅಂದು ಅವಳಿಗೆ ಒರಟಾಗಿ ಮಾತನಾಡಿದ್ದ. ಇದಾದದ್ದು ಊಟದ ಸಮಯದಲ್ಲಿ. ತೊತ್ತೊ-ಚಾನ್ ಸಭಾಂಗಣದ ಹಿಂಭಾಗದ ಆ ಕುಖ್ಯಾತ ಕಕ್ಕಸ್ಸು ಗುಂಡಿಯ ಬಳಿ ತಳಾಯಿಸಿಕೊಂಡಿದ್ದಳು.

"ತೊತ್ತೊ-ಚಾನ್ !"

ತಾಯಿ-ಚಾನ್‌ನ ಧ್ವನಿಯಲ್ಲಿ ಸಿಟ್ಟಿತ್ತು. ಅವನು ಸ್ವಲ್ಪ ನಿಲ್ಲಿಸಿ ಉಸಿರೆಳೆದುಕೊಂಡು ಮತ್ತೆ ಹೇಳಿದ "ನಾನು ದೊಡ್ಡೋನಾದ ಮೇಲೆ ನಿನ್ನನ್ನು ಮದುವೆಯಾಗೋದೇ ಇಲ್ಲ, ನೀನು ಎಷ್ಟಾದರೂ ಕೇಳಿಕೋ." ಹೇಳಿದವನೇ ನೆಲ ನೋಡುತ್ತಾ ಸರ ಸರ ಹೊರಟು ಹೋದ.

ತೊತ್ತೊ-ಚಾನ್ ಗರಬಡಿದವಳಂತೆ ಅವನ ತಲೆ ಮರೆಯಾಗುವವರೆಗೂ ನೋಡುತ್ತಲೇ ಇದ್ದಳು. ತೊತ್ತೊ-ಚಾನ್ ಅವನನ್ನು ತುಂಬಾ ಗೌರವಿಸುತ್ತಿದ್ದಳು. ಅವನ ತಲೆ ಅವನ ದೇಹಕ್ಕೆ ಎಷ್ಟು ದೊಡ್ಡದಾಗಿ ಕಾಣುತ್ತಿತ್ತೆಂದರೆ ಮಕ್ಕಳೆಲ್ಲಾ ಅವನನ್ನು 'ಅಸಮ' ಎಂದು ಕರೆಯುತ್ತಿದ್ದರು.

ತೊತ್ತೊ-ಚಾನ್ ಜೇಬಿನೊಳಕ್ಕೆ ಕೈ ಇಳಿಸಿ ಯೋಚಿಸುತ್ತಾ ನಿಂತಳು. ಅವನು ಸಿಟ್ಟಾಗುವಂಥದ್ದು ತಾನೇನು ಮಾಡಿದೆನೆಂದು ಎಷ್ಟು ಪ್ರಯತ್ನಿಸಿದರೂ ನೆನಪಾಗಲ್ಲೊಲ್ಲದು. ತನ್ನ ತರಗತಿಯ ಮಿಯೋ-ಚಾನ್‌ಳ ಹತ್ತಿರ ಇದನ್ನು ಹೇಳಿಕೊಂಡಳು. ತೊತ್ತೊ-ಚಾನ್ ಹೇಳಿದ್ದನ್ನು ಕೇಳಿಸಿಕೊಂಡ ಮಿಯೋ-ಚಾನ್ ಪ್ರೌಢೆಯಂತೆ ಹೇಳಿದಳು "ಮತ್ತಿನ್ನೇನು ? ಇವತ್ತು ಸುಮೋ ಕುಸ್ತಿಯಲ್ಲಿ ನೀನು ಅವನನ್ನು ರಿಂಗಿಂದ ಹೊರಗೆ ತಳ್ಳಲಿಲ್ಲವಾ ? ಅವನ ತಲೆ ದೊಡ್ಡದಾಗಿರೋದ್ರಿಂದ ಅವನು ರಿಂಗಿಂದ ಹೇಗೆ ಎಗರಿ ಬಿದ್ದ ನೋಡು. ಅದೇ ಸಿಟ್ಟು ಅವನಿಗೆ ನಿನ್ನ ಮೇಲೆ."

ತೊತ್ತೊ-ಚಾನ್ ತುಂಬಾ ಪಶ್ಚಾತ್ತಾಪ ಪಟ್ಟುಕೊಂಡಳು. ಹೌದು, ತಾನು ಅವನನ್ನು ತಳ್ಳಿದ್ದು ನಿಜ. ಆದರೆ ತಾನು ತುಂಬಾ ಇಷ್ಟಪಡುವ, ಯಾವಾಗಲೂ ಪೆನ್ಸಿಲ್ ಚೂಪಾಗಿಸಿಕೊಡುವ ಪ್ರೀತಿಯ ಹುಡುಗನನ್ನು ಹಾಗೆ ತಳ್ಳುವಂಥ ಬುದ್ಧಿ ತನಗೆ ಯಾಕಾದರೂ ಬಂತೋ ? ಆದರೆ ಈಗ ತುಂಬಾ ತಡವಾಗಿತ್ತು. ಅವಳು ಇನ್ನೆಂದೂ ಅವನ ವಧುವಾಗಲು ಸಾಧ್ಯವೇ ಇಲ್ಲ.

"ನಾನು ಸುಮ್ಮನೆ ಅವನಿಗೆ ಪೆನ್ಸಿಲು ಹೆರೆದು ಕೊಡುತ್ತಲೇ ಇರುತ್ತೇನೆ. ಎಷ್ಟೆಂದರೂ ಅವನು ನನ್ನ ಪ್ರೀತಿಯ ಹುಡುಗ ತಾನೇ ?"



## ಹಳೆಯ ಹರಕು-ಮುರುಕು ಶಾಲೆ

ಪ್ರಾಥಮಿಕ ಶಾಲೆಯ ಮಕ್ಕಳಲ್ಲಿ ಜನಪ್ರಿಯವಾಗಿದ್ದ ಒಂದು ಪ್ರಾಸಗೀತೆ ಇತ್ತು. ಹಿಂದಿನ ಶಾಲೆಯಲ್ಲಿ ಅದು ತುಂಬಾ ಪ್ರಚಲಿತವಾಗಿತ್ತು. ಮಕ್ಕಳು ಮನೆಗೆ ಹೋಗುವಾಗ ತಮ್ಮ ಶಾಲೆಯತ್ತ ಹಿಂದಿರುಗಿ ನೋಡುತ್ತಾ ಹೀಗೆ ಹೇಳುವರು:

ಅಕಾಮತ್ಸು ಶಾಲೆ ಹಳೆಯದು, ಕಳಪೆಯದು;
ಒಳಗೆ ಮಾತ್ರ ಭವ್ಯವಾಗಿದೆ.

ಬೇರೆ ಶಾಲೆಯ ಮಕ್ಕಳು ಅಕಾಮತ್ಸು ಶಾಲೆಯ ಮುಂದೆ ಹಾದು ಹೋಗುವಾಗ ಅದರತ್ತ ಕೈಮಾಡಿ ತೋರಿಸಿ ಹೀಗೆ ಹೇಳುವರು:

ಅಕಾಮತ್ಸು ಶಾಲೆ ಭವ್ಯವಾಗಿದೆ,
ಆದರೆ ಒಳಗೆ ಮಾತ್ರ ಹಳೆಯದು, ಕಳಪೆಯದು.

ಕೊನೆಯಲ್ಲಿ ಒರಟಾದ ಕೆಟ್ಟ ದನಿಯಲ್ಲಿ ಮುಗಿಸುವರು.

ಶಾಲೆ ಭವ್ಯವ್ಯೋ, ಹರಕು-ಮುರುಕೋ ಎಂಬುದನ್ನು ಮೊದಲ ಸಾಲಿನಲ್ಲಿ ಹೇಳಲಾಗುತ್ತಿತ್ತು. ಅದು ಶಾಲೆಯ ಕಟ್ಟಡಕ್ಕೆ ಅನ್ವಯಿಸುತ್ತಿತ್ತು. ಇದರ ಎರಡನೇ ಸಾಲೇ ತುಂಬಾ ಮುಖ್ಯವಾದದ್ದು. ಅದು ಶಾಲೆಯ ಒಳಗನ್ನು ಹೇಳುತ್ತಿತ್ತು. ಹಾಗಾಗಿ ಮೊದಲ ಸಾಲಿನಲ್ಲಿ ನಿಮ್ಮ ಶಾಲೆ ಹೊರಗಿಂದ ಹರಕು-ಮುರಕು ಎಂದು ಹೇಳಿದರೂ ಪರವಾಗಿರುತ್ತಿರಲಿಲ್ಲ. ಅದು ಒಳಗಡೆ ಹೇಗಿದೆ ಎಂಬುದಷ್ಟೇ ಮುಖ್ಯ. ಈ ಪ್ರಾಸಗೀತವನ್ನು ಸಾಮಾನ್ಯವಾಗಿ 5-6 ಮಕ್ಕಳು ಒಟ್ಟಿಗೆ ಹಾಡುತ್ತಿದ್ದರು.

ಒಂದು ದಿನ ವಾಡಿಕೆಯಂತೆ ಶಾಲೆಯ ನಂತರ ತೊಮೊಯೆದ ಮಕ್ಕಳೆಲ್ಲಾ ಆಡಿಕೊಳ್ಳುತ್ತಿದ್ದರು. ಕೊನೆಯ ಗಂಟೆ ಹೊಡೆದು ಶಾಲೆ ಬಿಡುವವರೆಗೂ ಅವರು ತಮಗಿಷ್ಟವಾದ್ದನ್ನು ಮಾಡಿಕೊಳ್ಳಬಹುದಾಗಿತ್ತು. ಮಕ್ಕಳಿಗೆ ತಮಗಿಷ್ಟವಾದದ್ದನ್ನು ಮಾಡಿಕೊಳ್ಳಲು ಸಾಕಷ್ಟು ಸಮಯ ಬೇಕೆನ್ನುವುದು ಮುಖ್ಯೋಪಾಧ್ಯಾಯರ ಆಲೋಚನೆಯಾಗಿತ್ತು. ಹೀಗಾಗಿ ತರಗತಿಗಳ ನಂತರದ ಈ ಪಿರಿಯಡ್ಡು ಬೇರೆ ಶಾಲೆಗಳಿಗಿಂತ ದೀರ್ಘವಾಗಿರುತ್ತಿತ್ತು. ಆ ದಿನ ಕೆಲವರು ಚೆಂಡಾಡುತ್ತಿದ್ದರು, ಕೆಲವರು ಮಣ್ಣಲ್ಲಿ ಆಡುತ್ತಾ ಮೈಯೆಲ್ಲಾ ಕೊಳೆ ಮಾಡಿಕೊಂಡಿದ್ದರು, ಕೆಲವರು ಹೂ ಮಡಿಯಲ್ಲಿ ಹೂಗಳನ್ನು ಮುದ್ದಿಸುತ್ತಿದ್ದರು, ಕೆಲ ದೊಡ್ಡ ಹುಡುಗಿಯರು ಮೆಟ್ಟಿಲ ಮೇಲೆ ಕುಳಿತು ಹರಟುತ್ತಿದ್ದರೆ ಮತ್ತೆ ಹಲವರು ಮರ ಹತ್ತುತ್ತಿದ್ದರು. ಒಟ್ಟಾರೆ ತಮಗೆ ಬೇಕಾದ್ದನ್ನು ಅವರೆಲ್ಲ ಮಾಡಿಕೊಳ್ಳುತ್ತಿದ್ದರು. ತಾಯಿ-ಚಾನ್‌ನಂಥ ಕೆಲವರು ತರಗತಿಯಲ್ಲೇ ಉಳಿದು ಯಾವುದೋ ರಾಸಾಯನಿಕ ಪ್ರಯೋಗದಲ್ಲಿ ತೊಡಗಿದ್ದರು. ಒಂದಷ್ಟು ಮಕ್ಕಳು ಲೈಬ್ರರಿಯಲ್ಲಿ ಓದಿಕೊಳ್ಳುತ್ತಿದ್ದರು. ಪ್ರಾಣಿಗಳೆಂದರೆ ಇಷ್ಟಪಡುತ್ತಿದ್ದ ಕಾವಲುಗಾರನು ಬೆಕ್ಕನ್ನು ಹಿಡಿದು ತಲೆಕೆಳಗೆ ಮಾಡಿ ಅದರ ಕಿವಿಯ ಒಳಗಡೆ ಏನನ್ನೋ ಪರೀಕ್ಷಿಸುತ್ತಿದ್ದನು. ಎಲ್ಲರೂ ತಮಗಿಷ್ಟ ಬಂದಂತೆ ಖುಷಿಯಾಗಿ ಕಾಲಕಳೆಯುತ್ತಿದ್ದರು.

ಇದ್ದಕ್ಕಿದಂತೆ ಶಾಲೆಯ ಹೊರಗಡೆ ಜೋರಾಗಿ ಯಾರೋ ಹಾಡುವುದು ಕೇಳಿಸಿತು:

ತೊಮೊಯೆ ಶಾಲೆ ಹಳೆಯದು, ಕಳಪೆಯದು
ಒಳಗೂ ಕಳಪೆ, ಹೊರಗೂ ಕಳಪೆ.

"ಇದು ಅನ್ಯಾಯ," ತೊತ್ತೊ-ಚಾನ್‌ಳಿಗನ್ನಿಸಿತು. ಅವಳು ಗೇಟಿನ ಬಳಿಯೇ ಇದ್ದದ್ದರಿಂದ (ಅದೇನೂ ನಿಜಾರ್ಥದಲ್ಲಿ ಗೇಟಾಗಿರಲಿಲ್ಲವಲ್ಲ! ಎರಡೂ ಬದಿಯಲ್ಲಿ ಕೈಮರಗಳಿಂದ ಚಿಗುರೊಡೆದು ಎಲೆಗಳು ವಿಸ್ತರಿಸಿಕೊಂಡಿದ್ದವು.) ಅವರು ಹೇಳುವುದು ಕಿವಿಗೆ ಬಿತ್ತು. ಇದು ಅತಿಯಾಯಿತು. ತಮ್ಮ ಶಾಲೆಯನ್ನು ಹೊರಗೂ ಮತ್ತು ಒಳಗೂ ಹಳೆಯದು, ಕಳಪೆಯದು ಎನ್ನುವುದೆಂದರೆ! ಅವಳಿಗೆ ರೇಗಿಹೋಯಿತು. ಉಳಿದವರೂ ಸಿಟ್ಟಿನಿಂದ ಗೇಟಿನ ಕಡೆ ಓಡಿ ಬರುತ್ತಿದ್ದರು. ಕೇಕೆ ಹಾಕಿ ನಗುತ್ತಾ ಓಡುವ ಮುನ್ನ ಆ ಹುಡುಗರು "ಹಳೆಯದು, ಕಳಪೆಯದು" ಎಂದು ಪುನಃ ಒತ್ತಿ ಹೇಳಿದರು.

ತೊತ್ತೊ-ಚಾನ್‌ಳಿಗೆ ಎಷ್ಟೊಂದು ರೇಗಿಹೋಗಿತ್ತೆಂದರೆ ಆ ಹುಡುಗರ ಹಿಂದೆಯೇ ಒಬ್ಬಳೇ ಓಡಿದಳು. ಆದರೆ ಅವರೆಲ್ಲಾ ವೇಗವಾಗಿ ಓಡಿ ಅಡ್ಡರಸ್ತೆಯಲ್ಲಿ ಮಿಂಚಿನಂತೆ ಮಾಯವಾದರು. ತೊತ್ತೊ-ಚಾನ್ ತುಂಬಾ ಅಸಮಾಧಾನದಿಂದ ಶಾಲೆಗೆ ಹಿಂದಿರುಗಿದಳು. ಹಿಂದಿರುಗುತ್ತಾ ಅವಳು ಹಾಡತೊಡಗಿದಳು:

ತೊಮೊಯೆ ಶಾಲೆ ಭವ್ಯವಾಗಿದೆ,

ಸ್ವಲ್ಪ ದೂರ ನಡೆದು ಮತ್ತೆ ಮುಂದುವರೆಸಿದಳು:

ಹೊರಗೂ ಭವ್ಯ, ಒಳಗೂ ಭವ್ಯ.

ಹಾಗೆ ಹೇಳಿದ ಮೇಲೆ ಸ್ವಲ್ಪ ಸಮಾಧಾನವಾಗಿತ್ತು. ವಾಪಸ್ಸು ಬಂದ ಮೇಲೆ ಬೇರೆ ಶಾಲೆಯ ಹುಡುಗಿಯಂತೆ ನಟಿಸುತ್ತಾ ಎಲ್ಲರೂ ಕೇಳುವಂತೆ ಗಟ್ಟಿಯಾಗಿ ಕೂಗಿ ಹೇಳಿದಳು:

ತೊಮೊಯೆ ಶಾಲೆ ಭವ್ಯವಾಗಿದೆ,
ಹೊರಗೂ ಭವ್ಯ, ಒಳಗೂ ಭವ್ಯ.

ಮೈದಾನದಲ್ಲಿ ಆಡುತ್ತಿದ್ದ ಮಕ್ಕಳಿಗೆ ಮೊದಲು ಅದು ಯಾರೆಂದು ತಿಳಿಯಲಿಲ್ಲ. ಅದು ತೊತ್ತೊ-ಚಾನ್ ಎಂದು ತಿಳಿದ ತಕ್ಷಣ ಅವರೂ ರಸ್ತೆಗೆ ಬಂದು ಅವಳನ್ನು ಕೂಡಿಕೊಂಡು, ಕೈಕೈ ಹಿಡಿದುಕೊಂಡು ಶಾಲೆಯನ್ನು ಬಳಸಿರುವ ರಸ್ತೆಗಳಲ್ಲೆಲ್ಲಾ ಹಾಡುತ್ತಾ ನಡೆದರು. ಅವರ ದನಿಗಿಂತ ಅವರ ಹೃದಯಗಳು ಒಂದಾಗಿದ್ದುವೆಂದು ಅವರಿಗಾಗ ತಿಳಿದಿರಲಿಲ್ಲ. ಹೆಚ್ಚು ಹೆಚ್ಚು ಸುತ್ತು ಬಂದಂತೆ ಹೆಚ್ಚೆಚ್ಚು ಸ್ಫೂರ್ತಿ ಉಕ್ಕುತ್ತಿತ್ತು.

ತೊಮೊಯೆ ಶಾಲೆ ಭವ್ಯವಾಗಿದೆ,
ಹೊರಗೂ ಭವ್ಯ, ಒಳಗೂ ಭವ್ಯ.

ತಮ್ಮ ಆಫೀಸ್‌ನಲ್ಲೇ ಕುಳಿತು ಮಕ್ಕಳ ಹಾಡನ್ನು ಕೇಳಿಸಿಕೊಳ್ಳುತ್ತಿದ್ದ ಮುಖ್ಯೋಪಾಧ್ಯಾಯರೆಷ್ಟು ಸಂತೋಷಗೊಂಡಿದ್ದರೆಂದು ಮಕ್ಕಳಿಗೆ ತಿಳಿದಿರಲಿಲ್ಲ. ಪ್ರತಿಕ್ಷಣ ಮಕ್ಕಳ ಬಗ್ಗೆಯೇ ಪ್ರಾಮಾಣಿಕವಾಗಿ ಯೋಚಿಸುತ್ತಾ ಶಾಲೆ ನಡೆಸುವ ಶಿಕ್ಷಣ ತಜ್ಞರಿಗೆ ಪ್ರತಿಯೊಂದು ದಿನವೂ ಎಡರು-ತೊಡರುಗಳ ಸರಮಾಲೆಯನ್ನು ಎದುರಿಸಬೇಕಾಗುತ್ತದೆ, ಯಾತನೆಯನ್ನು ಅನುಭವಿಸಬೇಕಾಗುತ್ತದೆ. ಎಲ್ಲವೂ ಭಿನ್ನವಾಗಿರುವಂಥ ತೊಮೊಯೆದಂತಹ ಶಾಲೆಯಲ್ಲಂತೂ ಅದು ಇನ್ನೂ ಹೆಚ್ಚೇ. ಸಾಂಪ್ರದಾಯಿಕ ಶಿಕ್ಷಣ ಕ್ರಮಕ್ಕೆ ಒಗ್ಗಿಹೋದವರ ಟೀಕೆಗಳಿಂದ ತೊಮೊಯೆ ತಪ್ಪಿಸಿಕೊಳ್ಳಲು ಸಾಧ್ಯವೇ ಇರಲಿಲ್ಲ.

ಇಂತಹ ಸಂದರ್ಭಗಳಲ್ಲೆಲ್ಲಾ ಮಕ್ಕಳು ಅವರಿಗೆ ಕೊಡಬಹುದಾದ ಅತ್ಯುತ್ತಮ ಕೊಡುಗೆಯೆಂದರೆ ಇಂತಹ ಹಾಡುಗಳೇ:

ತೊಮೊಯೆ ಶಾಲೆ ಭವ್ಯವಾಗಿದೆ,
ಹೊರಗೂ ಭವ್ಯ, ಒಳಗೂ ಭವ್ಯ !

ಆ ದಿನದ ಕೊನೆಯ ಘಂಟೆ ಮಾಮೂಲಿಗಿಂತ ತಡವಾಗಿ ಬಾರಿಸಿತ್ತು.

## ಚಿತ್ತಾರದ ರಿಬ್ಬನ್ನು

ಒಂದು ದಿನ, ಊಟದ ಬಿಡುವಿನಲ್ಲಿ ಮಕ್ಕಳೆಲ್ಲಾ ಊಟ ಮುಗಿಸಿದ ನಂತರ, ತೊತ್ತೊ-ಚಾನ್ ಸಭಾಂಗಣದ ಸುತ್ತಲೂ ಹಗ್ಗದಾಟ ಆಡುತ್ತಾ ಹೋಗುತ್ತಿರುವಾಗಲೇ ಮುಖ್ಯೋಪಾಧ್ಯಾಯರನ್ನು ಸಂಧಿಸಿದಳು. ಊಟದ ಸಮಯದಲ್ಲಿ ಅವರು ಜತೆಯೇ ಇದ್ದುದರಿಂದ ಅವರನ್ನು ಸಂಧಿಸಿದಳು ಎಂದು ಹೇಳುವುದು ಅಷ್ಟು ಸರಿಯಾಗದು. ಅವರು ವಿರುದ್ಧ ದಿಕ್ಕಿನಲ್ಲಿ ಬರುತ್ತಿದ್ದುದರಿಂದ ಅವರನ್ನು ಸಂಧಿಸಿದ್ದಳು.

"ಓ, ನೀನು ಇಲ್ಲಿದ್ದೀಯಾ" ಅವರೆಂದರು. "ನಾನು ನಿನ್ನನ್ನು ಏನೋ ಕೇಳಬೇಕೆಂದುಕೊಂಡಿದ್ದೆ."

"ಏನು ಕೇಳಬೇಕು ?" ಮುಖ್ಯೋಪಾಧ್ಯಾಯರಿಗೆ ತಾನೇನೋ ಮಾಹಿತಿ ಒದಗಿಸಬಹುದೆಂಬ ಖುಷಿಯಲ್ಲಿ ಹೇಳಿದಳು.

"ಆ ರಿಬ್ಬನ್ ಎಲ್ಲಿ ಕೊಂಡುಕೊಂಡೆ ?" ಅವಳು ತಲೆಯಲ್ಲಿ ಹಾಕಿಕೊಂಡಿದ್ದ ಚಿತ್ತಾರದ ರಿಬ್ಬನ್ ನೋಡುತ್ತಾ ಕೇಳಿದರು.

ಅವಳು ಎರಡು ದಿನಗಳಿಂದಲೂ ಅದನ್ನು ಹಾಕಿಕೊಂಡಿದ್ದಳು. ಅವಳೇ ಆಯ್ಕೆ ಮಾಡಿದ್ದ ರಿಬ್ಬನ್ನು ಅದು. ಹೆಡ್‌ಮಾಸ್ತರು ಅದನ್ನು ಸರಿಯಾಗಿ ನೋಡಲೆಂದು ಇನ್ನೂ ಹತ್ತಿರ ಹೋದಳು.

"ನಮ್ಮ ಚಿಕ್ಕಮ್ಮನ ಹಳೇ ಶಾಲಾ ಸಮವಸ್ತ್ರದಲ್ಲಿ ಅದು ಸಿಕ್ಕಿತ್ತು" ಹೆಮ್ಮೆಯಿಂದ ಹೇಳಿದಳು. "ಅವಳು ಬಟ್ಟೆ ಮಡಿಚಿಡುತ್ತಿದ್ದಾಗ ಅದನ್ನು ನೋಡಿದೆ. ಆಗವಳು ಅದನ್ನು ನನಗೇ ಕೊಟ್ಟಳು." "ನಿನ್ನ ಕಣ್ಣು ತುಂಬಾ ಚುರುಕು ಎಂದು ಚಿಕ್ಕಮ್ಮ

ಹೇಳಿದ್ದರು." ತೊತ್ತೋ-ಚಾನ್ ತುಂಬಾ ಹೆಮ್ಮೆಯಿಂದ ಇದನ್ನು ಹೇಳಿದ್ದಳು.

"ಹೌದೇನು" ಮುಖ್ಯೋಪಾಧ್ಯಾಯರು ಏನೋ ಆಳವಾದ ಯೋಚನೆಯಲ್ಲಿ ಮುಳುಗಿದರು.

ತೊತ್ತೋ-ಚಾನ್‌ಳಿಗೆ ಆ ರಿಬ್ಬನ್ನಿನ ಬಗ್ಗೆ ತುಂಬಾ ಹೆಮ್ಮೆ. ಆದುದರಿಂದ ಅದನ್ನು ತಾನು ಕಂಡದ್ದನ್ನು ಹೇಳಿದಳು. ಅವಳ ಚಿಕ್ಕಮ್ಮನ ಬಳಿ ಅವಳು ಶಾಲೆಗೆ ಹೋಗುತ್ತಿದ್ದಾಗ ತೊಟ್ಟುಕೊಳ್ಳುತ್ತಿದ್ದ ಹಳೇ ಶೈಲಿಯ ಉದ್ದನೆಯ ನೇರಳೆ ಬಣ್ಣದ ತುಂಬು ನೆರಿಗೆಯ ಅನೇಕ ಲಂಗಗಳಿದ್ದವು. ಒಂದು ಲಂಗವನ್ನು ಎತ್ತಿಡುತ್ತಿದ್ದಾಗ ಅದರ ಮೇಲೆ ಸುಂದರವಾಗಿರುವ ಏನನ್ನೋ ತೊತ್ತೋ-ಚಾನ್ ಗಮನಿಸಿದ್ದಳು.

"ಅದೇನು ಚಿಕ್ಕಮ್ಮ?"

ತೊತ್ತೋ-ಚಾನ್‌ಳ ಪ್ರಶ್ನೆಗೆ ಚಿಕ್ಕಮ್ಮ ಸ್ವಲ್ಪ ಹೊತ್ತು ಸುಮ್ಮನಿದ್ದಳು. ಅದು ಸುಂದರವಾದ ರಿಬ್ಬನ್ನಾಗಿತ್ತು. ಲಂಗದ ಹಿಂಭಾಗದಲ್ಲಿ ಸೊಂಟಪಟ್ಟಿಗೆ ಕಟ್ಟಿತ್ತು.

"ಹಿಂದುಗಡೆಯಿಂದ ಸುಂದರವಾಗಿ ಕಾಣಲು ಅದನ್ನು ಇಟ್ಟಿರೋದು" ಚಿಕ್ಕಮ್ಮನೆಂದಳು. ಆ ದಿನಗಳಲ್ಲಿ ಪ್ರತಿಯೊಬ್ಬರೂ ಹೀಗೆ ಹಿಂಬದಿಯಲ್ಲಿ ಕೈಯಿಂದಲೇ ಮಾಡಿದ ಲೇಸನ್ನೋ ಇಲ್ಲವೇ ಅರ್ಧಚಂದ್ರಾಕೃತಿಯಲ್ಲಿ ಕಟ್ಟಿದ ರಿಬ್ಬನ್ನನ್ನೋ ಹಾಕಿಕೊಳ್ಳುತ್ತಿದ್ದರು.

ತೊತ್ತೋ-ಚಾನ್ ಅದನ್ನು ಆಸೆಗಣ್ಣಿನಿಂದ ನೋಡುತ್ತಿರುವುದನ್ನು ಚಿಕ್ಕಮ್ಮ ಗಮನಿಸಿದಳು. ಅವಳದನ್ನು ಆಸೆಯಿಂದ ಮುಟ್ಟಿ ಮುಟ್ಟಿ ನೋಡಿದಳು. "ನಾನದನ್ನ ನಿನಗೆ ಕೊಡುತ್ತೇನೆ, ನಾನೀಗ ಅದನ್ನು ಹಾಕಿಕೊಳ್ಳುವುದಿಲ್ಲ."

ಚಿಕ್ಕಮ್ಮ ಕತ್ತರಿ ತೆಗೆದುಕೊಂಡು ಅದನ್ನು ಬಟ್ಟೆಗೆ ಹೊಲಿದಿದ್ದ ದಾರಗಳನ್ನು ಕತ್ತರಿಸಿ ತೆಗೆದು ತೊತ್ತೋ-ಚಾನ್‌ಳಿಗೆ ಕೊಟ್ಟಳು. ಹೀಗೆ ತೊತ್ತೋ-ಚಾನ್ ಅದನ್ನು ಸಂಪಾದಿಸಿದ್ದಳು. ಅದು ನಿಜವಾಗಿಯೂ ಸುಂದರವಾಗಿತ್ತು. ತುಂಬಾ ಒಳ್ಳೆಯ ಸಿಲ್ಕಿನಿಂದ ಮಾಡಿದ್ದ ಅದು ಅಗಲವಾಗಿತ್ತು. ಅದರಲ್ಲಿ ಗುಲಾಬಿ ಮತ್ತು ಇನ್ನೂ ಎಷ್ಟೋ ಬಗೆಯ ವಿನ್ಯಾಸಗಳನ್ನೆಲ್ಲಾ ಹೆಣೆಯಲಾಗಿತ್ತು. ಗಟ್ಟಿಯಾಗಿ ಬಿಗಿದು ಅಗಲವಾಗಿ ಕಟ್ಟಿದ್ದ ಅದು ಹೆಚ್ಚು ಕಮ್ಮಿ ತೊತ್ತೋ-ಚಾನ್ ತಲೆಯಷ್ಟೇ ದೊಡ್ಡದಾದ ಕಮಾನನ್ನು ಸೃಷ್ಟಿಸಿತ್ತು. ಅದು ಹೊರದೇಶದಿಂದ ಆಮದಾದ್ದೆಂದು ಚಿಕ್ಕಮ್ಮ ಹೇಳಿದ್ದಳು.

ತೊತ್ತೋ-ಚಾನ್ ರಿಬ್ಬನ್ ಬಗ್ಗೆ ನಿರರ್ಗಳವಾಗಿ ಮಾತನಾಡುತ್ತಾ ತಲೆದೂಗುತ್ತಿದ್ದಳು. ಅವಳ ಈ ಕತೆಯೆಲ್ಲಾ ಕೇಳಿದ ಮೇಲೆ ಮುಖ್ಯೋಪಾಧ್ಯಾಯರು ನಿರಾಶರಾದಂತೆ ಕಂಡರು.

"ಹೀಗೋ ಇದರ ಕತೆ " ಅವರೆಂದರು. "ನಿನ್ನೆ ದಿವಸ ಮಿಯೋ-ಚಾನ್ ನಿನ್ನಂಥದೇ ರಿಬ್ಬನ್ನು ಬೇಕೆಂದು ಹಠ ಹಿಡಿದಳು. ನಾನು ಜಿಯುಗಾವೋಕಾದ ಎಲ್ಲ ರಿಬ್ಬನ್ ಅಂಗಡಿಗಳಿಗೂ ಹೋಗಿ ಬಂದೆ, ಆದರೆ ಎಲ್ಲೂ ಸಿಗಲಿಲ್ಲ. ಹಾಗಾದರೆ ಅದು ವಿದೇಶದ್ದು!"

ಇದನ್ನು ಹೇಳುವಾಗ ಅದು ಮುಖ್ಯೋಪಾಧ್ಯಾಯರ ಮುಖದಂತಲ್ಲದೆ ಒಬ್ಬ ವ್ಯಾಕುಲಗೊಂಡ ತಂದೆಯ ಮುಖದಂತಿತ್ತು.

"ತೊತ್ತೊ-ಚಾನ್, ನೀನು ಅದನ್ನು ಶಾಲೆಗೆ ಹಾಕಿಕೊಂಡು ಬರುವುದನ್ನು ಬಿಟ್ಟರೆ ನನಗೆ ತುಂಬಾ ಉಪಕಾರವಾಗುತ್ತೆ. ನೋಡು, ಮಿಯೋ-ಚಾನ್ ಸುಮ್ಮನೆ ಹಠ ಮಾಡುತ್ತಾಳೆ. ನಿನಗೆ ತುಂಬಾ ಬೇಸರವಾಗುತ್ತಾ?"

ತೊತ್ತೊ-ಚಾನ್ ಕೈಕಟ್ಟಿಕೊಂಡು ಸ್ವಲ್ಪ ಹೊತ್ತು ಯೋಚಿಸಿದಳು. ಮತ್ತೆ ಅವಸರದಿಂದ ಉತ್ತರಿಸಿದಳು, "ಸರಿ, ನಾನಿದನ್ನ ಮತ್ತೆ ಹಾಕಿಕೊಳ್ಳೋದೇ ಇಲ್ಲ."

"ತುಂಬಾ ಥ್ಯಾಂಕ್ಸ್" ಮುಖ್ಯೋಪಾಧ್ಯಾಯರೆಂದರು.

ತೊತ್ತೊ-ಚಾನ್‌ಳಿಗೆ ಆ ರಿಬ್ಬನ್ನೆಂದರೆ ಪ್ರಾಣ. ಆದರೆ ಮುಖ್ಯೋಪಾಧ್ಯಾಯರು ತೊಂದರೆಯಲ್ಲಿದ್ದುದರಿಂದ ಒಪ್ಪಿಕೊಂಡಿದ್ದಳು. ತನ್ನ ಪ್ರೀತಿಯ ಮುಖ್ಯೋ ಪಾಧ್ಯಾಯರು ತನಗಿಂತ ತುಂಬಾ ದೊಡ್ಡವರು. ಎಲ್ಲ ಅಂಗಡಿಗಳಲ್ಲಿ ಹುಡುಕುತ್ತಾ ಅಲೆಯುವುದು ಅವಳಿಗೆ ಕೆಡುಕೆನಿಸಿತ್ತು. ಇದೇ ತೊಮೊಯೆದ ರೀತಿ. ದೊಡ್ಡವರು ಸಣ್ಣವರೆನ್ನದೆ ಎಲ್ಲರೂ ಪರಸ್ಪರ ಸಮಸ್ಯೆಗಳನ್ನು ಅರ್ಥಮಾಡಿಕೊಂಡು ಸ್ಪಂದಿಸುತ್ತಿದ್ದುದೇ ಅಲ್ಲಿನ ಜಾಯಮಾನ. ಅಲ್ಲಿನ ಸಹಜ ರೀತಿಯೇ ಹೀಗೆ.

ಮಾರನೆಯ ದಿನ ತೊತ್ತೊ-ಚಾನ್ ಶಾಲೆಗೆ ಹೋದ ನಂತರ ಅವಳ ಕೋಣೆಯನ್ನು ಶುಚಿ ಮಾಡಲು ಅಮ್ಮ ಹೋದಾಗ, ಆ ರಿಬ್ಬನ್ನು ತೊತ್ತೊ-ಚಾನ್‌ಳ ಪ್ರೀತಿಯ ಟೆಡ್ಡಿಬೇರ್‌ನ ಕತ್ತಿಗೆ ಬಳಸಿ ಕಟ್ಟಿರುವುದನ್ನು ಕಂಡಳು.

ತೊತ್ತೊ-ಚಾನ್‌ಳನ್ನು ಅಸಾಧ್ಯವಾಗಿ ಪುಳಕಗೊಳಿಸಿದ್ದ ಆ ರಿಬ್ಬನ್ನನ್ನು ಇದ್ದಕ್ಕಿದ್ದಂತೆ ಹಾಕಿಕೊಳ್ಳದೇ ಬಿಟ್ಟದ್ದಾದರೂ ಯಾಕೆ? ವಿಶೇಷವಾಗಿ ಅಲಂಕರಿಸಲ್ಪಟ್ಟ ಟೆಡ್ಡಿಬೇರ್ ಮಾತ್ರ ಕೊಂಚ ನಾಚಿಕೊಂಡಂತೆ ಕಾಣುತ್ತಿತ್ತು.

## ಗಾಯಾಳುಗಳ ಭೇಟಿ

ಯುದ್ಧದಲ್ಲಿ ಗಾಯಗೊಂಡ ಸೈನಿಕರ ಆಸ್ಪತ್ರೆಗೆ ತೊತ್ತೊ-ಚಾನ್ ಮೊದಲ ಬಾರಿಗೆ ಭೇಟಿಕೊಟ್ಟಿದ್ದಳು. ಅವಳಿಗೆ ಪರಿಚಯವಿಲ್ಲದ ಇತರ ಪ್ರಾಥಮಿಕ ಶಾಲೆಗಳ ಮುವ್ವತ್ತು ಮಕ್ಕಳ ಜತೆ ಅವಳು ಅಲ್ಲಿಗೆ ಹೋಗಿದ್ದಳು. ಪ್ರಾಥಮಿಕ ಶಾಲೆಯ ಮಕ್ಕಳಿಗಾಗಿ ಇತ್ತೀಚೆಗೆ ರೂಪಿಸಿದ್ದ ರಾಷ್ಟ್ರೀಯ ಕಾರ್ಯಕ್ರಮ ಅದು. ಎಲ್ಲ ಶಾಲೆಯಿಂದಲೂ ಸಾಮಾನ್ಯವಾಗಿ ಎರಡು ಮೂರು ಮಕ್ಕಳಿರುತ್ತಿದ್ದರೆ, ತೊಮೊಯೆದಂಥ ಸಣ್ಣ ಶಾಲೆಯಿಂದ ಒಬ್ಬರು ಮಾತ್ರ ಹೋಗಲು ಸಾಧ್ಯವಾಗುತ್ತಿತ್ತು. ಯಾವುದಾದರೊಂದು ಶಾಲೆಯ ಉಪಾಧ್ಯಾಯರೊಬ್ಬರು ಇಡೀ ತಂಡದ ಜವಾಬ್ದಾರಿ ವಹಿಸಿಕೊಂಡಿರುತ್ತಿದ್ದರು. ತೊತ್ತೊ-ಚಾನ್ ತೊಮೊಯೆದ ಪ್ರತಿನಿಧಿಯಾಗಿ ಹೋಗಿದ್ದಳು.

ಗುಂಪಿನ ಜವಾಬ್ದಾರಿ ವಹಿಸಿಕೊಂಡಿದ್ದ ಅಧ್ಯಾಪಕಿ ಕನ್ನಡಕಧಾರಿ, ತೆಳ್ಳಗಿನ ಹೆಂಗಸು. ಹದಿನೈದು ಜನ ಸೈನಿಕರಿದ್ದ ವಾರ್ಡಿಗೆ ಆಕೆ ಮಕ್ಕಳನ್ನು ಕರೆದುಕೊಂಡು

ಹೋದಳು. ಬಿಳಿಯ ಪೈಜಾಮುದಲ್ಲಿದ್ದ ಸೈನಿಕರು ಕೆಲವರು ಮಂಚದ ಮೇಲೆ ಒರಗಿದ್ದರೆ ಕೆಲವರು ಅಲ್ಲೇ ಅಡ್ಡಾಡಿಕೊಂಡಿದ್ದರು.

ಗಾಯಗೊಂಡಿರುವ ಸೈನಿಕರು ನೋಡಲು ಹೇಗಿರುತ್ತಾರೋ ಎಂದು ತೊತ್ತೊ-ಚಾನ್ ಹೆದರಿಕೊಂಡಿದ್ದಳು. ಆದರೆ ಅವರೆಲ್ಲ ಮುಗುಳ್ನಗುತ್ತಾ ಕೈ ಬೀಸಿದರು. ಕೆಲವರ ತಲೆಗಳಲ್ಲಿ ಬ್ಯಾಂಡೇಜಿದ್ದರೂ ಅವರೆಲ್ಲಾ ಗೆಲುವಾಗೇ ಇರುವುದನ್ನು ನೋಡಿ ತೊತ್ತೊ-ಚಾನ್‌ಗೆ ನಿರಾಳವೆನಿಸಿತು.

ಅಧ್ಯಾಪಕಿ ಮಕ್ಕಳನ್ನೆಲ್ಲಾ ವಾರ್ಡಿನ ಮಧ್ಯದಲ್ಲಿ ಗುಂಪುಗೂಡಿಸಿಕೊಂಡು ಸೈನಿಕರನ್ನು ಉದ್ದೇಶಿಸಿ ಹೇಳಿದರು:

"ನಾವೆಲ್ಲಾ ನಿಮ್ಮನ್ನು ನೋಡಲು ಬಂದಿದ್ದೇವೆ." ಆಗ ಮಕ್ಕಳೆಲ್ಲ ಅವರಿಗೆ ಬಾಗಿ ನಮಸ್ಕರಿಸಿದರು.

ಅಧ್ಯಾಪಕಿ ಮುಂದುವರಿದು "ಇಂದು ಮೇ ಐದನೆ ದಿನಾಂಕ-ಹುಡುಗರ ದಿನ. ನಾವು ನಿಮಗಾಗಿ ಈ ದಿನದ ಗೀತೆಯನ್ನೇ ಹಾಡುತ್ತೇವೆ."

ಆಗ ಆಕೆ ಸಂಗೀತ ನಿರ್ದೇಶಕನಂತೆ ಕೈಯೆತ್ತಿ "ಎಲ್ಲ ರೆಡೀನಾ ? ಒಂದು, ಎರಡು, ಮೂರು, ನಾಲ್ಕು" ಎನ್ನುತ್ತಾ ತಾಳ ಹಾಕತೊಡಗಿದ್ದಳು. ಮಕ್ಕಳಿಗೆ ಒಬ್ಬರಿಗೊಬ್ಬರ ಪರಿಚಯವಿಲ್ಲದಿದ್ದರೂ ಅವರೆಲ್ಲರೂ ಒಟ್ಟಿಗೆ ಹೃದಯ ತುಂಬಿ ಹಾಡತೊಡಗಿದರು:

ಪರ್ವತ ಶ್ರೇಣಿಗಳ ದಾಟುತ್ತ
ಮುಗಿಲುಗಳ ಸಾಗರವ ದಾಟುತ್ತ....

ತೊತ್ತೊ-ಚಾನ್‌ಳಿಗೆ ಆ ಹಾಡು ಗೊತ್ತಿರಲಿಲ್ಲ. ತೊಮೊಯೆದಲ್ಲಿ ಇಂತಹ ಹಾಡನ್ನು ಕಲಿಸುತ್ತಿರಲಿಲ್ಲ. ದಯಾಳುವಿನಂತಿದ್ದ ಸೈನಿಕನೊಬ್ಬನ ಹಾಸಿಗೆಯ ಮೇಲೆ ಬಂದು ಕುಳಿತಳು. ಅವಳಿಗೆ ಒಂದು ರೀತಿಯ ಕಸಿವಿಸಿಯಾಗುತ್ತಿತ್ತು. ಆ ಹಾಡು ಮುಗಿದ ನಂತರ ಅಧ್ಯಾಪಕಿ "ಈಗ ನಾವು ಗೊಂಬೆ ಹಬ್ಬದ ಗೀತೆ ಹಾಡೋಣ" ಎಂದರು. ತೊತ್ತೊ-ಚಾನೊಬ್ಬಳನ್ನು ಬಿಟ್ಟು ಉಳಿದೆಲ್ಲ ಮಕ್ಕಳೂ ಒಟ್ಟಿಗೆ ಹಾಡಿದರು:

ದೀವಿಗೆಯ ಹಚ್ಚೋಣ ಬನ್ನಿ
ಜ್ಯೋತಿಯಿಂದ ಜ್ಯೋತಿ ಬೆಳಗೋಣ ಬನ್ನಿ...

ತೊತ್ತೊ-ಚಾನ್ ಏನೂ ಮಾಡಲಾಗದೆ ತೆಪ್ಪಗೆ ಕುಳಿತಿದ್ದಳು.

ಅವರೆಲ್ಲ ಹಾಡು ಮುಗಿಸಿದ ಮೇಲೆ ಸೈನಿಕರೆಲ್ಲರೂ ಚಪ್ಪಾಳೆ ತಟ್ಟಿದರು. ಅಧ್ಯಾಪಕಿ ನಸುನಗುತ್ತಾ "ಈಗ, ಕುದುರೆ ಹಾಡು ಹಾಡೋಣ" ಎಂದರು. ಎಲ್ಲರೂ ಒಟ್ಟಿಗೆ, "ಮೂರು-ನಾಲ್ಕು" ಎಂದು ತಾಳಹಾಕತೊಡಗಿದರು.

ತೊತ್ತೊ-ಚಾನ್‌ಗೆ ಈ ಹಾಡೂ ಬರುತ್ತಿರಲಿಲ್ಲ. ಅವರೆಲ್ಲಾ ಹಾಡು ನಿಲ್ಲಿಸಿದ ಮೇಲೆ ಆ ಸೈನಿಕ ತೊತ್ತೊ-ಚಾನ್‌ಳ ತಲೆ ಸವರುತ್ತಾ "ನೀನು ಹಾಡಲೇ ಇಲ್ಲವಲ್ಲ" ಎಂದು ಕೇಳಿದ.

ತೊತ್ತೊ-ಚಾನ್‌ಳಿಗೆ ತುಂಬಾ ಕೆಡುಕೆನಿಸಿತು. ಸೈನಿಕರನ್ನು ನೋಡಲು ಬಂದು

ಅವರಿಗಾಗಿ ಒಂದು ಹಾಡನ್ನೂ ಹಾಡಲಾಗಲಿಲ್ಲವಲ್ಲ! ಎಂದುಕೊಂಡಳು. ಅವಳು ಹಾಸಿಗೆಯಿಂದ ಎದ್ದು, ಸ್ವಲ್ಪ ದೂರ ಸರಿದು ನಿಂತು, ಧೈರ್ಯದಿಂದ "ಸರಿ, ನಾನೀಗ ನನಗೆ ಗೊತ್ತಿರೋ ಒಂದು ಹಾಡನ್ನು ಹಾಡುತ್ತೇನೆ" ಎಂದಳು.

ಅಧ್ಯಾಪಕಿ ಯೋಜಿಸಿದಂತಲ್ಲದೆ ಬೇರೆಯೇ ಕಾರ್ಯಕ್ರಮ ಆಗತೊಡಗಿತು. ಆಗ ಅವರು "ನೀನು ಯಾವ ಹಾಡು ಹಾಡುತ್ತೀ?" ಎಂದು ಕೇಳಿದರು. ಆದರೆ ತೊತ್ತೊ-ಚಾನ್ ಉಸಿರು ಎಳೆದುಕೊಂಡು ಹಾಡಲು ಪ್ರಾರಂಭಿಸಿದ್ದರಿಂದ ಸುಮ್ಮನೆ ಕುಳಿತರು.

ತಾನು ತೊಮೊಯೆದವಳಾದ್ದರಿಂದ ಅದರ ಪ್ರಸಿದ್ಧ ಹಾಡನ್ನೇ ಹಾಡುವುದೆಂದು ತೀರ್ಮಾನಿಸಿ ಹಾಡಲು ಪ್ರಾರಂಭಿಸಿದಳು:

ಅಗಿಯಿರಿ, ಅಗಿಯಿರಿ
ಚೆನ್ನಾಗಿ ಅಗಿಯಿರಿ...

ಕೆಲಮಕ್ಕಳು ನಕ್ಕರು. ಕೆಲವರು ಪಕ್ಕದವರನ್ನು ಕೇಳತೊಡಗಿದರು, "ಯಾವ ಹಾಡದು ? ಎಂಥ ಹಾಡದು ?" ಅಧ್ಯಾಪಕಿ ಕೈ ಮೇಲೆತ್ತಿ ಏನೋ ಸಂಜ್ಞೆ ಮಾಡಲು ಹೊರಟವರು ಏನು ಮಾಡಬೇಕೆಂದು ತಿಳಿಯದೆ ಕೈಯನ್ನು ಗಾಳಿಯಲ್ಲಿ ಹಾಗೆಯೇ ಬಿಟ್ಟರು. ತೊತ್ತೊ-ಚಾನ್‌ಳಿಗೆ ಮುಜುಗರವಾಗಿತ್ತು. ಆದರೆ ಅವಳು ಸಾಧ್ಯವಾದಷ್ಟು ಚೆನ್ನಾಗಿ ಹಾಡತೊಡಗಿದಳು:

ಅಗಿಯಿರಿ, ಅಗಿಯಿರಿ, ಅಗಿಯಿರಿ
ಅನ್ನ, ಮೀನು, ಮಾಂಸ....

ಹಾಡು ಮುಗಿಸಿ ಬಾಗಿ ವಂದಿಸಿದಳು. ಅವಳು ತಲೆ ಎತ್ತಿದಾಗ ಆ ಸೈನಿಕನ ಕಣ್ಣಿನಿಂದ ಧಾರಾಕಾರವಾಗಿ ಕಣ್ಣೀರು ಹರಿಯುತ್ತಿರುವುದನ್ನು ಕಂಡು ಚಕಿತಗೊಂಡಳು. ತಾನೇನೋ ಕೆಟ್ಟದ್ದು ಮಾಡಿಬಿಟ್ಟೆನೇನೋ ಎಂದು ಆತಂಕಗೊಂಡಳು. ಅವಳ ತಂದೆಗಿಂತಲೂ ಸ್ವಲ್ಪ ದೊಡ್ಡವರಂತೆ ಕಂಡ ಆ ಸೈನಿಕನು ಅವಳ ತಲೆ ಸವರುತ್ತಾ "ಥ್ಯಾಂಕ್ಯೂ, ಥ್ಯಾಂಕ್ಯೂ" ಎಂದನು.

ಅವಳ ತಲೆ ಸವರುತ್ತಲೇ ಇದ್ದ ಆತ ಅಳುತ್ತಲೇ ಇದ್ದ. ಅವನನ್ನು ಸಮಾಧಾನ ಪಡಿಸುವಂತೆ ಅಧ್ಯಾಪಕಿ ಹೇಳಿದರು "ನಾವೀಗ ಸೈನಿಕರಿಗಾಗಿ ಬರೆದಿರುವ ಪದ್ಯಗಳನ್ನು ಓದುತ್ತೇವೆ."

ಮಕ್ಕಳು ಒಬ್ಬೊಬ್ಬರಾಗಿ ತಾವೇ ರಚಿಸಿದ ಪದ್ಯಗಳನ್ನು ಓದತೊಡಗಿದರು. ತೊತ್ತೊ-ಚಾನ್ ಆ ಸೈನಿಕನತ್ತ ನೋಡುತ್ತಲೇ ಇದ್ದಳು. ಅವನ ಕಣ್ಣು-ಮೂಗುಗಳು ಕೆಂಪಗಾಗಿದ್ದರೂ, ನಸುನಗುತ್ತಿದ್ದ. ತೊತ್ತೊ-ಚಾನ್ ಅವನನ್ನು ನೋಡಿ ಮುಗುಳ್ನಕ್ಕಳು. "ಕೊನೆಗೂ ಈ ಸೈನಿಕ ನಕ್ಕನಲ್ಲ" ಎಂದುಕೊಂಡಳು ಸಮಾಧಾನದಿಂದ.

ಆ ಸೈನಿಕ ಯಾಕೆ ಅತ್ತನೋ ಅದು ಆತನಿಗೇ ಗೊತ್ತು. ಬಹುಶಃ ಆತನಿಗೆ ತೊತ್ತೊ-ಚಾನ್‌ಳಂಥ ಮಗಳಿದ್ದಿರಬೇಕು. ಅಥವಾ ಈ ಪುಟ್ಟ ಹುಡುಗಿ

ತನ್ನಿಂದಾದಷ್ಟು ಚೆನ್ನಾಗಿ ಹಾಡನ್ನು ಹಾಡಲು ಪ್ರಯತ್ನಿಸಿದ್ದು ಅವನಿಗೆ ಮನತಟ್ಟಿರಬೇಕು. ಅಥವಾ ಯುದ್ಧದ ಸಮಯಗಳಲ್ಲಿ ತಿನ್ನಲು ಏನೂ ಗತಿಯಿಲ್ಲದೇ ಇರುತ್ತಿದ್ದುದು ಮತ್ತು ಆ ದೇಶದಲ್ಲಿ ಅಗಿಯಲು ಏನೂ ಸಿಗದಿರುವಂತಹ ಸ್ಥಿತಿ ಬರಲಿರುವುದು, ಈ ಪುಟ್ಟ ಹುಡುಗಿ ಚೆನ್ನಾಗಿ ಅಗಿಯಿರಿ ಎಂದು ಹಾಡುತ್ತಿರುವುದು ಇದನ್ನೆಲ್ಲಾ ಕಂಡು ಆತನಿಗೆ ತುಂಬಾ ದುಃಖವಾಗಿರಬೇಕು. ಈ ಪುಟ್ಟಮಕ್ಕಳನ್ನೆಲ್ಲಾ ಎಂತಹ ಭಯಂಕರ ದಿನಗಳು ಕಬಳಿಸಲು ಕಾಯುತ್ತಿವೆಯೆನ್ನುವುದು ಆತನಿಗೆ ತಿಳಿದಿತ್ತು.

ಪದ್ಯ ಓದುತ್ತಿದ್ದ ಪುಟ್ಟ-ಮಕ್ಕಳಿಗೆ ತಿಳಿದಿತ್ತೋ ಇಲ್ಲವೋ ಗೊತ್ತಿಲ್ಲ, ಅದಾಗಲೇ ಫೆಸಿಫಿಕ್ ಯುದ್ಧ ಪ್ರಾರಂಭವಾಗಿತ್ತು.

## ಆರೋಗ್ಯದ ಚಕ್ಕೆ

ತೊತ್ತೊ-ಚಾನ್ ಜಿಯುಗಾವೋಕ ನಿಲ್ದಾಣದಲ್ಲಿ ಇಳಿದು ತನಗೆ ಈಗಾಗಲೇ ಚೆನ್ನಾಗಿ ಪರಿಚಿತವಾಗಿದ್ದ ಗೇಟಿನಲ್ಲಿರುತ್ತಿದ್ದ ವ್ಯಕ್ತಿಗೆ ತಾನು ಕೊರಳಿಗೆ ನೇತುಹಾಕಿಕೊಂಡಿದ್ದ ರೈಲುಪಾಸನ್ನು ತೋರಿಸಿ ಹೊರನಡೆದಳು.

ಹೊರಗಡೆ ಏನೋ ಭಾರೀ ಆಸಕ್ತಿಯುತವಾದದ್ದು ನಡೆಯುತ್ತಿತ್ತು. ಒಬ್ಬ ಸಣ್ಣ ವಯಸ್ಸಿನ ಗಂಡಸು ಒಂದು ಚಾಪೆಯನ್ನು ಹಾಸಿ ಅದರ ಮೇಲೆ ಒಂದು ರಾಶಿ ಮರದ ಚಕ್ಕೆಗಳನ್ನು ಸುರಿದುಕೊಂಡು ಅಡ್ಡಗಾಲು ಹಾಕಿಕೊಂಡು ಕುಳಿತಿದ್ದನು. 5-6 ಜನ ಅವನ ಮುಂದೆ ನಿಂತು ಅವನನ್ನೇ ನೋಡುತ್ತಿದ್ದರು. ತೊತ್ತೊ-ಚಾನ್ ತಾನೂ ಅಲ್ಲಿಗೆ ಹೋಗಲು ತೀರ್ಮಾನಿಸಿದಳು. ಆ ಮನುಷ್ಯ ಪ್ರತಿಸಲವೂ, "ನನ್ನನ್ನು ಸರಿಯಾಗಿ ನೋಡಿ," "ಸರಿಯಾಗಿ ನೋಡಿ" ಎನ್ನುತ್ತಿದ್ದ. ತೊತ್ತೊ-ಚಾನ್ ಬಂದು ನಿಂತುಕೊಂಡದ್ದನ್ನು ಗಮನಿಸಿ ಆ ವ್ಯಕ್ತಿ, "ನಿಮಗೆ ತುಂಬಾ ಮುಖ್ಯವಾದದ್ದೇ ಆರೋಗ್ಯ. ಬೆಳಿಗ್ಗೆಯಿಂದ ನೀವು ಹುಷಾರಾಗಿದ್ದೀರಾ ಇಲ್ಲವಾ ಎಂದು ತಿಳಿಯಬೇಕಾದರೆ ಈ ಮರದ ಚಕ್ಕೆ ನಿಮಗೆ ಸಹಾಯಮಾಡುತ್ತೆ. ಬೆಳಿಗ್ಗೆ ಎದ್ದ ತಕ್ಷಣ ಪ್ರತೀ ದಿನವೂ ಈ ಮರದ ಚಕ್ಕೆಯನ್ನು ಕಚ್ಚಿ ನೋಡಿದರೆ ಸಾಕು. ಅದು ಕಹಿ ಇದ್ದರೆ ನೀವು ಆರೋಗ್ಯವಾಗಿಲ್ಲ ಎಂದರ್ಥ. ಅದು ಕಹಿ ಇಲ್ಲದಿದ್ದರೆ ನೀವು ಆರೋಗ್ಯವಾಗಿದ್ದೀರಿ ಎಂದು ಅರ್ಥ. ನೀವು ಆರೋಗ್ಯವಾಗಿದ್ದೀರಾ ಇಲ್ಲವಾ ಎಂದು ಹೇಳುವ ಚಕ್ಕೆಯ ಬೆಲೆ ಕೇವಲ ಇಪ್ಪತ್ತು ಸೆನ್‌ಗಳು ಮಾತ್ರ. ಯಜಮಾನರೇ, ನೀವು ಕಚ್ಚಿ ನೋಡುತ್ತೀರಾ ?"

ಒಬ್ಬ ನರಪೇತಲನಿಗೆ ಚಕ್ಕೆಯನ್ನು ಕೊಟ್ಟ. ಅವನು ಮುಂದಿನ ಹಲ್ಲಿನಿಂದ ಬೇಕೋ ಬೇಡವೋ ಎಂಬಂತೆ ಕಚ್ಚಿದ. ತಲೆ ಅಲ್ಲಾಡಿಸುತ್ತಾ "ಸ್ವಲ್ಪ ಕಹಿ.... ಇರುವಂತಿದೆ" ಎಂದ.

ಚಕ್ಕೆ ಮಾರುವವ ಮೇಲಕ್ಕೆ ಎಗರಿ, "ಯಜಮಾನರೇ ನಿಮಗೆ ಏನೋ ಕಾಯಿಲೆಯಿರಬೇಕು. ನೀವು ಹುಷಾರಾಗಿರಬೇಕು. ಆದರೆ ಭಯಪಡಬೇಡಿ.

ಅದೇನೂ ಗಂಭೀರವಾದುದಲ್ಲ. ಸ್ವಲ್ಪ ಮಾತ್ರ ಕಹಿ ಇದೆ ಎಂದಿರಿ... ಈಗ ಓ, ಅಮ್ಮಾ ನೀವು ಸ್ವಲ್ಪ ಅಗಿದು ನೋಡುವಿರಾ ?" ಅಂಗಡಿಗೆ ಹೊರಟಿದ್ದ ಒಬ್ಬ ಹೆಂಗಸು ದೊಡ್ಡ ಚಕ್ಕೆಯನ್ನು ಎತ್ತಿಕೊಂಡು ಕಚಕಚ ಅಗಿಯತೊಡಗಿದಳು. "ಕಹಿಯೇ ಇಲ್ಲ" ಗೆಲುವಾಗಿ ಉತ್ತರಿಸಿದಳು.

"ಅಭಿನಂದನೆಗಳು ಅಮ್ಮ" ಅವನೆಂದ. "ನೀವು ತುಂಬಾ ಆರೋಗ್ಯವಾಗಿರಬೇಕು" ಈಗವನು ದನಿಯೇರಿಸಿ ಕೂಗತೊಡಗಿದ.

"ಇಪ್ಪತ್ತು ಸೆನ್, ಕೇವಲ ಇಪ್ಪತ್ತು ಸೆನ್ ಮಾತ್ರ. ಪ್ರತಿ ಬೆಳಿಗ್ಗೆ ಆರೋಗ್ಯವಾಗಿರುವುದನ್ನು ಕಂಡುಕೊಳ್ಳಲು ಬರೀ ಇಪ್ಪತ್ತು ಸೆನ್ ಮಾತ್ರ, ಬಿಟ್ಟರೆ ಸಿಕ್ಕಲ್ಲ."

ತೊತ್ತೊ-ಚಾನ್‌ಳಿಗೂ ಕಂದು ಬಣ್ಣದ ಚಕ್ಕೆಯನ್ನು ಅಗಿದು ನೋಡಬೇಕು ಅನ್ನಿಸಿತ್ತು. ಆದರೆ ಕೇಳಲು ನಾಚಿಕೆಯಾಗುತ್ತಿತ್ತು. ಅದರ ಬದಲು, "ಶಾಲೆ ಮುಗಿಯುವವರೆಗೂ ಇಲ್ಲೇ ಇರುತ್ತೀರಾ ?" ಎಂದು ಕೇಳಿದಳು. "ಖಂಡಿತ" ಈ ಪುಟ್ಟ ಶಾಲಾಹುಡುಗಿಯನ್ನು ಮೇಲಿಂದ ಕೆಳಗಿನವರೆಗೆ ನೋಡುತ್ತಾ ಅವನೆಂದ.

ತೊತ್ತೊ-ಚಾನ್ ಪಾಟಿಚೀಲವನ್ನು ಜೋತಾಡಿಸಿಕೊಂಡು ಓಡಿಯೇ ಓಡಿದಳು. ಶಾಲೆ ಪ್ರಾರಂಭವಾಗುವ ಮುನ್ನ ಮಾಡುವ ಘನಕಾರ್ಯವೇನೋ ಇದ್ದದ್ದರಿಂದ ತಡಮಾಡುವಂತಿರಲಿಲ್ಲ. ಶಾಲೆ ತಲುಪಿ ಮಕ್ಕಳನ್ನು ಕುರಿತು "ಯಾರಾದರೂ ನನಗೆ ಇಪ್ಪತ್ತು ಸೆನ್ ಸಾಲ ಕೊಡುತ್ತೀರಾ ?" ಎಂದು ಕೇಳಿದಳು. ಆದರೆ ಯಾರ ಬಳಿಯೂ ಇಪ್ಪತ್ತು ಸೆನ್ ಇರಲಿಲ್ಲ.

"ತಂದೆ-ತಾಯಿಗಳನ್ನು ಕೇಳಲೇ ?" ಮಿಯೊ-ಚಾನ್ ಕೇಳಿದಳು.

ಮಿಯೊ-ಚಾನ್ ಮುಖ್ಯೋಪಾಧ್ಯಾಯರ ಮಗಳಾಗಿದ್ದುದು ಇಂತಹ ಸಮಯಗಳಲ್ಲಿ ತುಂಬಾ ಉಪಯೋಗಕ್ಕೆ ಬರುತ್ತಿತ್ತು. ಮಿಯೊ-ಚಾನ್‌ಳ ಮನೆ ಸಭಾಂಗಣಕ್ಕೆ ಸೇರಿಕೊಂಡಂತೇ ಇದ್ದುದರಿಂದ ಅವಳ ತಾಯಿ ಶಾಲೆಯಲ್ಲೇ ವಾಸವಾಗಿರುತ್ತಿದ್ದಳು.

"ಅಪ್ಪ ನಿನಗೆ ಹಣ ಕೊಡುತ್ತಾರಂತೆ" ಅವಳು ಊಟದ ಸಮಯದಲ್ಲಿ ತೊತ್ತೊ-ಚಾನ್‌ಳಿಗೆ ಹೇಳಿದಳು. "ಆದರೆ, ಯಾಕೆ ಎಂದು ನೀನು ಹೇಳಬೇಕಂತೆ"

ತೊತ್ತೊ-ಚಾನ್ ಆಫೀಸಿನ ಕಡೆ ಹೋದಳು.

"ನಿನಗೆ ಇಪ್ಪತ್ತು ಸೆನ್ ಬೇಕಂತೆ" ಅವರು ಕನ್ನಡಕ ತೆಗೆಯುತ್ತಾ ಹೇಳಿದರು. "ಯಾತಕ್ಕೆ ಬೇಕು ?"

"ನಾನು ಹುಷಾರಾಗಿದ್ದೀನಾ ಇಲ್ಲವಾ ಎಂದು ಹೇಳುವ ಚಕ್ಕೆ ಕೊಂಡುಕೊಳ್ಳಬೇಕು" ಎಂದು ಹೇಳಿದಳು. ಮುಖ್ಯೋಪಾಧ್ಯಾಯರಿಗೆ ಕುತೂಹಲಕ್ಕಿಟ್ಟುಕೊಂಡಿತು.

"ಅದನ್ನು ಎಲ್ಲಿ ಮಾರ್ತಾರೆ ?"

"ಸ್ಟೇಷನ್ನಿನ ಎದುರು" ಅವಳು ಅವಸರದಿಂದ ಹೇಳಿದಳು.

"ಸರಿ" ಅವರೆಂದರು "ನಿನಗೆ ಬೇಕಾದರೆ ಒಂದನ್ನು ಕೊಂಡುಕೋ. ಆದರೆ

ನನಗೂ ಕಚ್ಚಿ ನೋಡಲು ಕೊಡುತ್ತೀ ತಾನೇ ?"

ಪಾಕೆಟಿನ ಜೇಬಿನಿಂದ ಪರ್ಸ್ ತೆಗೆದು ಇಪ್ಪತ್ತು ಸೆನ್ ನಾಣ್ಯ ಅವಳ ಕೈಗಿತ್ತರು.

"ತುಂಬಾ ಥ್ಯಾಂಕ್ಸ್" ತೊತ್ತೊ-ಚಾನ್ ಉದ್ಗರಿಸಿದಳು. "ಅಮ್ಮನಿಂದ ಹಣ ಪಡೆದು ನಿಮಗೆ ವಾಪಸ್ಸು ಕೊಡುತ್ತೇನೆ. ಅಮ್ಮ ಯಾವಾಗಲೂ ಪುಸ್ತಕಕ್ಕೆ ಹಣ ಕೊಡುತ್ತಾಳೆ. ಬೇರೆ ಏನಾದರೂ ಕೊಂಡುಕೊಳ್ಳಬೇಕಾದರೆ ಮೊದಲೇ ಕೇಳಬೇಕು. ಆದರೆ ಆರೋಗ್ಯದ ಚಕ್ಕೆ ಎಲ್ಲರಿಗೂ ಬೇಕಾದದ್ದೇ. ಅಮ್ಮ ಖಂಡಿತ ಹಣ ಕೊಡುತ್ತಾಳೆ."

ಶಾಲೆ ಮುಗಿದ ನಂತರ ತೊತ್ತೊ-ಚಾನ್ ಇಪ್ಪತ್ತು ಸೆನ್ ನಾಣ್ಯವನ್ನು ಮುಷ್ಟಿಯಲ್ಲಿ ಹಿಡಿದು ಸ್ಟೇಷನ್ನಿನತ್ತ ಓಡಿದಳು. ಆ ಮನುಷ್ಯ ಇನ್ನೂ ಅಲ್ಲೇ ಇದ್ದ. ದೊಡ್ಡ ದನಿಯಲ್ಲಿ ತನ್ನ ಮಾಲನ್ನು ಮಾರುತ್ತಿದ್ದ. ತೊತ್ತೊ-ಚಾನ್ ಕೈಯಲ್ಲಿ ಇಪ್ಪತ್ತು ಸೆನ್ ಕಂಡದ್ದೇ ಖುಷಿಗೊಂಡ.

"ಒಳ್ಳೇ ಹುಡುಗಿ, ನಿನ್ನ ತಂದೆ-ತಾಯಿಗಳಿಗೆ ಸಂತೋಷವಾಗುತ್ತೆ."

"ರಾಕಿಗೂ!" ತೊತ್ತೊ-ಚಾನ್‌ಳೆಂದಳು.

"ರಾಕಿ ಯಾರೂ ?" ಎನ್ನುತ್ತಾ ಅವನು ತೊತ್ತೊ-ಚಾನ್‌ಳಿಗೆ ಕೊಡಲು ಚಕ್ಕೆ ಆರಿಸತೊಡಗಿದ.

"ಅದು ನಮ್ಮ ನಾಯಿ, ಅದು ಜರ್ಮನ್ ಷಫರ್ಡ್."

ಆ ಮನುಷ್ಯ ಸ್ವಲ್ಪ ಯೋಚಿಸಿದ. ಅನಂತರ ಹೇಳಿದ, "ನಾಯಿಯಾ... ? ನಾಯಿಗೂ ಇದು ಕೆಲಸ ಮಾಡುತ್ತದೆ. ಕಹಿಯಾಗಿದ್ದರೆ ಅದು ಇದನ್ನು ಇಷ್ಟಪಡುವುದಿಲ್ಲ. ಆಗ ಅದಕ್ಕೆ ಹುಷಾರಿಲ್ಲವೆಂದು ತಿಳಿಯಬಹುದು."

ಅವನು ಆರು ಇಂಚು ಉದ್ದ, ಒಂದು ಇಂಚು ಅಗಲದ ಚಕ್ಕೆಯನ್ನು ಆರಿಸಿ ತೊತ್ತೊ-ಚಾನ್‌ಳಿಗೆ ಕೊಡುತ್ತಾ,

"ಇದೋ ನಿನ್ನ ಚಕ್ಕೆ. ಪ್ರತಿ ದಿನ ಬೆಳಿಗ್ಗೆ ಕಚ್ಚಿ ನೋಡು, ಕಹಿಯಾಗಿದ್ದರೆ ನಿನಗೆ ಹುಷಾರಿಲ್ಲವೆಂದುಕೋ. ಇಲ್ಲದಿದ್ದರೆ ನೀನು ಆರೋಗ್ಯವಾಗಿರುವೆಯೆಂದರ್ಥ."

ತೊತ್ತೊ-ಚಾನ್ ಆ ಅಮೂಲ್ಯ ಚಕ್ಕೆಯನ್ನು ಕಾಗದದಲ್ಲಿ ಸುತ್ತಿಕೊಂಡು ಎಚ್ಚರಿಕೆಯಿಂದ ಮನೆಗೊಯ್ದಳು. ಹೋದ ನಂತರ ಮಾಡಿದ ಮೊದಲ ಕೆಲಸವೇ ಚಕ್ಕೆಯನ್ನು ಕಚ್ಚಿ ನೋಡಿದ್ದು. ಆ ಒಣಕಲು ಚಕ್ಕೆ ಒರಟಾಗಿತ್ತು. ಆದರೆ ಕಹಿಯಿರಲಿಲ್ಲ. ನಿಜ ಹೇಳಬೇಕೆಂದರೆ, ಅದಕ್ಕೆ ಯಾವ ರುಚಿಯೂ ಇರಲಿಲ್ಲ.

"ವಾಹ್! ನಾನು ಆರೋಗ್ಯವಾಗಿದ್ದೇನೆ."

"ನೀನು ಆರೋಗ್ಯವಾಗೇ ಇರೋದು" ಅಮ್ಮ ನಗುತ್ತಾ ಹೇಳಿದಳು: "ಏನು ಸಮಾಚಾರ ?"

ತೊತ್ತೊ-ಚಾನ್ ವಿವರಿಸಿದಳು. ಅಮ್ಮ ಕೂಡ ಚಕ್ಕೆ ಕಚ್ಚಿ ನೋಡಲು ಪ್ರಯತ್ನಿಸಿದಳು.

"ಕಹಿಯಾಗಿಲ್ಲ."

"ಹಾಗಾದರೆ, ಅಮ್ಮ ನೀನೂ ಆರೋಗ್ಯವಾಗಿದ್ದೀ."

ತೊತ್ತೊ-ಚಾನ್ ರಾಕಿಯ ಬಳಿ ಹೋಗಿ ಚಕ್ಕೆಯನ್ನು ಅದರ ಬಾಯಿಗೆ ಹಿಡಿದಳು. ಮೊದಲು ರಾಕಿ ಅದನ್ನು ಮೂಸಿ ನೋಡಿತು. ನಂತರ ನೆಕ್ಕಿತು.

"ಕಚ್ಚಬೇಕು ರಾಕಿ ಇದನ್ನು" ತೊತ್ತೊ-ಚಾನ್ ಹೇಳಿದಳು.

ರಾಕಿ ಅದನ್ನು ಕಚ್ಚುವ ಪ್ರಯತ್ನವನ್ನೇನೂ ಮಾಡಲಿಲ್ಲ. ಆದರೆ ಅದನ್ನು ಇಷ್ಟಪಡದೇ ಇರುವಂತೆಯೂ ಕಾಣಲಿಲ್ಲ. ಸುಮ್ಮನೆ ದೊಡ್ಡದಾಗಿ ಆಕಳಿಸಿತು.



"ವಾಹ್ ! ರಾಕಿಯೂ ಆರೋಗ್ಯವಾಗಿದೆ."

ಮರುದಿನ ಅಮ್ಮ ತೊತ್ತೊ-ಚಾನ್‌ಳಿಗೆ ಇಪ್ಪತ್ತು ಸೆನ್ ಕೊಟ್ಟಳು. ಅವಳು ನೇರ ಮುಖ್ಯೋಪಾಧ್ಯಾಯರ ಕಛೇರಿಗೆ ಹೋಗಿ ಮರದ ಚಕ್ಕೆಯನ್ನು ಹೊರತೆಗೆದಳು.

ಒಂದು ಕ್ಷಣ ಮುಖ್ಯೋಪಾಧ್ಯಾಯರು ಅದೇನೆಂದು ಕೇಳುವಂತೆ ಅವಳತ್ತ ನೋಡಿದರು. ನಂತರ ತೊತ್ತೊ-ಚಾನ್ ತನಗೆ ಕೊಡಲು ಇಪ್ಪತ್ತು ಸೆನ್ ನಾಣ್ಯವನ್ನು ಮುಷ್ಟಿಯಲ್ಲಿ ಬಿಗಿ ಹಿಡಿದಿರುವುದನ್ನು ನೋಡಿ ಅವರಿಗೆ ನೆನಪಾಯಿತು.

"ಕಚ್ಚಿ ನೋಡಿ" ತೊತ್ತೊ-ಚಾನ್ ಹೇಳಿದಳು. "ಅದು ಕಹಿಯಾಗಿದ್ದರೆ ನಿಮಗೆ ಕಾಯಿಲೆ ಎಂದರ್ಥ."

ಹೆಡ್‌ಮಾಸ್ತರು ಕಚ್ಚಿ ನೋಡಿದರು. ಮತ್ತದನ್ನು ತಿರುಗಿಸಿ ಸೂಕ್ಷ್ಮವಾಗಿ ಪರಿಶೀಲಿಸಿದರು.

"ಕಹಿ ಇತ್ತಾ?" ಮುಖ್ಯೋಪಾಧ್ಯಾಯರ ಮುಖವನ್ನೇ ಕಾಳಜಿಯಿಂದ ನೋಡುತ್ತಾ ತೊತ್ತೊ-ಚಾನ್ ಕೇಳಿದಳು.

"ಏನೂ ರುಚಿ ಇಲ್ಲ."

ಚಕ್ಕೆಯನ್ನು ತೊತ್ತೊ-ಚಾನ್‌ಳಿಗೆ ಕೊಡುತ್ತಾ "ನಾನು ಚೆನ್ನಾಗಿದ್ದೇನೆ. ಥ್ಯಾಂಕ್ಸ್" ಎಂದರು.

"ವಾಹ್, ಹೆಡ್‌ಮಾಸ್ತರು ಆರೋಗ್ಯವಾಗಿದ್ದಾರೆ. ನನಗೆ ತುಂಬಾ ಖುಷಿಯಾಗಿದೆ.

ಆ ದಿನ ತೊತ್ತೊ-ಚಾನ್ ಶಾಲೆಯಲ್ಲಿ ಒಬ್ಬರನ್ನೂ ಬಿಡದೆ ಎಲ್ಲರಿಂದಲೂ ಚಕ್ಕೆಯನ್ನು ಕಚ್ಚಿಸಿದಳು. ಒಂದೇ ಒಂದು ಮಗುವಿಗೂ ಅದು ಕಹಿಯಾಗಿರಲಿಲ್ಲ. ಎಂದರೆ ಎಲ್ಲಾ ಮಕ್ಕಳೂ ಆರೋಗ್ಯವಾಗಿದ್ದಾರೆ ಎಂದಾಯಿತು. ತೊತ್ತೊ-ಚಾನ್ ವಿಪರೀತ ಖುಷಿಗೊಂಡಳು.

ಮಕ್ಕಳೆಲ್ಲಾ ಮುಖ್ಯೋಪಾಧ್ಯಾಯರ ಬಳಿ ಹೋಗಿ ತಾವು ಆರೋಗ್ಯವಾಗಿರುವುದಾಗಿ ಹೇಳಿದರು. ಪ್ರತಿಯೊಬ್ಬರಿಗೂ ಅವರು "ತುಂಬಾ ಒಳ್ಳೆಯದು" ಎಂದು ಉತ್ತರಿಸಿದರು.

ಮುಖ್ಯೋಪಾಧ್ಯಾಯರಿಗೆ ಈ ಬಗ್ಗೆ ಚೆನ್ನಾಗಿಯೇ ಗೊತ್ತಿತ್ತು. ಅವರು ಹರೂನ್ ಪರ್ವತ ಪ್ರಾಂತದ ಮಧ್ಯಭಾಗದಲ್ಲೇ ಹುಟ್ಟಿ ಬೆಳೆದಿದ್ದವರು. ನದಿಯ ಪಕ್ಕದಲ್ಲಿದ್ದ ಅವರ ಊರಿಗೆ ಮೌಂಟ್ ಹರೂನ್ ಕಾಣುತ್ತಿತ್ತು. ಆ ಮರದ ಚಕ್ಕೆ ಯಾರೇ ಕಚ್ಚಿ ನೋಡಿದರೂ ಕಹಿಯಾಗಿರುವುದಿಲ್ಲ ಎಂಬುದು ಅವರಿಗೆ ಗೊತ್ತಿತ್ತು.

ಎಲ್ಲರೂ ಆರೋಗ್ಯವಾಗಿದ್ದಾರೆಂದು ತೊತ್ತೊ-ಚಾನ್ ಖುಷಿಪಡುವುದನ್ನು ನೋಡುವುದು ಅವರಿಗೆ ಆನಂದವಷ್ಟೆ. ಯಾರೊಬ್ಬರೂ ಚಕ್ಕೆ ಕಹಿಯಾಗಿದೆಯೆಂದು ಹೇಳಿದ್ದರೂ ತೊತ್ತೊ-ಚಾನ್ ಕಳಕಳಗೊಳ್ಳುತ್ತಿದ್ದಳೆಂದು ಅವರಿಗೆ ಗೊತ್ತಿತ್ತು.

ಶಾಲೆಯ ಪಕ್ಕದಲ್ಲಿ ಓಡಾಡುತ್ತಿದ್ದ ಬೀದಿ ನಾಯಿಯ ಬಾಯಿಗೂ ಚಕ್ಕೆಯನ್ನು ತುರುಕಿ ಕಚ್ಚಿಸಲು ಪ್ರಯತ್ನಿಸಿದಳು. ಅದು ಗುರ್ರೆಂದು ಅವಳನ್ನು ಕಚ್ಚಲು ಬಂತು. ಅವಳು ಅಷ್ಟಕ್ಕೂ ಬಿಡದೆ "ನೀನು ಹುಷಾರಾಗಿದ್ದೀಯಾ ಇಲ್ಲವಾ ಎಂದು ತಿಳಿಯುತ್ತೆ" ನಾಯಿಗೆ ದಬಾಯಿಸಿ ಹೇಳಿದಳು. "ಕಚ್ಚು, ನೀನು ಹುಷಾರಾಗಿದ್ದರೆ ಒಳ್ಳೆಯದಲ್ಲವಾ ?" ಯಾವುದೋ ಒಂದು ಬೀದಿ ನಾಯಿಗೆ ಕೂಡ ಚಕ್ಕೆಯನ್ನು ಕಚ್ಚಿಸುವಲ್ಲಿ ಯಶಸ್ವಿಯಾದಳು.

ನಾಯಿಯ ಸುತ್ತಲೂ ಕುಪ್ಪಳಿಸುತ್ತಾ:

"ವಾಹ್ ! ನೀನೂ ಕೂಡ ಆರೋಗ್ಯವಾಗಿದ್ದೀಯಾ" ಎಂದು ಕುಣಿದಾಡಿದಳು. ನಾಯಿ ಅವಳಿಗೆ ವಂದಿಸುತ್ತಿರುವಂತೆ ತಲೆ ಬಾಗಿಸಿತು. ನಂತರ ಎತ್ತಲೋ ಓಡಿ ಹೋಯಿತು.

ಪ್ರತಿ ದಿನ ಶಾಲೆಗೆ ಹೋಗುವ ಮುನ್ನವೂ ತೊತ್ತೊ-ಚಾನ್ ತನ್ನ ಡ್ರಾಯರಿನಿಂದ ಆ ಅಮೂಲ್ಯ ಚಕ್ಕೆಯನ್ನು ತೆಗೆಯುವಳು. ಸ್ವಲ್ಪ ಅಗಿದು ನೋಡಿ "ನಾನು ಆರೋಗ್ಯವಾಗಿದ್ದೇನೆ" ಎಂದು ಕೂಗುತ್ತಾ ಮನೆ ಬಿಡುವಳು. ತೊತ್ತೊ-ಚಾನ್ ನಿಜವಾಗಿಯೂ ಆರೋಗ್ಯವಾಗಿಯೇ ಇದ್ದಳು.

## ಇಂಗ್ಲಿಷ್ ಮಾತಾಡುವ ಹುಡುಗ

ತೊಮೊಯೆಗೆ ಹೊಸ ವಿದ್ಯಾರ್ಥಿ ಸೇರಿಕೊಂಡಿದ್ದ. ಪ್ರಾಥಮಿಕ ಶಾಲೆಗೆ ಅವನ ಎತ್ತರ ದಪ್ಪ ಹೆಚ್ಚಾಗಿಯೇ ಇತ್ತು. 'ಅವನು ಏಳನೇ ತರಗತಿಯ ಹುಡುಗನಂತೆ ಕಾಣುತ್ತಾನೆ.' ಎಂದುಕೊಂಡಳು ತೊತ್ತೊ-ಚಾನ್. ಅವನು ಹಾಕಿಕೊಂಡಿದ್ದ ಬಟ್ಟೆಗಳು ಭಿನ್ನವಾಗಿದ್ದವು. ದೊಡ್ಡವರು ಹಾಕಿಕೊಳ್ಳುವ ಬಟ್ಟೆಗಳಂತಿದ್ದವು.

ಆ ದಿನ ಶಾಲೆಯ ಮೈದಾನದಲ್ಲಿ ಮುಖ್ಯೋಪಾಧ್ಯಾಯರು ಹೊಸ ಹುಡುಗನನ್ನು ಪರಿಚಯಿಸಿದರು.

"ಇವನು ಮಿಯಜಾಕಿ, ಇವನು ಅಮೆರಿಕಾದಲ್ಲಿ ಹುಟ್ಟಿ ಬೆಳೆದವನು. ಆದ್ದರಿಂದ ಇವನಿಗೆ ಜಪಾನಿ ಅಷ್ಟು ಚೆನ್ನಾಗಿ ಮಾತನಾಡಲು ಬರುವುದಿಲ್ಲ. ಆದ್ದರಿಂದಲೇ ಅವನು ತೊಮೊಯೆಗೆ ಬಂದಿದ್ದಾನೆ. ಇಲ್ಲಾದರೆ ಎಲ್ಲರೂ ಸುಲಭವಾಗಿ ಸ್ನೇಹಿತರಾಗುತ್ತಾರೆ. ಪಾಠದಲ್ಲಿ ಗಮನಕೊಡುವುದು ಸಾಧ್ಯವಾಗುತ್ತದೆಯೆಂದೇ ಇಲ್ಲಿಗೆ ಬಂದಿದ್ದಾನೆ. ಅವನೀಗ ನಿಮ್ಮಲ್ಲಿ ಒಬ್ಬನು. ಅವನನ್ನು ಯಾವ ತರಗತಿಯಲ್ಲಿ ಹಾಕೋಣ ? ಐದನೇ ತರಗತಿಯಲ್ಲಿ ಹಾಕೋಣವಾ ? ತಾಯಿ-ಚಾನ್ ಮತ್ತು ಇತರರಿಗೆಲ್ಲ ಒಪ್ಪಿಗೆಯಾ ?"

"ಒಳ್ಳೇದು, ಹಾಕಿ" ಚಿತ್ರಕಲೆಯಲ್ಲಿ ಒಳ್ಳೆಯ ಪರಿಣತಿಯಿದ್ದ ತಾಯಿ-ಚಾನ್ ದೊಡ್ಡಣ್ಣನ ದನಿಯಲ್ಲಿ ಹೇಳಿದ.

ಮುಖ್ಯೋಪಾಧ್ಯಾಯರು ಮುಗುಳ್ನಕ್ಕು ಮುಂದುವರೆಸಿದರು, "ಅವನಿಗೆ ಜಪಾನೀ ಬರುವುದಿಲ್ಲವೆಂದು ನಾನು ಹೇಳಿದೆನಲ್ಲ, ಆದರೆ ಇಂಗ್ಲಿಷು ಚೆನ್ನಾಗಿ ಬರುತ್ತದೆ. ಅವನ ಹತ್ತಿರ ನೀವು ಇಂಗ್ಲಿಷ್ ಹೇಳಿಸಿಕೊಳ್ಳಿ. ಅವನಿಗೆ ಜಪಾನಿನ ಜೀವನ ಒಗ್ಗಿಲ್ಲ. ನೀವು ಸಹಾಯ ಮಾಡುತ್ತೀರಲ್ಲಾ ? ಅವನಿಂದ ಅಮೆರಿಕಾದ ಬದುಕನ್ನು ಕೇಳಿ ತಿಳಿದುಕೊಳ್ಳಿ. ಅವನು ನಿಮಗೆ ಆಸಕ್ತಿಯುತವಾದ್ದನ್ನೆಲ್ಲಾ ಹೇಳುತ್ತಾನೆ. ಸರಿ ಈಗ ನಾನವನನ್ನು ನಿಮ್ಮ ಹತ್ತಿರ ಬಿಟ್ಟು ಹೋಗುತ್ತೇನೆ." ಮಿಯಜಾಕಿ ತನ್ನ ತರಗತಿಯವರಿಗೆ ಬಾಗಿ ವಂದಿಸಿದ. ಅವರೆಲ್ಲಾ ಅವನಿಗಿಂತ ಸಣ್ಣವರಂತಿದ್ದರು. ತಾಯಿ-ಚಾನ್‌ನ ತರಗತಿಯವರಲ್ಲದೆ ಎಲ್ಲ ಮಕ್ಕಳೂ ಅವನಿಗೆ ಮರು ವಂದಿಸಿದರು.

ಊಟದ ಸಮಯದಲ್ಲಿ ಮಿಯಜಾಕಿ ಮುಖ್ಯೋಪಾಧ್ಯಾಯರ ಮನೆಗೆ ಹೋದನು. ಎಲ್ಲರೂ ಅವನನ್ನು ಹಿಂಬಾಲಿಸಿದರು. ಷೂ ತೆಗೆಯದೆಯೇ ಅವನು ಒಳಹೋಗಬೇಕೆ ! ಎಲ್ಲ ಮಕ್ಕಳೂ ಒಂದೇ ಸ್ವರದಲ್ಲಿ ಕೂಗಿದರು:

"ಷೂ ತೆಗೆದು ಒಳ ಹೋಗಬೇಕು."

ಮಿಯಾಜಾಕಿ ಚಕಿತಗೊಂಡ: "ಓ, ಕ್ಷಮಿಸಿ" ಎಂದು ಷೂ ಕಳಚಿದ. ಮಕ್ಕಳು ಅವನಿಗೆ ಏನು ಮಾಡಬೇಕು-ಮಾಡಬಾರದು ಎಂಬುದನ್ನೆಲ್ಲಾ ಒಟ್ಟೊಟ್ಟಿಗೆ ಹೇಳಲು ಪ್ರಾರಂಭಿಸಿದರು. "ಚಾಪೆ ಹಾಸಿರುವ ಕೋಣೆಗಳು ಮತ್ತು ಸಭಾಂಗಣಕ್ಕೆ ಷೂ ಬಿಚ್ಚಿ ಹೋಗಬೇಕು. ತರಗತಿಗಳಲ್ಲಿ ಮತ್ತು ಲೈಬ್ರರಿಯಲ್ಲಿ ಹಾಕಿಕೊಂಡಿರಬಹುದು."

"ಕುಹೊನ್‌ಬುತ್ಸು ದೇವಸ್ಥಾನಕ್ಕೆ ಹೋದಾಗ ಅಂಗಳದಲ್ಲಿ ಹಾಕಿಕೊಂಡಿರಬಹುದು. ಆದರೆ ದೇವಸ್ಥಾನದ ಒಳಗೆ ಹಾಕಿಕೊಂಡು ಹೋಗಕೂಡದು."

ಜಪಾನಿನ ಜೀವನ ಮತ್ತು ಹೊರ ದೇಶಗಳ ಜೀವನಗಳ ನಡುವಿನ ವ್ಯತ್ಯಾಸವನ್ನು ಕಂಡುಕೊಳ್ಳುವುದು ತಮಾಷೆಯಾಗಿತ್ತು.

ಮರುದಿನ ಮಿಯಾಜಾಕಿ ಶಾಲೆಗೆ ಸಚಿತ್ರವಾದ ಒಂದು ದೊಡ್ಡ ಇಂಗ್ಲಿಷ್ ಪುಸ್ತಕವನ್ನು ತಂದನು. ಪುಸ್ತಕವನ್ನು ನೋಡಲು ಊಟದ ಸಮಯದಲ್ಲಿ ಎಲ್ಲರೂ ಅವನ ಸುತ್ತ ಮುತ್ತಿಕೊಂಡರು. ಅವರಿಗೆ ತುಂಬಾ ಆಶ್ಚರ್ಯವಾಗಿತ್ತು. ಹಿಂದೆಂದೂ ಅವರು ಇಷ್ಟೊಂದು ಸುಂದರವಾದ ಸಚಿತ್ರ ಪುಸ್ತಕವನ್ನು ನೋಡೇ ಇರಲಿಲ್ಲ. ಅವರಿಗೆ ಗೊತ್ತಿದ್ದ ಸಚಿತ್ರ ಪುಸ್ತಕಗಳೆಲ್ಲಾ ಕಡು ಕೆಂಪು, ಹಸಿರು, ಹಳದಿ ಬಣ್ಣಗಳನ್ನೇ ಹೊಂದಿರುತ್ತಿದ್ದವು. ಆದರೆ ಆ ಪುಸ್ತಕದಲ್ಲಿ ತಿಳಿ ಗುಲಾಬಿಯಂತಹ ಬಣ್ಣಗಳಿದ್ದವು. ಬಿಳೀ ಮತ್ತು ಕಂದು ಮಿಶ್ರಿತ ಸುಂದರ ಛಾಯೆಗಳಿದ್ದುವು. ಅವರ ಬಳಿಯ ಕ್ರೆಯಾನ್ ಬಾಕ್‌ನಲ್ಲಿ ಇಂತಹ ಬಣ್ಣಗಳೇ ಬರುತ್ತಿರಲಿಲ್ಲ. ತಮ್ಮ ಕ್ರೆಯಾನ್ ಪೆಟ್ಟಿಗೆಯಲ್ಲಿ ಮಾಮೂಲಿ ಇಪ್ಪತ್ತನಾಲ್ಕು ಬಣ್ಣಗಳಷ್ಟೇ ಇದ್ದುವು. ತಾಯಿ-ಚಾನ್‌ನ ಬಳಿ 48 ಕ್ರೆಯಾನಿನ ಬಣ್ಣಗಳಿದ್ದವು. ಆ ಪುಸ್ತಕದಲ್ಲಂತೂ ಅದಕ್ಕಿಂತ ಹೆಚ್ಚಿನ ಬಣ್ಣಗಳಿಂದ ಕೂಡಿದ ಚಿತ್ರಗಳಿದ್ದುವು. ಎಲ್ಲರಿಗೂ ಅದು ತುಂಬಾ ಮೆಚ್ಚುಗೆಯಾಗಿತ್ತು. ಇನ್ನು ಚಿತ್ರಗಳ ಬಗ್ಗೆ ಹೇಳಬೇಕೆಂದರೆ, ಮೊದಲನೆಯದ್ದು ಒಂದು ನಾಯಿಯ ಚಿತ್ರ. ಅದು ಸಣ್ಣ ನಾಯಿಮರಿಯ ಬಾಲ ಕಟ್ಟಿಕೊಂಡು ಎಳೆಯುತ್ತಿತ್ತು. ಆಶ್ಚರ್ಯವೆಂದರೆ ನಾಯಿಮರಿಯ ಚರ್ಮದ ಬಣ್ಣ ನಿಜವಾದ ಚರ್ಮದಂತೆ ಕಾಣುತ್ತಿತ್ತು. ಅಷ್ಟೊಂದು ಸುಂದರವಾದ, ಹೊಳಪಿನ ದಪ್ಪ ಕಾಗದದ ಮೇಲೆ ಅಚ್ಚಾಗಿದ್ದ ಅಷ್ಟು ದೊಡ್ಡ ಸಚಿತ್ರ ಪುಸ್ತಕವನ್ನು ಅವರು ನೋಡಿಯೇ ಇರಲಿಲ್ಲ. ತೊತ್ತೊ-ಚಾನ್ ಮಿಯಾಜಾಕಿಗೆ ಅಂಟಿಕೊಂಡಂತೆ ಕುಳಿತು ಸಚಿತ್ರ ಪುಸ್ತಕಕ್ಕೆ ಆದಷ್ಟೂ ಹತ್ತಿರವಾಗಲು ಪ್ರಯತ್ನಿಸಿದಳು.

ಮಿಯಾಜಾಕಿ ಅವರಿಗೆ ಇಂಗ್ಲೀಷ್ ಓದಿ ತೋರಿಸತೊಡಗಿದ. ಮಕ್ಕಳು ಖುಷಿಯಿಂದ ಕಿವಿಗೊಟ್ಟು ಕೇಳಿಸಿಕೊಂಡರು. ಆನಂತರ ಮಿಯಾಜಾಕಿ ಜಪಾನೀ ಕಲಿಯಲು ಪ್ರಯತ್ನಿಸಿದ.

ಮಿಯಾಜಾಕಿ ಬರುವಾಗ ನಿಜವಾಗಿಯೂ ಹೊಸತೇನನ್ನೋ ಶಾಲೆಗೆ ತಂದಿದ್ದ. "ಅಕಾಚಾನ್‌ಗೆ ಇಂಗ್ಲಿಷ್‌ನಲ್ಲಿ ಬೇಬಿ ಅಂತಾರೆ" ಎಂದು ಪ್ರಾರಂಭಿಸಿದ.

ಅವರೆಲ್ಲಾ ಅವನನ್ನೇ ಅನುಕರಿಸಿ ಹೇಳಿದರು. "ಬೇಬಿ ಅಂದರೆ ಅಕಾಚಾನ್",

"ಉತ್ಸುಕುಷಿಗೆ ಬ್ಯೂಟಿಫುಲ್ ಅಂತಾರೆ." ಮಿಯಾಜಾಕಿ 'ಕು' ಗೆ ಒತ್ತುಕೊಡುತ್ತಾ ಕೊನೆಯ 'ಇ' ಉಚ್ಚಾರವನ್ನು ಮೊಟಕುಗೊಳಿಸಿದ.

"ಬ್ಯೂಟಿಫುಲ್ ಅಂದರೆ ಉತ್ಸುಕುಷೀ" ಎಲ್ಲರೂ ಹೇಳಿದರು.

ನಂತರ ಮಿಯಾಜಾಕಿಗೆ ತನ್ನ ಜಪಾನೀ ಉಚ್ಚಾರಣೆ ಸರಿಯಾಗಿಲ್ಲದಿರುವುದು ತಿಳಿಯಿತು. "ಉತ್ಸುಕುಷೀ ಎಂದು ಹೇಳಬೇಕಿತ್ತು, ಅಲ್ಲವಾ ?"

ಮಿಯಾಜಾಕಿ ಮತ್ತು ಇತರ ಮಕ್ಕಳು ಬಲುಬೇಗ ಸ್ನೇಹಿತರಾಗಿಬಿಟ್ಟರು. ಪ್ರತಿದಿನ ಅವನು ತೊಮೊಯೆಗೆ ವಿಧವಿಧದ ಪುಸ್ತಕಗಳನ್ನು ತಂದು ಊಟದ ಸಮಯದಲ್ಲಿ ಎಲ್ಲ ಮಕ್ಕಳಿಗೆ ಓದಿ ಹೇಳುತ್ತಿದ್ದನು.

ಮಿಯಾಜಾಕಿ ತಮ್ಮ ಇಂಗ್ಲಿಷ್ ಟೀಚರನೇನೋ ಎಂದು ಅವರಿಗನ್ನಿಸತೊಡಗಿತ್ತು. ಅದೇ ಸಮಯದಲ್ಲಿ ಮಿಯಾಜಾಕಿಯ ಜಪಾನೀ ಭಾಷೆ ಕೂಡ ತುಂಬಾ ಸುಧಾರಿಸಿತ್ತು. ಅದೂ ಅಲ್ಲದೆ ಅವನು ತೊಮೊಯೆದಲ್ಲಿ ಚಪ್ಪಲಿ ಹಾಕಿಕೊಂಡು ಹೋಗುವುದೇ ಮುಂತಾದ ತಪ್ಪುಗಳನ್ನು ಮಾಡುವುದನ್ನು ನಿಲ್ಲಿಸಿದ್ದನು.

ತೊತ್ತೊ-ಚಾನ್ ಮತ್ತು ಸ್ನೇಹಿತರು ಅಮೆರಿಕದ ಬಗ್ಗೆ ಅನೇಕ ವಿಚಾರಗಳನ್ನು ತಿಳಿದುಕೊಂಡರು. ತೊಮೊಯೆದಲ್ಲಿ ಜಪಾನ್ ಮತ್ತು ಅಮೆರಿಕಗಳ ಮೈತ್ರಿ ಬೆಳೆಯುತ್ತಿತ್ತು. ಆದರೆ ತೊಮೊಯೆದ ಹೊರಗಡೆ ಅಮೆರಿಕಾ ಶತ್ರುವಾಗಿತ್ತು; ಇಂಗ್ಲಿಷ್ ಶತ್ರು ಭಾಷೆಯಾದ್ದರಿಂದ ಎಲ್ಲ ಪಠ್ಯಕ್ರಮಗಳಿಂದಲೂ ಅದನ್ನು ದೂರಮಾಡಲಾಗಿತ್ತು. "ಅಮೆರಿಕನ್ನರು ದೈತ್ಯರು" ಸರ್ಕಾರ ಘೋಷಿಸಿತು. ಆದರೆ ತೊಮೊಯೆದಲ್ಲಿ ಎಲ್ಲರೂ "ಬ್ಯೂಟಿಫುಲ್ ಅಂದರೆ ಉತ್ಸುಕುಷಿ" ಎಂದು ಪಠಿಸುತ್ತಿದ್ದರು. ತೊಮೊಯೆದ ಮೇಲೆ ಬೀಸುತ್ತಿದ್ದ ತಂಗಾಳಿ ಬೆಚ್ಚಗೆ ಮೃದುವಾಗಿತ್ತು. ಅಲ್ಲಿನ ಮಕ್ಕಳು ನಿಜಕ್ಕೂ ಸುಂದರವಾಗಿದ್ದರು.

## ಮೊದಲ ನಾಟಕ

"ನಾವು ನಾಟಕ ಆಡುತ್ತೇವೆ !"

ಅದು ತೊಮೊಯೆದ ಚರಿತ್ರೆಯಲ್ಲಿ ಮೊದಲ ನಾಟಕ. ಊಟದ ಸಮಯದಲ್ಲಿ ಪ್ರತಿನಿತ್ಯ ಯಾರಾದರೂ ಭಾಷಣ ಮಾಡುವ ಪದ್ಧತಿ ನಡೆದೇ ಇತ್ತು. ಆದರೆ ಸಂಗೀತ ವ್ಯಾಯಾಮದಲ್ಲಿ ಮುಖ್ಯೋಪಾಧ್ಯಾಯರು ಕುಳಿತು ಪಿಯಾನೋ ನುಡಿಸುತ್ತಿದ್ದ ಸಣ್ಣ ವೇದಿಕೆಯ ಮೇಲೆ ಜನರ ಸಮ್ಮುಖದಲ್ಲಿ ನಾಟಕ ಮಾಡುವುದೆಂದರೆ ! ಸಣ್ಣ ಮಾತಲ್ಲ. ಮಕ್ಕಳಂತೂ ನಾಟಕವನ್ನು ನೋಡಿಯೂ ಇರಲಿಲ್ಲ. ತೊತ್ತೊ-ಚಾನ್ ಕೂಡ 'ಹಂಸ ಕೊಳ'ಕ್ಕೆ ಹೋದದ್ದನ್ನು ಬಿಟ್ಟರೆ ಅವಳು ರಂಗಮಂದಿರಕ್ಕೆ ಹೊದದ್ದೇ ಇಲ್ಲ. ಇದೆಲ್ಲಾ ಹೀಗಿದ್ದೂ, ತಮ್ಮ ವರ್ಷಾಂತ್ಯದ ಕಾರ್ಯಕ್ರಮಕ್ಕೆ ಎಂತಹ ನಾಟಕ ಮಾಡಬೇಕೆಂದು ಅವರೆಲ್ಲಾ ಚರ್ಚಿಸಿದರು.

ತೊತ್ತೊ-ಚಾನ್‌ಳ ತರಗತಿಯವರು 'ಕಾಂಜಿಂಚೋ' ಎನ್ನುವ ನಾಟಕ ಮಾಡಲು ನಿರ್ಧರಿಸಿದರು. ಅದೊಂದು ಹಳೆಯ ಜನಪ್ರಿಯ ಕಬೂಕಿ ನಾಟಕವಾಗಿತ್ತು.

ತೊಮೊಯೆದಲ್ಲಿ ಅದನ್ನು ನಿರೀಕ್ಷಿಸುವುದು ಸಾಧ್ಯವಿರಲಿಲ್ಲ. ಆದರೆ ಅದು ಅವರ ಒಂದು ಪಠ್ಯ ಪುಸ್ತಕದಲ್ಲಿತ್ತು. ಅದನ್ನೇ ಮಾರೂಯಾಮರ ಬಳಿ ಹೇಳಿಸಿಕೊಂಡು ಮಾಡಲು ತೀರ್ಮಾನಿಸಿದರು. ಆಯಿಕೋ ಸಾಯಿಷೋ ಎತ್ತರಕ್ಕೆ ದೊಡ್ಡವಳಾಗಿ ಕಾಣುತ್ತಿದ್ದರಿಂದ ಅದರಲ್ಲಿ ಬರುವ ಬಲಶಾಲಿ ಮನುಷ್ಯ ಬೆಂಕೈ ಪಾತ್ರಕ್ಕೆ ಸರಿಹೋಗುತ್ತಾಳೆ. ದೊಡ್ಡ ದನಿಯ ಕೊಂಚ ಗಡುಸಿನ ಅಮೆದೆರಾ ಕಮಾಂಡರನ ಪಾತ್ರ ಮಾಡುತ್ತಾನೆ ಎಂದು ತೀರ್ಮಾನಿಸಿದರು. ತುಂಬಾ ಚರ್ಚಿಸಿದ ನಂತರ, ನಾಟಕದಲ್ಲಿ ಪೋರ್ಟರನಂತೆ ವೇಷ ಮರೆಸಿಕೊಂಡಿರುವ ಕುಲೀನನಾದ ಯೊಷಿಸ್ತೂನೆ ಪಾತ್ರವನ್ನು ತೊತ್ತೊ-ಚಾನ್ ಮಾಡುವುದೆಂದು ತೀರ್ಮಾನವಾಯಿತು. ಉಳಿದವರೆಲ್ಲಾ ವಿಹಾರಿಗಳಾದ ಭಿಕ್ಷುಗಳಾಗಿರುತ್ತಾರೆ.

ರಿಹರ್ಸಲ್ ಪ್ರಾರಂಭಿಸುವ ಮುನ್ನ ಮಕ್ಕಳೆಲ್ಲಾ ತಮ್ಮ ತಮ್ಮ ಸಾಲುಗಳನ್ನು ಕಲಿಯಬೇಕಾಗಿತ್ತು. ತೊತ್ತೊ-ಚಾನ್ ಮತ್ತು ಭಿಕ್ಷುಗಳಿಗೆಲ್ಲಾ ಮಾತೇ ಇರಲಿಲ್ಲ ಆದ್ದರಿಂದ ಅವರಿಗೆ ತೊಂದರೆಯಿರಲಿಲ್ಲ. ಭಿಕ್ಷುಗಳು ಇಡೀ ನಾಟಕದಲ್ಲಿ ಸುಮ್ಮನೆ ಮೌನವಾಗಿ ನಿಲ್ಲಬೇಕಾಗಿತ್ತು. ಯೊಷಿಸ್ತೂನೆ ಪಾತ್ರಧಾರಿಯಾಗಿ ತೊತ್ತೊ-ಚಾನ್ ಹುಲ್ಲಿನ ಹ್ಯಾಟಿನಡಿ ತನ್ನ ಮುಖ ಮರೆಸಿಕೊಂಡು ಮಂಡಿಯೂರಿ ನಿಲ್ಲಬೇಕಾಗಿತ್ತು. ವಾಸ್ತವದಲ್ಲಿ ಯೊಷಿಸ್ತೂನೆ ಸೇವಕನಾದ ಬೆಂಕೈಯು, ತಂಡವನ್ನು ಉಪಾಯವಾಗಿ ಅತಾಕಾ ಚೆಕ್‌ಪೋಸ್ಟ್ ದಾಟಿಸುವ ಸನ್ನಾಹದಲ್ಲಿ ತನ್ನ ಯಜಮಾನನನ್ನು ಬೈಯುತ್ತಾ ಹೊಡೆಯುತ್ತಾ ಇರುತ್ತಾನೆ. ಇತರರು ದೇವಸ್ಥಾನದ ಪುನರುಜ್ಜೀವನಕ್ಕಾಗಿ ಹಣ ಸಂಗ್ರಹಿಸುವ ಭಿಕ್ಷುಗಳ ಗುಂಪಿನಂತೆ ನಟಿಸುತ್ತಾರೆ. ಬೆಂಕೈಯ ಪಾತ್ರ ಮಾಡುವ ಆಯಿಕೊ ಸಾಯಿಷೋಳ ಪಾತ್ರ ಮಹತ್ತರವಾದದ್ದು. ಮಾತಿನಿಂದ ಚೆಕ್‌ಪಾಯಿಂಟ್ ಕಮ್ಯಾಂಡರನಾದ ತೊಗಾಷಿಯನ್ನು ಮರುಳು ಮಾಡುವುದರ ಜತೆಗೆ, ಕಮ್ಯಾಂಡರನ ಆಜ್ಞೆಯ ಮೇರೆಗೆ ಹಣ ಸಂಗ್ರಹಣೆಯ ಸಂಹಿತೆಯನ್ನು ಓದಿ ಹೇಳಬೇಕಾದ ಸನ್ನಿವೇಶವಿತ್ತು. ಅವಳು ಓದಿ ಹೇಳಬೇಕಾದಾಗ ಹಾಳೆ ಖಾಲಿಯಾಗಿದ್ದು, ಅವಳು ಒಡಂಬಡಿಕೆಯ ಅಲಂಕಾರಿಕ ಭಾಷೆಯಲ್ಲಿ ಅದನ್ನು ಓದಿ ಹೇಳುತ್ತಾಳೆ.

"ಮೊದಲನೆಯದಾಗಿ, ತೊದಾಯಿಜಿ ಎನ್ನುವ ದೇವಸ್ಥಾನದ ಪುನರುಜ್ಜೀವನಕ್ಕೆ..."

ಆಯಿಕೊ ಸಾಯಿಷೋ ಈ ಭಾಷಣವನ್ನು ಪ್ರತಿದಿನ ಅಭ್ಯಾಸ ಮಾಡುತ್ತಿದ್ದಳು. ತೊಗಾಷಿಯ ಪಾತ್ರಕ್ಕೆ ಕೂಡ, ಆತ ಬೆಂಕೈಯ ವಾದಗಳನ್ನು ಖಂಡಿಸಬೇಕಾಗಿದ್ದರಿಂದ ತುಂಬಾ ಮಾತುಗಳಿದ್ದುವು. ಅಮೆದೆರಾ ಅದನ್ನೆಲ್ಲಾ ಕಲಿಯಲು ಕಷ್ಟಪಡುತ್ತಿದ್ದನು.

ಕೊನೆಗೂ, ರಿಹರ್ಸಲ್ ಪ್ರಾರಂಭಿಸುವ ಸಮಯ ಬಂತು. ತೊಗಾಷಿ ಮತ್ತು ಬೆಂಕೈ ಎದುರು ಬದುರಾಗಿ ನಿಂತಿರುತ್ತಾರೆ. ಭಿಕ್ಷುಗಳು ಬೆಂಕೈಯ ಹಿಂದೆ ಸಾಲಾಗಿ ನಿಂತಿರುತ್ತಾರೆ. ಮತ್ತು ತೊತ್ತೊ-ಚಾನ್ ಯೊಷಿಸ್ತೂನೆಯಾಗಿ ಭಿಕ್ಷುಗಳ ನಡುವೆ ಮಂಡಿಯೂರಿ ಕುಳಿತಿರುತ್ತಾಳೆ. ಆದರೆ ತೊತ್ತೊ-ಚಾನ್‌ಳಿಗೆ ಇದೆಲ್ಲ ಏನಾಗುತ್ತಿದೆ ಎಂದು ಅರ್ಥವಾಗುತ್ತಿರಲಿಲ್ಲ. ಬೆಂಕೈಯು ಯೊಷಿಸ್ತೂನೆಯನ್ನು ಕೆಳಗೆ ತಳ್ಳಿ

ಹೊಡೆಯುವಾಗ ಅವಳಗೆ ಸಿಟ್ಟು ಬಂದಿತ್ತು. ಅವಳು ಹಿಂದಿರುಗಿ ಆಯಿಕೋ ಸಾಯಿಷೋಗೆ ಒದ್ದಳು. ಪರಚಿಯೂ ಬಿಟ್ಟಳು. ಆಯಿಕೋ ಅಳತೊಡಗಿದಳು. ಭಿಕ್ಷು ವೇಷದ ಮಕ್ಕಳೆಲ್ಲಾ ನಗತೊಡಗಿದರು.

ನಾಟಕದಲ್ಲಿ ಯೊಷಿಸ್ತೂನೆ ತನ್ನನ್ನು ಎಷ್ಟೇ ಬೈದರೂ ಹೊಡೆದರೂ, ಸಹಿಸಿಕೊಂಡು ಸುಮ್ಮನೆ ಇರಬೇಕಾಗಿತ್ತು. ತೊಗಾಷಿಯ ನಿಜವಾದ ಬಣ್ಣ ಕೊಂಚ ಕೊಂಚ ಬಯಲಾಗುತ್ತದೆ. ಇದು ನಾಟಕದ ವಸ್ತು. ಯೊಷಿಸ್ತೂನೆಯನ್ನು ಹೊಡೆಯುತ್ತಿರುವುದರಿಂದ ಬೆಂಕ್ಯೆಗೆ ಅಪಾರ ನೋವಾಗಿರಬೇಕು ಎಂಬುದನ್ನೇ ಯೋಚಿಸುತ್ತಾ ಕೊನೆಗೆ ಇಡೀ ತಂಡವನ್ನು ಚೆಕ್‌ಪಾಯಿಂಟಿನಿಂದ ಮುಂದೆ ಹೋಗಲು ತೊಗಾಷಿ ಬಿಟ್ಟುಬಿಡುತ್ತಾನೆ.

ಯೊಷಿಸ್ತೂನೆ ಪ್ರತಿಭಟಿಸಿದರೆ ಇಡೀ ನಾಟಕವೇ ಹಾಳಾಗಿಹೋಗುತ್ತಿತ್ತು. ಇದನ್ನು ತೊತ್ತೊ-ಚಾನ್‌ಳಿಗೆ ವಿವರಿಸಲು ಮಾರೂಯಾಮಾ ಅವರು ತುಂಬಾ ಪ್ರಯತ್ನಿಸಿದರು. ಆದರೆ ತೊತ್ತೊ-ಚಾನ್ ಹಠ ಬಿಡಲಿಲ್ಲ. ಆಯಿಕೋ ಸಾಯಿಷೋ ತನ್ನನ್ನು ಹೊಡೆದರೆ ತಾನೂ ತಿರುಗಿ ಹೊಡೆಯುವುದಾಗಿ ಪಟ್ಟು ಹಿಡಿದಳು. ಹೀಗಾಗಿ ಅವರು ಮುಂದಕ್ಕೆ ಹೋಗುವುದು ಸಾಧ್ಯವಾಗಲಿಲ್ಲ.

ಎಷ್ಟು ಸಲ ದೃಶ್ಯದ ರಿಹರ್ಸಲ್‌ಗೆ ಪ್ರಯತ್ನಿಸಿದರೂ, ಪ್ರತಿ ಸಾರಿಯೂ ತೊತ್ತೊ-ಚಾನ್ ಹೊಡೆದಾಟಕ್ಕೆ ಬರುತ್ತಿದ್ದಳು.

"ಇನ್ನು ಸಾಧ್ಯವೇ ಇಲ್ಲ", ಮಾರೂಯಾಮರು ತೊತ್ತೊ-ಚಾನ್‌ಳಿಗೆ ಹೇಳಿದರು. "ಈಗ ತಾಯಿ-ಚಾನನಿಗೆ ಯೊಷಿಸ್ತೂನೆ ಪಾತ್ರ ಮಾಡುವಂತೆ ಹೇಳುವುದೇ ಸರಿ."

ತೊತ್ತೊ-ಚಾನ್‌ಳಿಗೆ ನಿರಾಳವೆನಿಸಿತು. ಇಡೀ ನಾಟಕದಲ್ಲಿ ಕೆಳಗೆ ಬಿದ್ದು ಹೊಡೆಸಿಕೊಳ್ಳುವ ಒಂದೇ ಒಂದು ಪಾತ್ರವನ್ನು ಅವಳು ಮಾಡಲು ತಯಾರಿರಲಿಲ್ಲ.

"ನೀನು ಭಿಕ್ಷುವಾಗಿರುತ್ತೀಯಾ ತೊತ್ತೊ-ಚಾನ್?" ಮಾರೂಯಾಮರು ಕೇಳಿದರು. ಹೀಗಾಗಿ ತೊತ್ತೊ-ಚಾನ್ ಇತರ ಭಿಕ್ಷುಗಳ ಜತೆ ಹಿಂದೆ ತೆಪ್ಪಗೆ ನಿಂತುಕೊಂಡಳು.

ಈಗ ಎಲ್ಲ ಸರಿಹೋಗುತ್ತದೆಂದು ಮಾರೂಯಾಮ ಹಾಗೂ ಉಳಿದ ಎಲ್ಲರೂ ತಿಳಿದುಕೊಂಡರು. ಆದರೆ ಹಾಗಾಗಲಿಲ್ಲ. ತೊತ್ತೊ-ಚಾನ್‌ಳಿಗೆ ಭಿಕ್ಷುವಿನ ದೊಡ್ಡ ದೊಣ್ಣೆಯನ್ನು ಹಿಡಿದುಕೊಳ್ಳಲು ಅವರು ಬಿಡುವಂತಿರಲಿಲ್ಲ. ನಿಂತು ನಿಂತು ಬೇಸರಗೊಂಡ ಅವಳು ದೊಣ್ಣೆಯಿಂದ ತನ್ನ ಪಕ್ಕದಲ್ಲಿ ನಿಂತ ಭಿಕ್ಷುವಿನ ಕಾಲನ್ನು ಚುಚ್ಚುವಳು, ಇನ್ನೊಬ್ಬ ಭಿಕ್ಷುವಿನ ಕಂಕುಳಿಗೆ ಕಚಗುಳಿಯಿಕ್ಕುವಳು. ಮತ್ತೆ ಇಡೀ ದೃಶ್ಯ ಹಾಳಾಗತೊಡಗಿತು.

ಹೀಗಾಗಿ ಕೊನೆಗೆ ಅವಳಿಗೆ ಭಿಕ್ಷುವಿನ ಪಾತ್ರ ಕೂಡ ದಕ್ಕದೇ ಹೋಯಿತು.

ಕೆಳಗೆ ನೂಕಲ್ಪಟ್ಟಾಗ ತಾಯಿ-ಚಾನ್‌ಳು ಅವಮಾನಿತ ಗಂಡಸಿನಂತೆ ಹಲ್ಲು ಕಚ್ಚಿ ಹಿಡಿದು ಸಹಿಸಿಕೊಳ್ಳುತ್ತಿದ್ದ ರೀತಿ ಪ್ರೇಕ್ಷಕರಿಗೆ ಮನಮುಟ್ಟುವಂತಿತ್ತು. ತೊತ್ತೊ-ಚಾನ್‌ಳಿಲ್ಲದೆ ಅಭ್ಯಾಸ ಸುಸೂತ್ರವಾಗಿ ಮುಂದುವರೆದಿತ್ತು.

ತನ್ನಷ್ಟಕ್ಕೆ ಒಬ್ಬಳೇ ತೊತ್ತೊ-ಚಾನ್ ಶಾಲೆಯ ಮೈದಾನಕ್ಕೆ ಹೋದಳು. ತನ್ನ

ಷೂಗಳನ್ನು ಕಳಚಿಟ್ಟು ಬ್ಯಾಲೆಯನ್ನು ಸುಧಾರಿಸತೊಡಗಿದಳು. ಒಮ್ಮೆ ಅವಳು ಹಂಸವಾಗುತ್ತಾಳೆ, ಮತ್ತೊಮ್ಮೆ ಗಾಳಿಯಾಗುತ್ತಾಳೆ. ಒಮ್ಮೆ ಶಿಲ್ಪವಾಗುತ್ತಾಳೆ, ಮತ್ತೊಮ್ಮೆ ಮರವಾಗುತ್ತಾಳೆ. ಯಾರೂ ಇಲ್ಲದ ಮೈದಾನದಲ್ಲಿ ಒಬ್ಬಳೇ ನರ್ತಿಸುತ್ತಿರುತ್ತಾಳೆ.

ಯೊಷಿಸೂನೆ ಪಾತ್ರವನ್ನು ತಾನು ಮಾಡಬೇಕಾಗಿತ್ತೆಂದು ಹೃದಯದಾಳದಲ್ಲಿ ಎಲ್ಲೋ ಸಣ್ಣಗೆ ಅವಳಿಗೆ ಅನ್ನಿಸುತ್ತಿತ್ತು. ಆದರೆ ಮಾಡಲು ಕೊಟ್ಟಿದ್ದರೆ ಮಾತ್ರ ಅಯಿಕೋ ಸಾಯಿಷೋಳನ್ನು ಸರಿಯಾಗಿ ಹೊಡೆದು ಪರಚಿ ಹಾಕುತ್ತಿದ್ದಳು.

ಹೀಗಾಗಿ ತೊಮೊಯೆದ ಮೊದಲ ಮತ್ತು ಕೊನೆಯ ಹವ್ಯಾಸಿ ನಾಟಕದಲ್ಲಿ ತೊತ್ತೊ-ಚಾನ್ ಪಾತ್ರ ವಹಿಸುವುದು ಸಾಧ್ಯವಾಗಲಿಲ್ಲ.

## ಸೀಮೆಸುಣ್ಣ

ತೊಮೊಯೆದ ಮಕ್ಕಳು ಇತರರ ಗೋಡೆಯ ಮೇಲೆ ಅಥವಾ ರಸ್ತೆಗಳ ಮೇಲೆ ಗೀಚುತ್ತಿರಲಿಲ್ಲ. ಏಕೆಂದರೆ ಅವರಿಗೆ ಹೀಗೆ ಮಾಡುವ ಅವಕಾಶ ಶಾಲೆಯಲ್ಲೇ ಇರುತ್ತಿತ್ತು.

ಅಸೆಂಬ್ಲಿ ಹಾಲಿನಲ್ಲಿ ಸಂಗೀತದ ತರಗತಿಯ ಸಮಯದಲ್ಲಿ ಮುಖ್ಯೋಪಾಧ್ಯಾಯರು ಪ್ರತಿಯೊಬ್ಬರಿಗೂ ಬಿಳಿಯ ಸೀಮೆಸುಣ್ಣದ ತುಂಡನ್ನು ಕೊಡುತ್ತಿದ್ದರು. ಅವರು ತಮಗಿಷ್ಟ ಬಂದಲ್ಲಿ ನೆಲದ ಮೇಲೆ ಕೂತು ಅಥವಾ ಒರಗಿಕೊಂಡು ಕೈಯಲ್ಲಿ ಸೀಮೆಸುಣ್ಣ ಹಿಡಿದು ಕಾಯುವರು. ಅವರೆಲ್ಲಾ ತಯಾರಾದಾಗ, ಹೆಡ್‌ಮಾಸ್ತರು ಪಿಯಾನೋ ನುಡಿಸಲು ಪ್ರಾರಂಭಿಸುವರು. ನುಡಿಸುತ್ತಾ ಹೋದ ಹಾಗೆ ಅವರು ಸಂಗೀತದ ಸಂಕೇತವನ್ನು ಬಳಸಿ ಲಯವನ್ನು ನೆಲದ ಮೇಲೆ ಬರೆಯುವರು. ತಿಳಿ ಕಂದು ಬಣ್ಣದ ಹೊಳಪು ಮರದ ಮೇಲೆ ಸೀಮೆಸುಣ್ಣದಿಂದ ಬರೆಯುವುದು ತುಂಬಾ ಮಜವಾಗಿರುತ್ತಿತ್ತು. ತೊತ್ತೊ-ಚಾನ್‌ಳ ತರಗತಿಯಲ್ಲಿ ಹತ್ತೇ ಮಂದಿ ಮಕ್ಕಳಿದ್ದರಿಂದ, ಒಬ್ಬರು ಮತ್ತೊಬ್ಬರ ಜಾಗವನ್ನು ಆಕ್ರಮಿಸಿಕೊಳ್ಳದೆಯೇ ತಮಗೆ ಬೇಕಾದಷ್ಟು ವಿಸ್ತಾರವಾದ ಜಾಗದಲ್ಲಿ ಬರೆಯುವ ಅವಕಾಶ ಅವರಿಗೆ ಇರುತ್ತಿತ್ತು. ಅವರು ಲಯವನ್ನು ಕೆಳಗೆ ಬರೆಯುತ್ತಿದ್ದುದರಿಂದ ಸಂಕೇತಕ್ಕೆ ಗೆರೆಗಳನ್ನು ಬರೆಯುವುದು ಬೇಕಾಗಿರಲಿಲ್ಲ. ತೊಮೊಯೆದ ಸಂಗೀತ ಸಂಕೇತಗಳಿಗೆ ಮಕ್ಕಳೇ ಕೊಟ್ಟ ವಿಶೇಷ ಹೆಸರುಗಳಿದ್ದವು. ಮುಖ್ಯೋಪಾಧ್ಯಾಯರ ಜತೆ ಸಮಾಲೋಚಿಸಿ ಅವರು ರೂಪಿಸಿದ ಕೆಲವು ಮಾದರಿಗಳೆಂದರೆ:

♫ ಇದನ್ನು ಜಿಗಿತ (ಸ್ಕಿಪ್) ಎಂದು ಕರೆಯಲಾಗುತ್ತಿತ್ತು. ಏಕೆಂದರೆ ಜಿಗಿಯಲು ಮತ್ತು ಹಾರಲು ಇದು ಒಳ್ಳೆಯ ಲಯವಾಗಿತ್ತು.

♪ ಇದನ್ನು ಬಾವುಟ ಎಂದು ಕರೆಯಲಾಗುತ್ತಿತ್ತು. ಏಕೆಂದರೆ ಇದು ಬಾವುಟದಂತೆ ಇತ್ತು.

 ಇದನ್ನು ಬಾವುಟ-ಬಾವುಟ ಎನ್ನುತ್ತಿದ್ದರು.

 ಇದನ್ನು ಎರಡು-ಬಾವುಟ ಎನ್ನಲಾಗುತ್ತಿತ್ತು.

 ಇದರ ಹೆಸರು ಕಪ್ಪು.

 ಇದರ ಹೆಸರು ಬಿಳಿ.

 ಇದು ಬಿಳಿ ಮತ್ತು ಚುಕ್ಕೆ.

 ಇದು ವೃತ್ತ.

ಹೀಗೆ ಅವರು ಸಂಕೇತಗಳನ್ನು ಚೆನ್ನಾಗಿ ಕಲಿಯುತ್ತಿದ್ದರು. ಇದು ಒಂದು ರೀತಿ ತಮಾಷೆಯಾಗಿರುತ್ತಿತ್ತು. ಅವರು ತುಂಬಾ ಪ್ರೀತಿಸುತ್ತಿದ್ದ ತರಗತಿ ಇದು.

ಸೀಮೆಸುಣ್ಣದಿಂದ ನೆಲದ ಮೇಲೆ ಬರೆಯುವುದು ಮುಖ್ಯೋಪಾಧ್ಯಾಯರ ಕಲ್ಪನೆಯೇ ಆಗಿತ್ತು. ಕಾಗದ ಸಾಕಷ್ಟು ದೊಡ್ಡದಿರುತ್ತಿರಲಿಲ್ಲ ಮತ್ತು ಯಥೇಚ್ಛವಾಗಿ ಬಳಸುವಷ್ಟು ಕಪ್ಪುಹಲಗೆಗಳೂ ಇರುತ್ತಿರಲಿಲ್ಲ. ಸಭಾಂಗಣದ ವಿಶಾಲ ನೆಲದ ಮೇಲೆ ಮಕ್ಕಳು ಸಂಗೀತ ಎಷ್ಟೇ ವೇಗವಾಗಿರಲಿ, ತಮಗಿಷ್ಟವಾದಷ್ಟು ದೊಡ್ಡದಾಗಿ ಆರಾಮವಾಗಿ ಸ್ವರಲಿಪಿಯನ್ನು ಬರೆಯಬಹುದಾಗಿತ್ತು. ಇದರ ಜತೆಗೆ ಅವರು ಸಂಗೀತವನ್ನೂ ಸವಿಯಬಹುದಾಗಿತ್ತು. ಬಳಿಕ ಸಮಯ ಇನ್ನೂ ಉಳಿದಿದ್ದರೆ, ಅವರು ವಿಮಾನಗಳನ್ನು, ಗೊಂಬೆಗಳನ್ನು ಅಥವಾ ತಮಗಿಷ್ಟವಾದ ಬೇರೆ ಏನನ್ನಾದರೂ ಬರೆಯಬಹುದಾಗಿತ್ತು. ಕೆಲಸಮಯ ಮಕ್ಕಳು ತಮಾಷೆಗೆಂದು ಎಲ್ಲರೂ ಬರೆದ ಚಿತ್ರಗಳನ್ನು ಒಂದಕ್ಕೊಂದು ಸೇರಿಸಿಬಿಡುತ್ತಿದ್ದರು. ಆಗ ಇಡೀ ಸಭಾಂಗಣ ಒಂದೇ ಒಂದು ಬೃಹತ್ ಚಿತ್ರವಾಗುತ್ತಿತ್ತು.

ಸಂಗೀತ ತರಗತಿಯ ವಿರಾಮದ ವೇಳೆಯಲ್ಲಿ ಮುಖ್ಯೋಪಾಧ್ಯಾಯರು ಪ್ರತಿಯೊಬ್ಬ ಮಗುವಿನ ಲಯವನ್ನು ಬಂದು ಪರಿಶೀಲಿಸುತ್ತಿದ್ದರು. ಹಾಗೆಯೇ ಹೇಳುವರು, "ಅದು ಚೆನ್ನಾಗಿದೆ" ಅಥವಾ "ಅದು ಬಾವುಟ ಬಾವುಟ ಆಗಿಲ್ಲ, ಜಿಗಿತ ಆಗಿದೆ."

ಅವರು ಎಲ್ಲರ ಸಂಕೇತಗಳನ್ನು ಸರಿಪಡಿಸಿದ ನಂತರ, ಅದೇ ಸಂಗೀತವನ್ನು ಪುನಃ ನುಡಿಸುವರು. ಆಗ ಮಕ್ಕಳು ತಾವೇನು ಮಾಡಿದ್ದೆವು ಎಂಬುದನ್ನು ತಾವೇ ಪರಿಶೀಲಿಸುತ್ತಾ ಲಯಗಳನ್ನು ಹೆಚ್ಚು ಪರಿಚಯ ಮಾಡಿಕೊಳ್ಳಲು ಸಾಧ್ಯವಾಗುತ್ತಿತ್ತು. ಮುಖ್ಯೋಪಾಧ್ಯಾಯರು ಎಷ್ಟೇ ಕೆಲಸವಿರಲಿ ತಾವೇ ಖುದ್ದಾಗಿ ಈ ತರಗತಿಯನ್ನು ತೆಗೆದುಕೊಳ್ಳುತ್ತಿದ್ದರು. ಮಕ್ಕಳಿಗಂತೂ

ಮುಖ್ಯೋಪಾಧ್ಯಾಯರಿಲ್ಲದಿದ್ದರೆ ಖುಷಿಗೆ ಏನೋ ಕೊರತೆ.

ಲಯುಗಳನ್ನು ಬರೆದು ಮುಗಿಸಿದ ನಂತರ ಅದನ್ನು ಶುಚಿಗೊಳಿಸುವುದು ದೊಡ್ಡ ಕೆಲಸವೇ. ಮೊದಲಿಗೆ ಕರಿಹಲಗೆಯನ್ನು ಅಳಿಸುವ ಸಾಧನದಿಂದ ನೆಲವನ್ನು ಒರೆಸಬೇಕು. ಬಳಿಕ ಸಂಪೂರ್ಣ ಕಲೆ ಉಳಿಯದಂತೆ ಹಳೆಯ ಬಟ್ಟೆಯನ್ನು ನೀರಿನಲ್ಲಿ ಅದ್ದಿ ಒರೆಸಬೇಕು. ಒಟ್ಟಾರೆ ಕಡಿಮೆ ಕೆಲಸವೇನಲ್ಲ. ಹೀಗೆ ತೊಮೊಯೆದ ಮಕ್ಕಳಿಗೆ ಮನಬಂದಂತೆ ಗೀಚಿದ್ದನ್ನು ಅಳಿಸುವ ಕಷ್ಟದ ಅರಿವಿರುತ್ತಿದ್ದುದರಿಂದ ಅವರು ಅಸೆಂಬ್ಲಿ ಹಾಲನ್ನು ಬಿಟ್ಟರೆ ಬೇರೆಲ್ಲೂ ಗೀಚುತ್ತಿರಲಿಲ್ಲ. ಅದೂ ಇಲ್ಲದೆ ಆ ತರಗತಿ ವಾರಕ್ಕೆ ಎರಡು ಬಾರಿ ಇರುತ್ತಿದ್ದುದರಿಂದ ಮಕ್ಕಳಿಗೆ ಹೊರೆಯಾಗುತ್ತಿರಲಿಲ್ಲ.

ತೊಮೊಯೆದ ಮಕ್ಕಳು ಸೀಮೆಸುಣ್ಣದ ವಿಚಾರದಲ್ಲಿ ತಜ್ಞರೇ ಆಗಿಬಿಟ್ಟಿದ್ದರು. ಯಾವುದು ಅತ್ಯುತ್ತಮ ಬಗೆಯದು, ಅದನ್ನು ಹೇಗೆ ಹಿಡಿಯಬೇಕು, ಉತ್ತಮ ಫಲಿತಾಂಶಕ್ಕಾಗಿ ಅದನ್ನು ಹೇಗೆಲ್ಲಾ ವಕ್ರಗೊಳಿಸಬೇಕು, ಅದು ಒಡೆಯದಂತೆ ಹೇಗೆ ನೋಡಿಕೊಳ್ಳಬೇಕು - ಹೀಗೆ ಪ್ರತಿಯೊಬ್ಬರೂ ಸೀಮೆಸುಣ್ಣದ ಪರಿಣತರೇ ಆಗಿದ್ದರು.

## "ಯಾಸುಕೀ-ಚಾನ್ ಇನ್ನಿಲ್ಲ"

ಬೇಸಿಗೆ ರಜೆಯ ನಂತರದ ಮೊದಲ ದಿನ ಮುಖ್ಯೋಪಾಧ್ಯಾಯರು ಶಾಲಾ ಮೈದಾನದಲ್ಲಿ ಸೇರಿದ್ದ ಮಕ್ಕಳ ಮುಂದೆ ನಿಂತಿದ್ದರು. ವಾಡಿಕೆಯಂತೆ ಕೈ ಜೇಬಿನೊಳಗೆ ಇತ್ತು. ಆದರೆ ಸ್ವಲ್ಪ ಹೊತ್ತಿನವರೆಗೂ ಅವರು ಏನೂ ಹೇಳಲಿಲ್ಲ. ನಂತರ ನಿಧಾನಕ್ಕೆ ಜೇಬಿನಿಂದ ಕೈ ಹೊರತೆಗೆದು ಮಕ್ಕಳತ್ತ ನೋಡಿದರು. ಅವರು ಅಳುತ್ತಿರುವಂತೆ ಕಾಣುತ್ತಿತ್ತು.

"ಯಾಸುಕೀ-ಚಾನ್ ತೀರಿಕೊಂಡಿದ್ದಾನೆ..." ಮೆಲ್ಲನೆ ಹೇಳಿದರು.

"ನಾವೆಲ್ಲ ಅವನ ಶವಸಂಸ್ಕಾರಕ್ಕೆ ಹೋಗೋಣ" ಮತ್ತೆ ಹೇಳಿದರು "ನಿಮಗೆಲ್ಲಾ ಯಾಸುಕೀ-ಚಾನ್‌ನೆಂದರೆ ತುಂಬಾ ಇಷ್ಟ ಎಂಬುದು ನನಗೆ ಗೊತ್ತು. ದುಃಖದ ಸಂಗತಿ." ಹಾಗೆ ಹೇಳುವಾಗ ಅವರ ಮುಖ ಕೆಂಪಗೆ ರಕ್ತಮಯವಾಗಿ ಕಣ್ಣೀರು ದಳವಳ ಹರಿಯಿತು. ಮಕ್ಕಳೆಲ್ಲ ದಿಗ್ಭ್ರಾಂತರಾಗಿ ನಿಂತಿದ್ದರು. ಯಾರೂ ಒಂದೂ ಮಾತನಾಡಲಿಲ್ಲ. ಅವರೆಲ್ಲಾ ಯಾಸುಕೀ-ಚಾನ್‌ನ ಬಗ್ಗೆ ಯೋಚಿಸುತ್ತಿದ್ದರು. ತೊಮೊಯೆದ ಮೈದಾನದಲ್ಲಿ ಇಂಥ ದುರಂತಮಯ ಮೌನ ಎಂದೂ ಸುಳಿದಿರಲಿಲ್ಲ.

"ಇಷ್ಟು ಬೇಗ ಸಾಯುವುದೆಂದರೆ" ತೊತ್ತೊ-ಚಾನ್ ಯೋಚಿಸಿದಳು. ಯಾಸುಕೀ-ಚಾನ್ ರಜೆ ಮುಗಿಯುವ ಮುನ್ನ ಓದಿಕೊಡೆಂದು ಹೇಳಿದ್ದ 'ಅಂಕಲ್ ಟಾಮ್ಸ್ ಕ್ಯಾಬಿನ್' ಅನ್ನು ಅವಳಿನ್ನೂ ಮುಗಿಸಿರಲೇ ಇಲ್ಲ.

ಬೇಸಿಗೆ ರಜೆಯ ಪ್ರಾರಂಭದ ಮುನ್ನ ಯಾಸುಕೀ-ಚಾನ್‌ನು ಅವಳಿಗೆ ಗುಡ್‌ಬೈ ಹೇಳಿ ಪುಸ್ತಕವನ್ನು ಕೊಟ್ಟಾಗ ಅವನ ಕೈ ಬೆರಳುಗಳು ಹೇಗೆ ಮಡಚಿಕೊಂಡಿದ್ದವು ಎಂಬುದು ಅವಳಿಗಿನ್ನೂ ಸ್ಪಷ್ಟವಾಗಿ ನೆನಪಿತ್ತು. ಅವಳು ಅವನನ್ನು ಮೊದಲ ಸಲ

ಸಂಧಿಸಿದ್ದನ್ನು ನೆನಪಿಸಿಕೊಂಡಳು. "ನೀನು ಹಾಗೇಕೆ ನಡೆಯುತ್ತೀಯಾ ?" ಎಂದು ಕೇಳಿದ್ದಕ್ಕೆ ಅವನು ಮೃದುವಾಗಿ "ನನಗೆ ಪೋಲಿಯೋ" ಎಂದು ಹೇಳಿದ್ದ. ಅವಳು ಅವನ ದನಿಯ ಸ್ವರವನ್ನು ಮತ್ತು ಅವನ ಸಣ್ಣ ಮುಗುಳ್ನಗೆಯನ್ನು ನೆನಪಿಸಿಕೊಂಡಳು. ಮತ್ತು ಅವರಿಬ್ಬರೇ ಕೈಗೊಂಡ ಆ ಬೇಸಿಗೆಯ ಮರ ಹತ್ತುವ ಸಾಹಸ. ಅವನ ದೇಹ ಎಷ್ಟೊಂದು ಭಾರವಾಗಿತ್ತು ಮತ್ತು ಅವನು ತನಗಿಂತ ದೊಡ್ಡವನಾದರೂ, ಎತ್ತರಕ್ಕಿದ್ದರೂ ತನ್ನನ್ನು ಹೇಗೆ ನಂಬಿಬಿಟ್ಟಿದ್ದ ಎಂಬುದನ್ನೆಲ್ಲಾ ಹಂಬಲದಿಂದ ನೆನಪಿಸಿಕೊಂಡಳು. ಅಮೆರಿಕಾದಲ್ಲಿ ಟೆಲಿವಿಷನ್ ಎನ್ನುವುದೊಂದಿರುವ ಬಗ್ಗೆ ಅವಳಿಗೆ ಹೇಳಿದವನೇ ಯಾಸುಕೀ-ಚಾನ್. ತೊತ್ತೊ-ಚಾನ್ ಅವನನ್ನು ತುಂಬಾ ಪ್ರೀತಿಸುತ್ತಿದ್ದಳು. ಅವರು ಒಟ್ಟಿಗೆ ಊಟ ಮಾಡುತ್ತಿದ್ದರು, ಬಿಡುವನ್ನು ಒಟ್ಟಿಗೆ ಕಳೆಯುತ್ತಿದ್ದರು, ಶಾಲೆ ಮುಗಿದ ನಂತರ ಸ್ಟೇಷನ್ನಿಗೆ ಒಟ್ಟಿಗೇ ಹೋಗುತ್ತಿದ್ದರು. ಅವನನ್ನು ಅವಳು ತುಂಬಾ ಹಚ್ಚಿಕೊಂಡಿದ್ದಳು. ಸಾಯುವುದೆಂದರೆ ಯಾಸುಕೀ-ಚಾನ್ ಮತ್ತೆಂದೂ ಶಾಲೆಗೆ ಬರಲಾರ ಎಂದರ್ಥ. ಆ ಕೋಳಿಪಿಳ್ಳೆಗಳ ರೀತಿ. ಸತ್ತು ಹೋಗಿಬಿಟ್ಟ ಮೇಲೆ ಅವಳೆಷ್ಟೇ ಕೂಗಿದರೂ ಅವು ಮಿಸುಕಾಡಿರಲಿಲ್ಲ.

ಯಾಸುಕೀ-ಚಾನ್‌ನ ಶವ ಸಂಸ್ಕಾರ ಅವನು ವಾಸವಿದ್ದ ಸ್ಥಳದ ಎದುರು ಚರ್ಚಿನಲ್ಲಿ ನಡೆಯಿತು.

ಮಕ್ಕಳು ಜಿಯುಗಾವೋಕದಿಂದ ಮೌನವಾಗಿ ಅಲ್ಲಿಗೆ ನಡೆದರು. ತೊತ್ತೊ-ಚಾನ್ ಮಾಮೂಲಿನಂತೆ ಅತ್ತಿತ್ತ ನೋಡದೆ ನೆಲದಲ್ಲೇ ಕಣ್ಣಿಟ್ಟು ನಡೆಯುತ್ತಿದ್ದಳು. ಮುಖ್ಯೋಪಾಧ್ಯಾಯರು ಕೆಟ್ಟ ಸುದ್ದಿಯನ್ನು ಹೇಳಿದಾಗ ಅನ್ನಿಸಿದ್ದಕ್ಕಿಂತ ಭಿನ್ನವಾಗಿ ಈಗ ಅನ್ನಿಸತೊಡಗಿತ್ತು. ಅವಳಿಗೆ ಮೊದಲು ನಂಬಲು ಸಾಧ್ಯವಾಗಿರಲಿಲ್ಲ. ನಂತರ ದುಃಖ ಒತ್ತರಿಸಿ ಬಂದಿತ್ತು. ಆದರೆ ಈಗ ಯಾಸುಕೀ-ಚಾನ್‌ನನ್ನು ಒಂದೇ ಒಂದು ಸಲ ಜೀವಂತವಾಗಿ ನೋಡಿಬಿಡಬೇಕೆಂಬ ತೀವ್ರ ಹಂಬಲ ಉಂಟಾಗಿತ್ತು. ಅವನ ಹತ್ತಿರ ಎಷ್ಟೊಂದು ಮಾತನಾಡುವುದಿತ್ತು. ಅವಳಿಗೆ ದುಃಖ ತಡೆಯಲಾಗಲಿಲ್ಲ.

ಚರ್ಚಿನಲ್ಲಿ ಎಲ್ಲೆಲ್ಲೂ ಸುಗಂಧರಾಜ ಹೂಗಳೇ. ಯಾಸುಕೀ-ಚಾನ್‌ನ ಸುಂದರ ತಾಯಿ, ಅಕ್ಕ ಮತ್ತು ಸಂಬಂಧಿಕರೆಲ್ಲಾ ಕಪ್ಪು ಬಟ್ಟೆಯಲ್ಲಿ ಹೊರಗಡೆ ನಿಂತಿದ್ದರು. ತೊತ್ತೊ-ಚಾನ್‌ಳನ್ನು ನೋಡಿದ್ದೇ ತಡ, ಜೋರಾಗಿ ಅಳತೊಡಗಿದರು, ಕೈಯಲ್ಲಿ ಬಿಳಿ ಕರವಸ್ತ್ರ ಹಿಡಿದು. ತೊತ್ತೊ-ಚಾನ್ ಶವ ಸಂಸ್ಕಾರಕ್ಕೆ ಹೋಗಿದ್ದು ಇದೇ ಮೊದಲು. ಅದೆಂತಹ ದುಃಖಕರ ಸನ್ನಿವೇಶ ಎನ್ನುವುದು ಅವಳಿಗೆ ಅರಿವಾಗತೊಡಗಿತ್ತು. ಯಾರೊಬ್ಬರೂ ಮಾತನಾಡಲಿಲ್ಲ. ನಿಧಾನವಾಗಿ ಶೋಕಗೀತೆಯನ್ನು ನುಡಿಸಲಾಗುತ್ತಿತ್ತು. ಸೂರ್ಯ ಬೆಳಗುತ್ತಿದ್ದ, ಚರ್ಚಿನಲ್ಲಿ ಎಲ್ಲ ಕಡೆ ದೀಪಗಳಿದ್ದುವು. ಆದರೆ ಸಂತೋಷವೆಂಬುದು ಮಾತ್ರ ಇರಲಿಲ್ಲ. ಕೈಗೆ ಕಪ್ಪನೆಯ ಪಟ್ಟಿ ಹಾಕಿಕೊಂಡಿದ್ದ ವ್ಯಕ್ತಿಯೊಬ್ಬರು ತೊಮೊಯೆದ ಪ್ರತಿಯೊಬ್ಬ ಮಗುವಿಗೂ ಒಂದೊಂದು ಬಿಳಿಯ ಹೂವನ್ನು ಕೊಟ್ಟರು. ಎಲ್ಲರೂ ಒಬ್ಬೊಬ್ಬರಾಗಿ ನಡೆದು ಯಾಸುಕೀ-ಚಾನ್‌ನ ಶವಪೆಟ್ಟಿಗೆಯ ಮೇಲೆ ಅವನ್ನು ಇಡಬೇಕೆಂದು ಹೇಳಿಕೊಟ್ಟರು.

ಯಾಸುಕೀ-ಚಾನ್‌ನು ಶವ ಪೆಟ್ಟಿಗೆಯಲ್ಲಿ ಹೂಗಳಿಂದಾವೃತಗೊಂಡು ನಿಶ್ಚಲವಾಗಿ ಮಲಗಿದ್ದ. ಅವನು ಸತ್ತು ಹೋಗಿದ್ದರೂ ಅವನ ಮುಖದಲ್ಲಿ ಯಾವತ್ತಿನ ಚುರುಕು ಮತ್ತು ಒಳ್ಳೆಯತನ ಹಾಗೆಯೇ ಕಾಣುತ್ತಿತ್ತು. ತೊತ್ತೊ-ಚಾನ್ ಮಂಡಿಯೂರಿ ಕುಳಿತು ಅವನ ಕೈಬಳಿ ಹೂವನ್ನು ಇಟ್ಟು ಮೃದುವಾಗಿ ಅವನ ಕೈ ಮುಟ್ಟಿದಳು. ಅವಳು ಎಷ್ಟೋ ಬಾರಿ ಹಿಡಿದುಕೊಂಡಿದ್ದ ಅವನ ಪ್ರೀತಿಯ ಕೈಗಳವು. ಅವನ ಕೈಗಳು ಅವಳ ಕೈಗಳಿಗಿಂತ ತುಂಬ ಬೆಳ್ಳಗಿದ್ದವು. ಅವನ ಬೆರಳುಗಳು ದೊಡ್ಡವರ ಬೆರಳುಗಳಂತೆ ಉದ್ದಕ್ಕಿದ್ದವು.

"ಈಗ ಹೋಗಿ ಬಾ" ಅವಳು ಯಾಸುಕೀ-ಚಾನ್‌ನಿಗೆ ಪಿಸುಗುಟ್ಟಿದಳು "ನಾವು ದೊಡ್ಡವರಾದ ಮೇಲೆ ಇನ್ನೆಲ್ಲಾದರೂ ಭೇಟಿಯಾಗಲೂ ಬಹುದು. ಆ ವೇಳೆಗೆ ನಿನ್ನ ಪೋಲಿಯೋ ಗುಣವಾಗಿರಲಿಕ್ಕೂ ಸಾಕು."

ತೊತ್ತೊ-ಚಾನ್ ಈಗ ಎದ್ದು ಮತ್ತೊಮ್ಮೆ ಯಾಸುಕೀ-ಚಾನ್‌ನನ್ನು ನೋಡಿದಳು. "ಮರೆತೇ ಹೋಗಿತ್ತು" ಅವಳೆಂದಳು "ಅಂಕಲ್ ಟಾಮ್ಸ್ ಕ್ಯಾಬಿನ್, ನಿನಗದನ್ನು ನಾನೀಗ ಕೊಡಲು ಸಾಧ್ಯವೇ ಇಲ್ಲ. ನಾವು ಮತ್ತೆ ಭೇಟಿಯಾಗುವವರೆಗೂ ಅದನ್ನು ನಿನಗಾಗಿ ಇಟ್ಟುಕೊಂಡಿರುತ್ತೇನೆ."

ಅವಳು ಅಲ್ಲಿಂದ ನಡೆದು ಹೋಗುವಾಗ, ತನ್ನ ಹಿಂದೆಯೇ ಅವನ ದನಿ ಕೇಳಿದಂತೆ ಅವಳಿಗೆ ಭಾಸವಾಯಿತು. ಹೌದು ಅವನೇ ಹೇಳುತ್ತಿದ್ದಾನೆ. "ತೊತ್ತೊ-ಚಾನ್ ನಾವಿಬ್ಬರೂ ಎಷ್ಟೊಂದು ತಮಾಷೆಯಾಗಿ ಕಾಲ ಕಳೆದಿದ್ದೇವೆ ಅಲ್ವಾ ? ನಾನು ನಿನ್ನನ್ನು ಮರೆಯೋದೇ ಇಲ್ಲ."

ತೊತ್ತೊ-ಚಾನ್ ಬಾಗಿಲನ್ನು ತಲುಪಿದಾಗ ಹಿಂದುರುಗಿ ಹೇಳಿದಳು "ನಾನೂ ನಿನ್ನನ್ನು ಯಾವತ್ತೂ ಮರೆಯೋದಿಲ್ಲ"

ಯಾಸುಕೀ-ಚಾನ್‌ನನ್ನು ಮೊದಲ ದಿನ ರೈಲುಗಾಡಿ ತರಗತಿಯಲ್ಲಿ ಭೇಟಿಯಾದಾಗ ಇದ್ದಂತಹ ಸೂರ್ಯನೇ ಇಂದೂ ಬೆಳಗುತ್ತಿದ್ದ. ಆದರೆ ಇಂದು ತೊತ್ತೊ-ಚಾನ್‌ಳ ಕೆನ್ನೆ ಕಣ್ಣೀರಿನಿಂದ ತೊಯ್ದಿತ್ತು.

## ಗೂಢಚಾರಿ

ತೊಮೊಯೆದ ಮಕ್ಕಳು ಬಹಳ ದಿನಗಳವರೆಗೂ ಯಾಸುಕೀ-ಚಾನ್‌ನನ್ನು ನೆನೆದು ತುಂಬಾ ದುಃಖಿಸುತ್ತಿದ್ದರು. ವಿಶೇಷವಾಗಿ ಬೆಳಗಿನ ಸಮಯ ಪಾಠ ಪ್ರಾರಂಭವಾಗುವ ಮುನ್ನ ಅವನ ನೆನಪು ಉಮ್ಮಳಿಸಿ ಬರುತ್ತಿತ್ತು. ಯಾಸುಕೀ-ಚಾನ್ ತಡವಾಗಿಯಲ್ಲ, ಇನ್ನು ಯಾವತ್ತೂ ಬರುವುದೇ ಇಲ್ಲವೆಂಬ ಸತ್ಯಕ್ಕೆ ಒಗ್ಗಿಕೊಳ್ಳಲು ಅವರಿಗೆ ಬಹಳ ಸಮಯ ಹಿಡಿಯಿತು. ಚಿಕ್ಕ ತರಗತಿಗಳಿರುವುದು ಚೆನ್ನ, ಆದರೆ ಇಂತಹ ಸಮಯಗಳಲ್ಲಿ ಮಾತ್ರ ತುಂಬಾ ಕಷ್ಟ. ಯಾಸುಕೀ-ಚಾನ್‌ನ ಗೈರುಹಾಜರಿ ಎದ್ದು ಕಾಣುತ್ತಿತ್ತು. ಜಾಗಗಳನ್ನು ಗೊತ್ತುಪಡಿಸದೇ ಇದ್ದುದು ಒಳ್ಳೆಯದೇ. ಅವನದ್ದೇ ಗೊತ್ತಾದ ಒಂದು ಸ್ಥಳವಿದ್ದಿದ್ದರೆ ಅವನಿಲ್ಲದೆ ಅದು ಖಾಲಿಯಾಗಿ

ಕಾಣುವುದನ್ನು ನೋಡಲು ಸಂಕಟವಾಗುತ್ತಿತ್ತು.

ಇತ್ತೀಚೆಗೆ ತೊತ್ತೊ-ಚಾನ್ ತಾನು ದೊಡ್ಡವಳಾದ ಮೇಲೆ ಏನಾಗಬೇಕೆಂದು ಯೋಚಿಸಲು ಪ್ರಾರಂಭಿಸಿದ್ದಳು. ಸಣ್ಣವಳಿದ್ದಾಗ ಬೀದಿ ಸಂಗೀತಗಾರಳಾಗಲು ಬಯಸಿದ್ದಳು. ತೊಮೊಯೆಗೆ ಮೊದಲ ದಿನ ಬಂದಾಗ ಸ್ಟೇಷನ್ನಿನಲ್ಲಿ ಟಿಕೇಟ್ ಕಲೆಕ್ಟರನನ್ನು ಕಂಡ ಮೇಲೆ ತಾನೂ ಟಿಕೇಟು ಮಾರುವುದಾಗಿಯೇ ತೀರ್ಮಾನಿಸಿದ್ದಳು. ಆದರೆ ಈಗ ಕೊಂಚ ಅಸಾಧಾರಣವಾದ ಆದರೆ ಹೆಂಗಸಿಗೆ ಹೊಂದುವಂತಹ ಏನಾದರೂ ಮಾಡಬೇಕೆಂದು ಯೋಚಿಸುತ್ತಿದ್ದಳು. ನರ್ಸ್ ಆದರೆ ಚೆನ್ನಾಗಿರುತ್ತೆಂದು ಯೋಚಿಸುವಳು. ಆದರೆ ಗಾಯಾಳುಗಳನ್ನು ನೋಡಲು ಆಸ್ಪತ್ರೆಗೆ ಹೋಗಿದ್ದಾಗ ನರ್ಸುಗಳು ಚುಚ್ಚುಮದ್ದು ಕೊಡುವುದೇ ಮುಂತಾದ ಕೆಲಸಗಳನ್ನು ಮಾಡುವುದನ್ನು ನೋಡಿದ್ದಳು. ಅದು ತುಂಬಾ ಕಷ್ಟ ಎನಿಸಿತ್ತು. ಹಾಗಾದರೆ ಏನು ಮಾಡುವುದು ? ಇದ್ದಕ್ಕಿದ್ದಂತೆ ಆನಂದದಿಂದ ಬೀಗಿದಳು.

"ಯಾಕೆ ? ನಾನು ಏನಾಗಬೇಕೆಂದು ಆಗಲೇ ತೀರ್ಮಾನಿಸಿಯಾಗಿದೆಯಲ್ಲ."

ಆಗಷ್ಟೇ ಮದ್ಯಸಾರ ದೀಪವನ್ನು ಹಚ್ಚಿದ್ದ ತಾಯಿ-ಚಾನ್‌ನ ಬಳಿಗೆ ಹೋದಳು.

"ನಾನು ಗೂಢಚಾರಿಯಾಗೋಣವೆಂದು ಯೋಚಿಸುತ್ತಿದ್ದೇನೆ" ಹೆಮ್ಮೆಯಿಂದ ಹೇಳಿದಳು.

ತಾಯಿ-ಚಾನ್‌ನು ದೀಪದಿಂದ ಮುಖ ತಿರುಗಿಸಿ ತೊತ್ತೊ-ಚಾನ್‌ಳ ಮುಖವನ್ನು ಸ್ವಲ್ಪ ಹೊತ್ತು ನೋಡಿದನು. ಮತ್ತೆ ಕಿಟಕಿಯ ಹೊರಗೆ ಏನೋ ಯೋಚಿಸುವವನಂತೆ ನೋಡುತ್ತಿದ್ದನು. ನಂತರ ತೊತ್ತೊ-ಚಾನ್‌ಳ ಕಡೆಗೆ ತಿರುಗಿ ಗಂಭೀರವಾದ ದನಿಯಲ್ಲಿ ನಿಧಾನಕ್ಕೆ ಅವಳಿಗೆ ಅರ್ಥವಾಗುವಂತೆ ಹೇಳಿದನು.

"ಗೂಢಚಾರಿಯಾಗಲು ಚುರುಕಾಗಿರಬೇಕು. ಅದರ ಜತೆಗೇ ತುಂಬಾ ಭಾಷೆಗಳು ಬರುತ್ತಿರಬೇಕು."

ತಾಯಿ-ಚಾನ್‌ನು ಸ್ವಲ್ಪ ಹೊತ್ತು ನಿಲ್ಲಿಸಿ ಉಸಿರೆಳೆದುಕೊಂಡನು. ಮತ್ತೆ ನೇರವಾಗಿ ಅವಳ ಕಣ್ಣಲ್ಲಿ ನೋಡುತ್ತಾ ನಿರ್ದಾಕ್ಷಿಣ್ಯವಾಗಿ ಹೇಳಿದನು, "ಮೊಟ್ಟ ಮೊದಲನೆಯದಾಗಿ ಗೂಢಚಾರಿ ಹೆಂಗಸು ನೋಡಲು ಸುಂದರವಾಗಿರಬೇಕು."

ತೊತ್ತೊ-ಚಾನ್ ನಿಧಾನಕ್ಕೆ ಅವನ ಕಣ್ಣಿಂದ ತನ್ನ ಕಣ್ಣು ತಪ್ಪಿಸಿ ತಲೆತಗ್ಗಿಸಿದಳು.

ಈ ಬಾರಿ ತಾಯಿ-ಚಾನ್ ಅವಳತ್ತ ನೋಡದೆಯೇ ನಿಧಾನಕ್ಕೆ ಯೋಚಿಸಿ ಹೇಳಿದನು "ಅದೂ ಅಲ್ಲದೆ ಮಾತಿನಮಲ್ಲಿ ಗೂಢಚಾರಿಯಾಗಲು ಸಾಧ್ಯವಿಲ್ಲ."

ತೊತ್ತೊ-ಚಾನ್ ಮೂಕಳಾದಳು. ಅವನು ತಾನು ಗೂಢಚಾರಿಯಾಗುವ ವಿರುದ್ಧ ಮಾತನಾಡುತ್ತಿದ್ದಾನೆಂಥಲ್ಲ. ಅಷ್ಟಕ್ಕೂ ತಾಯಿ-ಚಾನ್‌ನು ಹೇಳಿದ ವಿಚಾರಗಳೆಲ್ಲ ಸತ್ಯವೇ ಆಗಿತ್ತು. ಗೂಢಚಾರಿಯಾಗಲು ಅವಶ್ಯವಿರುವ ಯಾವ ಗುಣವೂ ತನ್ನಲ್ಲಿಲ್ಲ ಎಂದು ಕಂಡುಕೊಂಡಳು. ಥೈ-ಚಾನ್‌ನು ಜಿದ್ದಿನಿಂದೇನೂ ಹಾಗೆ ಹೇಳಿರಲಿಲ್ಲ ಎನ್ನುವುದು ಅವಳಿಗೆ ಗೊತ್ತಿತ್ತು. ಸುಮ್ಮನೆ ಆಲೋಚನೆಯನ್ನೇ ಬಿಟ್ಟುಬಿಡುವೆನೆಂದುಕೊಂಡಳು. ಅವನೊಡದೆ ಮಾತನಾಡಿದಷ್ಟೇ ಸುಲಭವಾಗಿ ಅದನ್ನು ಮಾಡಬಲ್ಲವಳಾಗಿದ್ದಳು.



"ಅಬ್ಬಾ!" ಅವಳು ಅಂದುಕೊಂಡಳು "ತಾಯಿ-ಚಾನ್‌ನು ತನ್ನ ವಯಸ್ಸಿನವನಾದರೂ ಅವನಿಗೆ ಎಷ್ಟೊಂದು ವಿಚಾರಗಳು ಗೊತ್ತು."

ತಾಯಿ-ಚಾನ್‌ನು ತಾನು ಭೌತಶಾಸ್ತ್ರಜ್ಞನಾಗಬೇಕೆಂದು ಹೇಳಿದರೆ ನಾನೇನು ಹೇಳುತ್ತಿದ್ದೆ ?

"ಹೌದು, ನಿನಗೆ 'ನರಿ'ಗೆ ಇಂಗ್ಲಿಷ್‌ನಲ್ಲಿ 'ಫಾಕ್ಸ್' ಎನ್ನುತ್ತಾರೆಂದು ಗೊತ್ತು. ಬೂಟ್‌ಗೆ 'ಷೂಸ್' ಎನ್ನುತ್ತಾರೆಂದು ಗೊತ್ತು. ಹಾಗಾಗಿ ನೀನು ಭೌತಶಾಸ್ತ್ರಜ್ಞನಾಗಲು ಅಡ್ಡಿಯಿಲ್ಲ" ಎನ್ನಬಹುದಾಗಿತ್ತೇ ? ಇಲ್ಲ. ಅದೂ ಸರಿಯಾಗುತ್ತಿರಲಿಲ್ಲ.

ಅದೇನೇಯಾದರೂ ತಾಯಿ-ಚಾನ್‌ನು ದೊಡ್ಡದೇನೋ ಮಾಡೇ ತೀರುತ್ತಾನೆನ್ನುವುದರಲ್ಲಿ ಅವಳಿಗೆ ಅನುಮಾನವೇ ಇರಲಿಲ್ಲ. ಹಾಗಾಗಿ ಗಾಜಿನ ಪಾತ್ರೆಯಲ್ಲಿ ಏಳುತ್ತಿದ್ದ ಗುಳ್ಳೆಗಳನ್ನು ನೋಡುತ್ತಾ ನಿಂತ ಅವನಿಗೆ ಮುದ್ದಾಗಿ ಹೇಳಿದಳು, "ಥ್ಯಾಂಕ್ಸ್, ನಾನು ಗೂಢಚಾರಿಯಾಗಲಾರೆ. ಆದರೆ ನೀನು ಮಾತ್ರ

ದೊಡ್ಡ ಮನುಷ್ಯನಾಗಿಯೇ ತೀರುವೆ.''

ತಾಯಿ-ಚಾನ್‌ನು ಏನೋ ಗೊಣಗುಟ್ಟುತ್ತಾ ತಲೆ ಕರೆದುಕೊಂಡು ತನ್ನ ಮುಂದೆ ತೆರೆದಿಟ್ಟಿದ್ದ ಪುಸ್ತಕದಲ್ಲಿ ಹುದುಗಿಹೋದನು.

ತಾನು ಗೂಢಚಾರಿಯಾಗುವುದಿಲ್ಲವಾದರೆ ಮತ್ತೇನಾಗುತ್ತೇನೆ ಎಂದು ತೊತ್ತೊ-ಚಾನ್ ಚಿಂತಿಸತೊಡಗಿದಳು, ತಾಯಿ-ಚಾನ್‌ನ ಪಕ್ಕ ನಿಂತು ಉರಿಯುವ ದೀಪಜ್ವಾಲೆಯನ್ನೇ ನೋಡುತ್ತಾ.

## ಅಪ್ಪನ ವಯೋಲಿನ್

ಅವರಿಗೆ ತಿಳಿಯುವ ಮುನ್ನವೇ ಯುದ್ಧವು ತನ್ನೆಲ್ಲಾ ಭಯಾನಕತೆಗಳೊಂದಿಗೆ ತೊತ್ತೊ-ಚಾನ್ ಮತ್ತು ಅವಳ ಕುಟುಂಬವನ್ನು ಆವರಿಸತೊಡಗಿತ್ತು. ಪ್ರತಿದಿನವೂ ಅಕ್ಕಪಕ್ಕದ ಗಂಡುಮಕ್ಕಳನ್ನು ಹಾರಾಡುವ ಬಾವುಟದೊಂದಿಗೆ 'ಬೆನ್‌ಜಾಯ್' ಹೇಳುತ್ತಾ ಕಳಿಸಿಕೊಡಲಾಗುತ್ತಿತ್ತು. ಅಂಗಡಿಗಳಿಂದ ಒಂದೊಂದಾಗಿ ಆಹಾರ ಪದಾರ್ಥಗಳು ಕಣ್ಮರೆಯಾಗತೊಡಗಿದವು. ತೊಮೊಯದ ಮಧ್ಯಾಹ್ನದ ಊಟದ "ನೆಲದ್ದು-ಜಲದ್ದು" ಈಗ ದೂರದ ಮಾತಾಗಿತ್ತು. ಅಮ್ಮ ಈಗ ಸಮುದ್ರದ ಬೆಳೆ ಮತ್ತು ಪ್ಲಮ್‌ಗಳಿಂದ ಏನೋ ಅಡುಗೆ ಮಾಡುತ್ತಿದ್ದಳು. ಇನ್ನು ಮುಂದೆ ಅದೂ ಸಿಗುವ ಸಾಧ್ಯತೆ ಇರಲಿಲ್ಲ. ಎಲ್ಲದಕ್ಕೂ ಬರಗಾಲ ಬಂದಿತ್ತು. ಸಿಹಿ ಪದಾರ್ಥಗಳಂತೂ ಹೆಸರು ಹೇಳಲೂ ಸಿಗುತ್ತಿರಲಿಲ್ಲ.

ತೊತ್ತೊ-ಚಾನ್ ಇಳಿಯುತ್ತಿದ್ದ ನಿಲ್ದಾಣಕ್ಕೆ ಹಿಂದಿನ ನಿಲ್ದಾಣವಾದ ಓಕಾಯಾಮದಲ್ಲಿ ನಾಣ್ಯಹಾಕಿ ಸಕ್ಕರೆ ಮಿಠಾಯಿ ಪಡೆಯಬಹುದಾದ ಒಂದು ಯಂತ್ರ ಇತ್ತು. ಆ ಯಂತ್ರದ ಮೇಲೆ ಮನಸೆಳೆಯುವ ಚಿತ್ರವೊಂದಿತ್ತು. ಐದು ಸೆನ್ ಹಾಕಿದರೆ ಮಿಠಾಯಿಯ ಸಣ್ಣ ಪ್ಯಾಕೆಟ್ಟು, ಹತ್ತು ಸೆನ್ ಹಾಕಿದರೆ ದೊಡ್ಡ ಪ್ಯಾಕೆಟ್ಟು ಬರುತ್ತಿತ್ತು. ಆದರೀಗ ಅನೇಕ ದಿನಗಳಿಂದ ಯಂತ್ರವು ಬರಿದಾಗಿತ್ತು. ಅದಕ್ಕೆ ಎಷ್ಟೇ ಹಣ ಹಾಕಿದರೂ ಸರಿ, ಎಷ್ಟೇ ಜೋರಾಗಿ ತಟ್ಟಿದರೂ ಸರಿ ಒಂದು ಚೂರು ಮಿಠಾಯಿಯೂ ಬರುತ್ತಿರಲಿಲ್ಲ. ತೊತ್ತೊ-ಚಾನ್ ಮಾತ್ರ ತನ್ನ ಪ್ರಯತ್ನವನ್ನು ಮುಂದುವರಿಸಿದಳು.

"ಎಲ್ಲೋ ಒಳಗೆ ಇನ್ನೂ ಒಂದು ಪ್ಯಾಕೆಟ್ಟಿರಬೇಕು" ಯೋಚಿಸುವಳು.

"ಒಳಗೆ ಸಿಕ್ಕಿ ಹಾಕಿಕೊಂಡಿರಬೇಕು."

ಹೀಗಾಗಿ ಅವಳು ಪ್ರತಿದಿನವೂ ತನ್ನ ನಿಲ್ದಾಣದ ಹಿಂದಿನ ನಿಲ್ದಾಣದಲ್ಲಿ ಇಳಿದು ಯಂತ್ರದೊಳಕ್ಕೆ ಐದು ಹತ್ತು ಸೆನ್ ನಾಣ್ಯಗಳನ್ನು ಹಾಕಿ ಪ್ರಯತ್ನಿಸುವಳು. ಆದರೆ ಸಿಕ್ಕುತ್ತಿದ್ದುದು ಮಾತ್ರ ವಾಪಸ್ಸಾಗುತ್ತಿದ್ದ ಅವಳ ಹಣವೇ. ಅದು ಝಣಝಣ ಎನಿಸುತ್ತಾ ಉರುಳಿ ಬೀಳುತ್ತಿತ್ತು.

ಹೀಗಿರುವಾಗಲೇ ಅಪ್ಪನಿಗೆ ಯಾರೋ ಒಂದು ಒಳ್ಳೆಯ ಸುದ್ದಿ ಹೇಳಿದರು. ಯುದ್ಧಕ್ಕೆ ಬೇಕಾಗುವ ಆಯುಧ ಮತ್ತು ಇತರ ವಸ್ತುಗಳನ್ನು ತಯಾರಿಸುವ

ಮುನಿಷನ್ಸ್ ಎನ್ನುವ ಕಾರ್ಖಾನೆಯ ಮುಂದೆ ಹೋಗಿ ವಯೋಲಿನ್ ನುಡಿಸಿದರೆ ಅಕ್ಕಿ, ಸಕ್ಕರೆ ಮತ್ತಿತರ ಆಹಾರ ವಸ್ತುಗಳನ್ನು ಕೊಡಲಾಗುತ್ತದೆಂದು ತಿಳಿಯಿತು. ಹೀಗಾಗಿ, ಇತ್ತೀಚೆಗಷ್ಟೇ ಪ್ರತಿಷ್ಠಿತ ಪ್ರಶಸ್ತಿಯನ್ನು ಪಡೆದಿದ್ದ ಅಪ್ಪನಿಗೆ, ವಯೋಲಿನ್ ವಾದಕನಾಗಿ ದೊಡ್ಡ ಹೆಸರನ್ನು ಗಳಿಸಿದ್ದ ಅಪ್ಪನಿಗೆ ಖಂಡಿತವಾಗಿಯೂ ಅನೇಕ ಹೆಚ್ಚುವರಿ ಕೊಡುಗೆಗಳು ಸಿಗುತ್ತವೆಂದು ಸ್ನೇಹಿತರು ಹೇಳಿದರು.

"ಏನು ಮಾಡುತ್ತೀರಿ ?" ತಾಯಿ ಅಪ್ಪನನ್ನು ಕೇಳಿದಳು" ಹೋಗಿ ವಯೋಲಿನ್ ನುಡಿಸುವಿರೇನು ?"

ಸಂಗೀತ ಕಛೇರಿಗಳು ತುಂಬಾ ಅಪರೂಪವಾಗುತ್ತಿದ್ದವು. ಹೆಚ್ಚುಹೆಚ್ಚು ಜನರು ಸೈನ್ಯಕ್ಕೆ ಹೋದಂತೆಲ್ಲಾ ಆರ್ಕೆಸ್ಟ್ರಾಗಳಿಗೆ ಸೇರುವ ಸಂಗೀತಗಾರರು ಕಡಿಮೆಯಾಗುತ್ತಾ ಹೋದರು. ರೇಡಿಯೋಗಳಲ್ಲಿ ಎಲ್ಲ ಕಾರ್ಯಕ್ರಮಗಳನ್ನೂ ಯುದ್ಧಕ್ಕೆ ಸಂಬಂಧಿಸಿದ ಕಾರ್ಯಕ್ರಮಗಳಿಗೇ ಕೊಟ್ಟುಬಿಟ್ಟಿದ್ದರಿಂದ ಅಪ್ಪ ಮತ್ತು ಅವರ ಜತೆಯವರಿಗೆ ಕೆಲಸವೇ ಇರುತ್ತಿರಲಿಲ್ಲ. ಅವರು ಏನಾದರೂ ಅವಕಾಶಕ್ಕಾಗಿ ಕಾಯುತ್ತಾ ಕೂರುತ್ತಿದ್ದರು.

ಅಪ್ಪ ಸ್ವಲ್ಪ ಯೋಚಿಸಿ ಅಮ್ಮನಿಗೆ ಉತ್ತರಿಸಿದರು. "ನನ್ನ ವಯೋಲಿನ್‌ನಿಂದ ಅಂತಹ ಸಂಗೀತ ನುಡಿಸಲು ನನಗೆ ಇಷ್ಟವಿಲ್ಲ."

"ನೀವು ಹೇಳುವುದು ಸರಿ" ಅಮ್ಮನೆಂದಳು "ನನಗೂ ಇಷ್ಟವಿಲ್ಲ. ನಾವು ಹೇಗಾದರೂ ಊಟಕ್ಕೆ ವ್ಯವಸ್ಥೆ ಮಾಡಿಕೊಳ್ಳೋಣ."

ತೊತ್ತೊ-ಚಾನ್‌ಗೆ ಹೊಟ್ಟೆ ತುಂಬಿತೋ ಇಲ್ಲವೋ ಅನ್ನುವಷ್ಟೇ ಊಟ ಸಿಗುತ್ತಿರುವುದು ಮತ್ತು ಅವಳು ದಿನಾಲೂ ಮಿಠಾಯಿ ಯಂತ್ರಕ್ಕೆ ವ್ಯರ್ಥವಾಗಿ ಹಣ ಹಾಕುತ್ತಿರುವುದು ಅಪ್ಪನಿಗೆ ಗೊತ್ತಿತ್ತು. ಯುದ್ಧದ ರಾಗಗಳನ್ನು ನುಡಿಸುವುದರಿಂದ ದೊರೆಯುವ ಆಹಾರದ ಕೊಡುಗೆಗಳು ತನ್ನ ಕುಟುಂಬಕ್ಕೆ ತುಂಬಾ ಪ್ರಶಸ್ತವಾದವು ಎಂಬುದೂ ಅಪ್ಪನಿಗೆ ಗೊತ್ತಿತ್ತು. ಆದರೆ ಅಪ್ಪ ತನ್ನ ಸಂಗೀತಕ್ಕೆ ಇನ್ನೂ ಹೆಚ್ಚಿನ ಬೆಲೆ ಕೊಡುತ್ತಿದ್ದರು. ಅಮ್ಮನಿಗೆ ಅದು ಗೊತ್ತಿದ್ದರಿಂದಲೇ ಆಕೆ ಆತನನ್ನು ಬಲವಂತಪಡಿಸಲಿಲ್ಲ. "ಕ್ಷಮಿಸಿಬಿಡು ತೊತ್ಸ್ಕಿ" ಅಪ್ಪ ದುಃಖದಿಂದ ಹೇಳಿದರು.

ತೊತ್ತೊ-ಚಾನ್ ಸಂಗೀತ ಕಲೆ, ಸಿದ್ಧಾಂತ ಮತ್ತು ಕೆಲಸ ಇಂಥದನ್ನೆಲ್ಲಾ ಅರ್ಥಮಾಡಿಕೊಳ್ಳುವಷ್ಟು ದೊಡ್ಡವಳಾಗಿರಲಿಲ್ಲ. ಆದರೆ ಅಪ್ಪ ವಯೋಲಿನ್ ಅನ್ನು ತುಂಬಾ ಪ್ರೀತಿಸುತ್ತಿದ್ದುದು ಅವಳಿಗೆ ಗೊತ್ತಿತ್ತು. ಆತನ ಕುಟುಂಬದವರು ಮತ್ತು ಸಂಬಂಧಿಕರು ಆತ ವಯೋಲಿನ್ ನುಡಿಸಲು ನಿರಾಕರಿಸಿದ ಮೇಲೆ ಮಾತು ಬಿಟ್ಟಿದ್ದರು. ಕಷ್ಟದ ದಿನಗಳು. ಆದರೆ ಅಪ್ಪ ವಯೋಲೀನ್ ಬಿಟ್ಟುಬಿಡಲು ಮಾತ್ರ ಸಿದ್ಧರಿರಲಿಲ್ಲ. ಆದ್ದರಿಂದ ತನಗಿಷ್ಟವಿಲ್ಲದ ಯುದ್ಧ ಸಂಗೀತವನ್ನು ನುಡಿಸದೇ ಇರುವುದೇ ಸರಿ ಎಂದು ತೊತ್ತೊ-ಚಾನ್ ಯೋಚಿಸಿದಳು. ತೊತ್ತೊ-ಚಾನ್ ಅಪ್ಪನಿಗೆ ಮುಗಿಬಿದ್ದು ನಗುನಗುತ್ತ ಹೇಳಿದಳು, "ಏನೂ ಪರವಾಗಿಲ್ಲ, ನಿನ್ನ ವಯೋಲಿನ್ ಅಂದ್ರೆ ನನಗೂ ಇಷ್ಟ."

ಆದರೆ ಮರುದಿನವೂ ಕೂಡ ತೊತ್ತೊ-ಚಾನ್ ಓಕಾಯಾಮಾ ನಿಲ್ದಾಣದಲ್ಲೇ ಇಳಿದು ಮಿಠಾಯಿ ಯಂತ್ರಕ್ಕೆ ಹಣ ಹಾಕಿ ನೋಡಿದಳು. ಅದರಿಂದ ಏನಾದರೂ ಬರುವ ಯಾವ ಭರವಸೆಯೂ ಇರಲಿಲ್ಲ. ಆದರೆ ಅವಳು ಮಾತ್ರ ಭರವಸೆಯನ್ನು ಹೊತ್ತೇ ನಡೆದಳು.

## ವಾಗ್ದಾನ

ಊಟದ ನಂತರ ವರ್ತುಲಾಕಾರಕ್ಕೆ ಜೋಡಿಸಿದ್ದ ಡೆಸ್ಕುಗಳನ್ನು ಮತ್ತೆ ತೆಗೆದಿರಿಸಿದಾಗ ಸಭಾಂಗಣ ವಿಶಾಲವಾಗಿ ಕಾಣುತ್ತಿತ್ತು.

"ಇವತ್ತು ನಾನೇ ಮೊದಲು ಮುಖ್ಯೋಪಾಧ್ಯಾಯರ ಬೆನ್ನ ಮೇಲೆ ಹತ್ತುತ್ತೇನೆ" ತೊತ್ತೊ-ಚಾನ್ ನಿರ್ಧರಿಸಿದಳು.

ಅವಳು ಯಾವಾಗಲೂ ಮಾಡಬಯಸುತ್ತಿದ್ದುದು ಇದನ್ನೇ. ಆದರೆ ಅವಳೇನಾದರೂ ಒಂದು ಕ್ಷಣ ಹಿಂಜರಿದರೆ ಇನ್ಯಾರಾದರೂ ಆಗಲೇ ಚಕ್ಕಳು-ಬಕ್ಕಳು ಹಾಕಿ ಕುಳಿತ ಮುಖ್ಯೋಪಾಧ್ಯಾಯರ ತೊಡೆಯ ಮೇಲಿರುತ್ತಿದ್ದರು ಮತ್ತು ಕೊನೇ ಪಕ್ಷ, ಇನ್ನಿಬ್ಬರಾದರೂ ಅವರ ಗಮನ ಸೆಳೆಯಲು ಪ್ರಯತ್ನಿಸುತ್ತಾ ಬೆನ್ನಿಗೆ ಜೋತು ಬೀಳುತ್ತಿದ್ದರು.

"ಹೇ ನಿಲ್ಲಿಸು, ಸುಮ್ಮನಿರು" ಎಂದು ಮುಖ್ಯೋಪಾಧ್ಯಾಯರು ನಯವಾಗಿಯೇ ಗದರುತ್ತಿದ್ದರು. ಒಮ್ಮೆ ಅವರನ್ನು ಆಕ್ರಮಿಸಿಕೊಂಡ ಮಕ್ಕಳು ಬಿಡಲು ತಯಾರಿರುತ್ತಿರಲಿಲ್ಲ. ಹೀಗಾಗಿ ಸ್ವಲ್ಪ ತಡವಾಗಿ ಹೋದರೆ ಅವರ ಬೆನ್ನ ತುಂಬಾ ಗುಂಪೇ ಸೇರಿರುತ್ತಿತ್ತು. ಆದರೆ ಈ ಬಾರಿ ತೊತ್ತೊ-ಚಾನ್ ತಾನೇ ಮೊದಲಿಗಳಾಗಲು ನಿರ್ಧರಿಸಿ ಮುಖ್ಯೋಪಾಧ್ಯಾಯರಿಗೆ ಕಾಯುತ್ತಾ ಸಭಾಂಗಣದಲ್ಲಿದ್ದಳು. ಅವರು ಬರುತ್ತಿದ್ದಂತೆಯೇ ಕೂಗಿ ಹೇಳಿದಳು "ಸರ್, ನಾನು ನಿಮಗೆ ಏನೋ ಹೇಳಬೇಕು."

"ಏನು ಹೇಳಬೇಕು?" ಕಾಲು ಮಡಿಚಿ ಕುಳಿತುಕೊಳ್ಳುತ್ತಾ ಮುಖ್ಯೋಪಾಧ್ಯಾಯರು ಪ್ರಸನ್ನರಾಗಿ ಕೇಳಿದರು.

ಅನೇಕ ದಿನಗಳಿಂದ ಯೋಚಿಸಿ ನಿರ್ಧರಿಸಿಕೊಂಡಿದ್ದನ್ನು ತೊತ್ತೊ-ಚಾನ್ ಅವರಿಗೆ ಹೇಳಲಿಕ್ಕಿತ್ತು. ಅವರ ಬೆನ್ನ ಮೇಲೆ ಹತ್ತುವುದು ಬೇಡ ಎಂದು ಇದ್ದಕ್ಕಿದ್ದಂತೆ ನಿರ್ಧರಿಸಿದಳು. ತಾನು ಹೇಳಬೇಕೆಂದುಕೊಂಡಿರುವುದನ್ನು ಎದುರಿನಿಂದ ಮುಖಕ್ಕೆ ಮುಖ ಕೊಟ್ಟು ಹೇಳುವುದು ಹೆಚ್ಚು ಸೂಕ್ತ ಎಂದುಕೊಂಡಳು. ಹೀಗಾಗಿ ಅವಳು ಅವರ ಹತ್ತಿರವೇ ಮುಖಾಮುಖಿಯಾಗಿ ಕುಳಿತು ತಲೆಯನ್ನು ಕೊಂಚ ಕೊಂಕಿಸಿ ಚಿಕ್ಕಂದಿನಿಂದಲೂ ಅಮ್ಮ 'ಚೆನ್ನಾಗಿ ಕಾಣುತ್ತೀ' ಎಂದು ಹೇಳುತ್ತಿದ್ದ ನಗುವನ್ನು ಮುಖದ ಮೇಲೆ ತಂದುಕೊಂಡಳು. ಆದವಳ 'ರವಿವಾರದ ಮುಖ'ವಾಗಿತ್ತು. ಬಾಯನ್ನು ಕೊಂಚವೇ ತೆರೆದು ನಗುವಾಗ ಅವಳಿಗೆ ತನ್ನ ಮೇಲೆ ವಿಶ್ವಾಸ ಮೂಡುತ್ತಿತ್ತು. ತಾನು ಒಳ್ಳೆಯ ಹುಡುಗಿ ಎನ್ನುವುದು ತನ್ನೊಳಗೇ ಖಚಿತವಾಗುತ್ತಿತ್ತು.

ಮುಖ್ಯೋಪಾಧ್ಯಾಯರು ಅವಳತ್ತ ನಿರೀಕ್ಷೆಯಿಂದ ನೋಡಿದರು. ಮುಂದಕ್ಕೆ ಬಾಗಿ "ಏನು ಹೇಳಬೇಕು"? ಎಂದು ಪುನಃ ಕೇಳಿದರು.

ತೊತ್ತೊ-ಚಾನ್ ನಿಧಾನಕ್ಕೆ ದೊಡ್ಡಕ್ಕನ ರೀತಿಯಲ್ಲಿ ಅಥವಾ ಅಮ್ಮನ ರೀತಿಯಲ್ಲಿ ಮುದ್ದಾಗಿ ಹೇಳಿದಳು "ನಾನು ದೊಡ್ಡೋಳಾದ ಮೇಲೆ ಈ ಶಾಲೆಯಲ್ಲಿ ಕಲಿಸ್ತೇನೆ. ನಿಜವಾಗಿಯೂ."

ಮುಖ್ಯೋಪಾಧ್ಯಾಯರು ಇದನ್ನು ಕೇಳಿ ಮುಗುಳ್ನಗುವರೆಂದುಕೊಂಡಿದ್ದಳು. ಆದರೆ ಅವರು ಗಂಭೀರವಾಗಿ ಕೇಳಿದರು "ಖಂಡಿತವಾಗಿಯೂ?"

ತೊತ್ತೊ-ಚಾನ್ ನಿರ್ಧಾರದ ಸ್ವರದಲ್ಲಿ ತಲೆಯಾಡಿಸುತ್ತಾ ಹೇಳಿದಳು "ಖಂಡಿತವಾಗಿ." ಅಲ್ಲಿ ಅಧ್ಯಾಪಕಿಯಾಗುವ ದೃಢ ನಿಶ್ಚಯ ಅವಳಲ್ಲಿ ಬೇರೂರಿತ್ತು.

ಆ ಕ್ಷಣದಲ್ಲಿ ಅವಳು ತಾನು ಮೊದಲ ಬಾರಿ ಒಂದನೇ ತರಗತಿಯವಳಾಗಿ ತೊಮೊಯೆಗೆ ಬಂದು ಮುಖ್ಯೋಪಾಧ್ಯಾಯರನ್ನು ಅವರ ಆಫೀಸಿನಲ್ಲಿ ಸಂಧಿಸಿದ ಮುಂಜಾವನ್ನು ಕುರಿತು ಯೋಚಿಸುತ್ತಿದ್ದಳು. ಅದಾಗಿ ತುಂಬಾ ಕಾಲ ಸರಿದಂತೆ ಅನ್ನಿಸಿತು. ಅವರು ತಾಳ್ಮೆಯಿಂದ ನಾಲ್ಕು ಗಂಟೆಗಳ ಕಾಲ ಅವಳನ್ನು ಕೇಳಿಸಿಕೊಂಡಿದ್ದರು. ಅವರ ದನಿಯಲ್ಲಿದ್ದ ಆತ್ಮೀಯತೆಯನ್ನು ಅವಳು ನೆನೆಸಿಕೊಂಡಳು. ಅವಳು ಮಾತನಾಡಿದ್ದೆಲ್ಲಾ ಮುಗಿದ ನಂತರ ಅವರು ಅವಳಿಗೆ "ನೀನೀಗ ನಮ್ಮ ಶಾಲೆಯ ವಿದ್ಯಾರ್ಥಿಯಾಗಿಬಿಟ್ಟೆ" ಎಂದು ಬೆಚ್ಚಗಿನ ದನಿಯಲ್ಲಿ ಹೇಳಿದ್ದರು. ಅವಳು ಅವರಿಗಾಗಿ ಕೆಲಸ ಮಾಡಲು ನಿಶ್ಚಯಿಸಿಕೊಂಡಿದ್ದಳು. ಅವರಿಗೆ ಸಹಾಯವಾಗುವ ಏನನ್ನೂ ಮಾಡಲು ಅವಳು ತಯಾರಿದ್ದಳು.

ಅವಳು ಪ್ರಮಾಣ ಮಾಡಿದ ನಂತರ ಅವರು ಬಿದ್ದುಹೋದ ಹಲ್ಲನ್ನು ಲೆಕ್ಕಿಸದೆ ಸ್ವಚ್ಛಂದವಾಗಿ ನಕ್ಕರು. ತೊತ್ತೊ-ಚಾನ್ ತನ್ನ ಕಿರುಬೆರಳನ್ನು ಮುಂದೆ ಹಿಡಿದಳು. ಮುಖ್ಯೋಪಾಧ್ಯಾಯರೂ ತಮ್ಮ ಕಿರುಬೆರಳನ್ನು ಹಿಡಿದರು. ಅಪಾರ ನಂಬಿಕೆ-ವಿಶ್ವಾಸಗಳನ್ನು ಹೊರಬಲ್ಲಷ್ಟು ದೃಢವಾಗಿತ್ತು ಅವರ ಕಿರುಬೆರಳು. ತೊತ್ತೊ-ಚಾನ್ ಮತ್ತು ಮುಖ್ಯೋಪಾಧ್ಯಾಯರು ಜಪಾನೀ ಶೈಲಿಯಲ್ಲಿ ತಮ್ಮಿಬ್ಬರ ಕಿರುಬೆರಳುಗಳನ್ನು ಬೆಸೆಯುತ್ತಾ ಪ್ರಮಾಣ ಮಾಡಿದರು. ಮುಖ್ಯೋಪಾಧ್ಯಾಯರು ಮುಗುಳ್ನಗುತ್ತಿದ್ದರು. ತೊತ್ತೊ-ಚಾನ್ ಕೂಡ ಭರವಸೆಯಿಂದ ಮುಗುಳ್ನಕ್ಕಳು. ಅವಳು ತೊತ್ತೊ-ಚಾನ್ ಶಿಕ್ಷಕಿಯಾಗಲಿದ್ದಾಳೆ! ಎಂತಹ ಅದ್ಭುತ ಆಲೋಚನೆ!

"ನಾನು ಶಿಕ್ಷಕಿಯಾದಾಗ...." ಎರಡು ಕಲ್ಪನೆಯ ಬೆನ್ನೇರಿ ಹೊರಟಳು: "ತುಂಬಾ ಓದುವುದು ಇರುವುದಿಲ್ಲ, ತುಂಬಾ ಕ್ರೀಡೆಯ ದಿನಗಳಿರುತ್ತವೆ; ಬಯಲಲ್ಲಿ ಅಡುಗೆಗಳು, ಕ್ಯಾಂಪ್ ಹಾಕುವುದು ಮತ್ತು ವಾಕಿಂಗುಗಳು!" ಮುಖ್ಯೋಪಾಧ್ಯಾಯರು ಸಂತೋಷಗೊಂಡಿದ್ದರು. ದೊಡ್ಡವಳಾದ ತೊತ್ತೊ-ಚಾನ್‌ಳನ್ನು ಕಲ್ಪಿಸಿಕೊಳ್ಳುವುದು ಕಷ್ಟವಾಗಿತ್ತು. ಆದರೆ ಅವಳು ಅಲ್ಲಿ ಶಿಕ್ಷಕಿಯಾಗುವುದರಲ್ಲಿ ಅನುಮಾನವೇ ಇರಲಿಲ್ಲ. ತೊಮೊಯೆದ ಮಕ್ಕಳಿಗೆಲ್ಲ ಅಲ್ಲಿ ಬಾಲ್ಯದ ನೆನಪುಗಳು ಇರುವುದರಿಂದ ಅವರೆಲ್ಲ ಒಳ್ಳೆಯ ಉಪಾಧ್ಯಾಯರಾಗುತ್ತಾರೆನ್ನುವುದರಲ್ಲಿ ಅನುಮಾನವೇ ಇರಲಿಲ್ಲ.

ಮಗುವಾಗಿರುವುದೆಂದರೆ ಏನು ಎನ್ನುವುದು ಅವರಿಗೆಲ್ಲಾ ಚೆನ್ನಾಗಿ ಗೊತ್ತಿತ್ತು.

ತೊಮೊಯೆದಲ್ಲಿ ಮುಖ್ಯೋಪಾಧ್ಯಾಯರು ಮತ್ತು ಅವರ ಶಿಷ್ಯೆಯೊಬ್ಬಳು ಇನ್ನೂ ಹತ್ತಾರು ವರ್ಷಗಳಲ್ಲಿ ಫಲ ಕಾಣಬಹುದಾದ ಪ್ರಮಾಣವನ್ನು ಮಾಡುತ್ತಿದ್ದರು. ಆದರೆ ಅಮೆರಿಕಾದ ಬಾಂಬು ತುಂಬಿದ ವಿಮಾನಗಳು ಜಪಾನಿನ ಆಕಾಶದಲ್ಲಿ ಶೀಘ್ರವೇ ಹಾರಾಡಲಿವೆ ಎಂದು ಎಲ್ಲರೂ ಹೇಳತೊಡಗಿದ್ದರು.

## ರಾಕಿಯ ಕಣ್ಮರೆ

ಅನೇಕ ಸೈನಿಕರು ಸತ್ತಿದ್ದರು, ಆಹಾರದ ತೀವ್ರ ಕೊರತೆ ಉಂಟಾಗಿತ್ತು. ಎಲ್ಲರೂ ಭಯದಲ್ಲಿ ಬದುಕತೊಡಗಿದ್ದರು. ಬೇಸಿಗೆ ಬಂದಿತ್ತು. ಗೆಲ್ಲುತ್ತಿದ್ದ ಮತ್ತು ಸೋಲುತ್ತಿದ್ದ ದೇಶಗಳ ಮೇಲೆ ಸೂರ್ಯ ಸಮನಾಗಿ ಪ್ರಕಾಶಿಸುತ್ತಿದ್ದನು.

ತೊತ್ತೊ-ಚಾನ್ ಕಾಮಾಕುರಾದ ತನ್ನ ದೊಡ್ಡಪ್ಪನ ಮನೆಯಿಂದ ಆಗಷ್ಟೇ ಟೋಕಿಯೋಗೆ ವಾಪಸ್ಸು ಬಂದಿದ್ದಳು.

ತೊಮೊಯೆದಲ್ಲಿ ಕ್ಯಾಂಪುಗಳು ಈಗ ಆಗುತ್ತಿರಲಿಲ್ಲ. ಬಿಸಿನೀರಿನ ಬುಗ್ಗೆಯ ಪ್ರವಾಸಗಳೂ ಇರಲಿಲ್ಲ. ಹಿಂದಿನಂತೆ ಮಕ್ಕಳು ಬೇಸಿಗೆ ರಜೆಯನ್ನು ಆನಂದಿಸುವ ಸಮಯ ಹೊರಟು ಹೋಗಿತ್ತು. ತೊತ್ತೊ-ಚಾನ್ ಯಾವಾಗಲೂ ಬೇಸಿಗೆಯ ರಜೆಯನ್ನು ಕಾಮಾಕುರಾದಲ್ಲಿ ತನ್ನ ದೊಡ್ಡಪ್ಪನ ಮಕ್ಕಳ ಜತೆ ಕಳೆಯುತ್ತಿದ್ದಳು. ಆದರೆ ಆ ವರ್ಷ ಮಾತ್ರ ಭಿನ್ನವಾಗಿತ್ತು. ಅವರಿಗೆ ಯಾವಾಗಲೂ ದೆವ್ವದ ಕತೆಗಳನ್ನೆಲ್ಲಾ ಹೇಳುತ್ತಿದ್ದ ಅವಳ ಸಂಬಂಧಿಕರಲ್ಲಿ ದೊಡ್ಡವನಾಗಿದ್ದ ಹುಡುಗನೊಬ್ಬನನ್ನು ಯುದ್ಧಕ್ಕೆ ಕರೆದುಕೊಂಡು ಹೋಗಿದ್ದರು. ಹೀಗಾಗಿ ದೆವ್ವದ ಕತೆಗಳನ್ನು ಹೇಳುವವರು ಯಾರೂ ಇರಲಿಲ್ಲ. ಅಮೆರಿಕದಲ್ಲಿನ ತನ್ನ ಬದುಕಿನ ಬಗ್ಗೆ ಬಹು ಆಸಕ್ತಿಯುತವಾದ ಕತೆಗಳನ್ನು - ಅವು ನಿಜವೋ ಸುಳ್ಳೋ ತಿಳಿಯುತ್ತಿರಲಿಲ್ಲ- ಹೇಳುತ್ತಿದ್ದ ಅವರ ದೊಡ್ಡಪ್ಪ ಈಗ ಸೈನ್ಯದ ಮುಂಚೂಣಿಯಲ್ಲಿದ್ದರು. ಷೂಜಿ ತಗುಚಿ ಎಂಬ ಹೆಸರಿನ ಆತ ದೊಡ್ಡ ಛಾಯಾಗ್ರಾಹಕರಾಗಿದ್ದರು.

ನ್ಯೂಯಾರ್ಕಿನಲ್ಲಿ ನಿಹೊನ್ ವಾರ್ತೆಗಳ ಬ್ಯೂರೋ ಮುಖ್ಯಸ್ಥನಾಗಿ ಮತ್ತು ಅಮೆರಿಕನ್ ಮೆಟ್ರೋ ವಾರ್ತೆಗಳ ಅತೀ ಪೂರ್ವಭಾಗದ ಪ್ರತಿನಿಧಿಯಾಗಿ ಕೆಲಸ ಮಾಡಿದ ಮೇಲೆ ಅವರನ್ನು ಷೂಜಿ ತಗುಚಿ ಎಂದೇ ಕರೆಯಲಾಗುತ್ತಿತ್ತು. ಅವರು ಆಕೆಗೆ ದೊಡ್ಡಪ್ಪನಾಗಬೇಕು. ತಂದೆಯವರು ತನ್ನ ತಾಯಿಯ ವಂಶದ ಹೆಸರನ್ನು ಇಟ್ಟುಕೊಂಡಿದ್ದರು. ಹಾಗಿಲ್ಲದಿದ್ದರೆ ಅವರ ಹೆಸರು ತಗುಚಿ ಎಂದೇ ಇರಬೇಕಾಗಿತ್ತು. ಅಂದಿನ ದಿನಗಳಲ್ಲಿ ದೊಡ್ಡಪ್ಪ ಷೂಜಿಯವರು ತೆಗೆದಿದ್ದ "ರಾಬಾವುಲ್ ಯುದ್ಧ" ಮೊದಲಾದ ಸಿನೆಮಾಗಳನ್ನು ಚಿತ್ರಮಂದಿರಗಳಲ್ಲಿ ತೋರಿಸಲಾಗುತ್ತಿತ್ತು. ಆದರೀಗ ಯುದ್ಧಭೂಮಿಯಿಂದ ಛಾಯಾಚಿತ್ರ ಮತ್ತು ಪತ್ರಗಳನ್ನು ಕಳಿಸುತ್ತಿದ್ದರು. ಯುದ್ಧದ ಚಿತ್ರಗಳು ಅವರು ಸದಾ ತುಂಬಾ ಅಪಾಯದಲ್ಲಿರುವುದನ್ನು ತೋರಿಸುತ್ತಿದ್ದವು. ಚಿತ್ರಗಳನ್ನು ಸೆರೆಹಿಡಿಯಲು ಅವರು ತುಕಡಿಗಳ ಮುಂದೆಯೇ ಇರಬೇಕಾಗುತ್ತಿತ್ತು.

ಹೀಗಾಗಿ ಅವಳ ದೊಡ್ಡಮ್ಮ ಮತ್ತು ಮಕ್ಕಳೆಲ್ಲಾ ತುಂಬಾ ಆತಂಕಗೊಂಡಿದ್ದರು.

ಕಾಮಾಕುರಾದ ಸಮುದ್ರ ತೀರ ಕೂಡ ಆ ಬೇಸಿಗೆಯಲ್ಲಿ ಅನಾಥವಾದಂತಿತ್ತು. ಇವೆಲ್ಲದರ ನಡುವೆಯೂ ಯಾಟ್-ಚಾನ್ ತಮಾಷೆಯಾಗೇ ಇರುತ್ತಿದ್ದನು. ಅವನು ದೊಡ್ಡಪ್ಪನ ಮೊದಲ ಮಗ. ಅವನು ತೊತ್ತೊ-ಚಾನ್‌ಳಿಗಿಂತ ಒಂದು ವರ್ಷ ಚಿಕ್ಕವನು. ಮಕ್ಕಳೆಲ್ಲ ಒಂದು ದೊಡ್ಡ ಸೊಳ್ಳೆ ಪರದೆಯ ಕೆಳಗೆ ಒಟ್ಟಾಗಿ ಮಲಗುತ್ತಿದ್ದರು. ನಿದ್ದೆ ಹೋಗುವ ಮೊದಲು ಯಾಟ್-ಚಾನ್ ಕೂಗುತ್ತಿದ್ದ, "ಮಹಾರಾಜರು ಬಹುಕಾಲ ಬಾಳಲಿ!" ನಂತರ ಗುಂಡು ತಗುಲಿದ ಸೈನಿಕ ಬಿದ್ದುಕೊಂಡು ಸತ್ತಂತೆ ನಟಿಸುತ್ತಿದ್ದ. ಮತ್ತೆ, ಮತ್ತೆ ಹಾಗೆ ಮಾಡುತ್ತಲಿರುತ್ತಿದ್ದ. ಹೀಗೆ ಮಾಡುವಾಗಲೆಲ್ಲಾ ಅವನು ಮಂಚದಿಂದ ಕೆಳಗೆ ಬಿದ್ದು ಸುಮ್ಮನೆ ಫಜೀತಿಯಾಗುತ್ತಿತ್ತು. ತೊತ್ತೊ-ಚಾನ್‌ಳ ತಾಯಿ ಈ ಸಾರಿ ಕಾಮಾಕುರಾಕ್ಕೆ ಬಂದಿರಲಿಲ್ಲ. ಅವಳು ತಂದೆಯೊಡನೆ ಟೋಕಿಯೋದಲ್ಲೇ ಇದ್ದರು. ಅವರಿಗಲ್ಲಿ ಕೆಲಸವಿತ್ತು. ಈಗ ಬೇಸಿಗೆ ರಜ ಮುಗಿದಿದ್ದರಿಂದ ತೊತ್ತೊ-ಚಾನ್‌ಳನ್ನು ದೆವ್ವದ ಕತೆ ಹೇಳುತ್ತಿದ್ದ ಹುಡುಗನ ಅಕ್ಕ ಟೋಕಿಯೋಗೆ ಕರೆತಂದು ಬಿಟ್ಟಳು.

ವಾಡಿಕೆಯಂತೆ, ಮನೆಗೆ ಬಂದ ತಕ್ಷಣ ತೊತ್ತೊ-ಚಾನ್ ಮಾಡಿದ ಕೆಲಸ ರಾಕಿಯನ್ನು ಹುಡುಕುವುದು. ಆದರೆ ಅದು ಎಲ್ಲೂ ಕಾಣಲಿಲ್ಲ. ಅದು ಮನೆಯಲ್ಲೂ ಇರಲಿಲ್ಲ, ತೋಟದಲ್ಲೂ ಇರಲಿಲ್ಲ. ತೊತ್ತೊ-ಚಾನ್ ಮನೆ ತಲುಪುವ ಮುನ್ನವೇ ರಾಕಿ ಅವಳನ್ನು ನೋಡಲು ಹೊರಬರುತ್ತಿದ್ದರಿಂದ ಅವಳಿಗೆ ಆತಂಕವಾಯಿತು. ತೊತ್ತೊ-ಚಾನ್ ರಸ್ತೆಗಿಳಿದು ರಾಕಿಯನ್ನು ಕರೆಯತೊಡಗಿದಳು. ಆದರೆ ರಾಕಿಯ ಪ್ರೀತಿಯ ಕಂಗಳ, ಕಿವಿಗಳ, ಬಾಲದ ಸುಳಿವೇ ಇಲ್ಲ. ಅದನ್ನು ಹುಡುಕುತ್ತಾ ಹೊರಕ್ಕೆ ಬಂದಾಗ ಅದು ಒಳಗೆ ಹೋಗಿರಬೇಕೆಂದು ಭಾವಿಸಿ ಅವಳು ಒಳಕ್ಕೆ ಓಡಿದಳು. ಆದರೆ ಅದು ಅಲ್ಲಿರಲಿಲ್ಲ.

"ರಾಕಿ ಎಲ್ಲಿ?" ಅಮ್ಮನನ್ನು ಕೇಳಿದಳು.

ತೊತ್ತೊ-ಚಾನ್ ರಾಕಿಯನ್ನು ಹುಡುಕುತ್ತಲೇ ಓಡಾಡುತ್ತಿದ್ದಾಳೆಂದು ಅಮ್ಮನಿಗೆ ತಿಳಿದಿರಬೇಕು. ಆದರೂ ಅವಳು ಒಂದೂ ಮಾತನಾಡದೆ ಸುಮ್ಮನಿದ್ದಳು.

"ರಾಕಿ ಎಲ್ಲಿ?" ಈಗ ಅಮ್ಮನ ಬಟ್ಟೆ ಎಳೆಯುತ್ತಾ ತೊತ್ತೊ-ಚಾನ್ ಪುನಃ ಕೇಳಿದಳು.

ಅಮ್ಮನಿಗೆ ಉತ್ತರ ಹೇಳುವುದು ತುಂಬಾ ಕಷ್ಟವಾಗಿತ್ತು. "ಎತ್ತಲೋ ಹೊರಟುಹೋಗಿದೆ" ಎಂದಳು.

ತೊತ್ತೊ-ಚಾನ್ ನಂಬಲು ತಯಾರಿರಲಿಲ್ಲ. ಅದು ಎಲ್ಲೋ ಹೋಗಿಬಿಡಲು ಹೇಗೆ ಸಾಧ್ಯ? "ಯಾವಾಗ?" ಅಮ್ಮನ ಮುಖವನ್ನೇ ನೋಡುತ್ತಾ ಕೇಳಿದಳು.

ಅಮ್ಮನಿಗೆ ಏನು ಹೇಳಬೇಕೆಂದು ತಿಳಿಯಲಿಲ್ಲ. "ನೀನು ಕಾಮಾಕುರಾಕ್ಕೆ ಹೋದ ತಕ್ಷಣವೇ" ಅಮ್ಮ ದುಃಖದಿಂದ ಹೇಳಲು ಪ್ರಾರಂಭಿಸಿದಳು. "ನಾವು ತುಂಬಾ ಹುಡುಕಿದೆವು. ಎಲ್ಲ ಕಡೆಗೂ ಹೋಗಿ ಬಂದೆವು. ಮತ್ತೆ ಎಲ್ಲರನ್ನೂ ಕೇಳಿದೆವು. ಆದರೆ ಅದು ಸಿಗಲೇ ಇಲ್ಲ. ನಿನಗೆ ಹೇಗೆ ಹೇಳುವುದೆಂದೇ ಚಿಂತೆಯಾಗಿತ್ತು."

ತೊತ್ತೊ-ಚಾನ್‌ಗೆ ಸತ್ಯ ಹೊಳೆಯಿತು. ರಾಕಿ ಸತ್ತು ಹೋಗಿರಬೇಕು. "ಅಮ್ಮ ನನಗೆ ಬೇಜಾರಾಗುತ್ತದೆಂದು ಹೇಳುತ್ತಿಲ್ಲ" ಎಂದುಕೊಂಡಳು. "ರಾಕಿ ಸತ್ತು ಹೋಗಿರಬೇಕು."

ತೊತ್ತೊ-ಚಾನ್‌ಳಿಗೆ ಅನುಮಾನವೇ ಉಳಿಯಲಿಲ್ಲ. ಈವರೆಗೂ ತೊತ್ತೊ-ಚಾನ್ ಎಷ್ಟೇ ದಿನ ಮನೆಬಿಟ್ಟು ಹೋಗಿದ್ದರೂ ರಾಕಿ ಮನೆಯಿಂದ ದೂರ ಹೋಗುತ್ತಿರಲಿಲ್ಲ. ಅವಳು ವಾಪಸ್ಸು ಬರುತ್ತಾಳೆಂದು ಅದಕ್ಕೆ ತಿಳಿದಿತ್ತು. "ರಾಕಿ ನನಗೆ ಹೇಳದೆ ಹಾಗೆ ಹೋಗೋದೇ ಇಲ್ಲ" ತಂತಾನೇ ಅಂದುಕೊಂಡಳು. ಅದವಳ ದೃಢ ನಂಬಿಕೆ.

ಆದರೆ ತೊತ್ತೊ-ಚಾನ್ ಇದರ ಬಗ್ಗೆ ಅಮ್ಮನ ಬಳಿ ಮಾತನಾಡಲಿಲ್ಲ. ಅಮ್ಮನಿಗೆ ಎಷ್ಟು ನೋವಾಗುತ್ತದೆಂದು ಅವಳಿಗೆ ತಿಳಿದಿತ್ತು.

"ಎಲ್ಲಿ ಹೋಗಿಬಿಟ್ಟಿತೋ ಏನೋ" ತಲೆ ತಗ್ಗಿಸಿ ಅಮ್ಮನಿಗೆ ಇಷ್ಟೇ ಹೇಳಿದಳು.

ಅಷ್ಟು ಹೇಳಿ ಮಹಡಿ ಮೇಲೆ ತನ್ನ ಕೋಣೆಗೆ ಓಡಿದಳು. ರಾಕಿಯಿಲ್ಲದ ಮನೆ ತಮ್ಮ ಮನೆಯಂತೆಯೇ ಇರಲಿಲ್ಲ. ತನ್ನ ಕೋಣೆಗೆ ಹೋಗಿ ಅಳದೆ ಇರಲು ತುಂಬಾ ಪ್ರಯತ್ನಿಸಿದಳು. ಮತ್ತೆ ಅದರ ಬಗ್ಗೆ ಯೋಚಿಸಿದಳು. ತಾನು ರಾಕಿಯ ಹತ್ತಿರ ಕೆಟ್ಟದಾಗಿ ನಡೆದುಕೊಂಡಿದ್ದೆನಾ, ರಾಕಿಗೆ ಮನೆ ಬಿಟ್ಟುಹೋಗುವಂತೆ ಏನಾದರೂ ಮಾಡಿದ್ದೆನಾ ? ಎಂದೆಲ್ಲಾ ಯೋಚಿಸಿದಳು.



"ಪ್ರಾಣಿಗಳನ್ನು ಅಣಕಿಸಬಾರದು" ಕೊಬಾಯಾಶಿಯವರು ತೊಮೊಯೆದ ಮಕ್ಕಳಿಗೆ ಯಾವಾಗಲೂ ಹೇಳುತ್ತಿದ್ದರು. "ಅವು ನಿಮ್ಮನ್ನು ನಂಬಿದ್ದಾಗ ನೀವು ಅವುಗಳಿಗೆ ಮೋಸ ಮಾಡುವುದು ತುಂಬಾ ಕ್ರೌರ್ಯ. ನಾಯಿಯನ್ನು ಬೇಡುವಂತೆ ಮಾಡಿ ಅನಂತರ ಏನೂ ಕೊಡದೆ ಇರುವಂತಹ ಆಟ ಆಡಬೇಡಿ. ನಾಯಿ ಮತ್ತೆ ನಿಮ್ಮನ್ನು ನಂಬುವುದೇ ಇಲ್ಲ. ಅಲ್ಲದೆ ಕೆಟ್ಟ ಬುದ್ಧಿ ಕಲಿಯುತ್ತದೆ."

ತೊತ್ತೊ-ಚಾನ್ ಯಾವಾಗಲೂ ಈ ನಿಯಮಗಳನ್ನು ಪಾಲಿಸಿದ್ದಳು. ಅವಳೆಂದೂ ರಾಕಿಗೆ ಮೋಸ ಮಾಡಿರಲಿಲ್ಲ. ತನಗೆ ನೆನಪಿರುವ ಮಟ್ಟಿಗೆ ಕೆಟ್ಟದನ್ನೇನೂ ಮಾಡಿರಲಿಲ್ಲ.

ನೆಲದ ಮೇಲೆ ಬಿದ್ದಿದ್ದ ಟೆಡ್ಡಿಬೇರ್‌ನ ಕಾಲಿಗೆ ಏನೋ ಸಿಕ್ಕಿಹಾಕಿಕೊಂಡಿರುವುದನ್ನು ತೊತ್ತೊ-ಚಾನ್ ಗಮನಿಸಿದಳು. ಅಲ್ಲಿಯವರೆಗೂ ಅಳುವನ್ನು ತಡೆಹಿಡಿದಿದ್ದಳು. ಆದರೆ ಅದನ್ನು ನೋಡುತ್ತಿದ್ದಂತೆಯೇ ಗೊಳೋ ಎಂದು ಅಳಲು ಪ್ರಾರಂಭಿಸಿದಳು. ಅದು ರಾಕಿಯ ಕೂದಲಿನ ಒಂದು ಜೊಂಪೆ. ಅವಳು ಕಾಮಾಕುರಾಕ್ಕೆ ಹೊರಟ ಬೆಳಿಗ್ಗೆ ಅವೆರಡೂ ತಬ್ಬಿಕೊಂಡು ನೆಲದ ಮೇಲೆ ಉರುಳುತ್ತಾ ಆಟ ಆಡುವಾಗ ಅದು ಸಿಕ್ಕಿಹಾಕಿಕೊಂಡಿರಬೇಕು.

ಜರ್ಮನ್ ಷೆಫರ್ಡ್ ಕೂದಲ ಜೊಂಪೆಯನ್ನು ಕೈಯಲ್ಲಿ ಹಿಡಿದುಕೊಂಡು ಒಂದೇ ಸಮನೆ ಅತ್ತಳು. ಅಳುತ್ತಲೇ ಇದ್ದಳು.

ಮೊದಲು ಯಾಸುಕೀ-ಚಾನ್, ಮತ್ತು ಈಗ ರಾಕಿ. ತೊತ್ತೊ-ಚಾನ್ ತನ್ನ ಇನ್ನೊಬ್ಬ ಸ್ನೇಹಿತನನ್ನು ಕಳೆದುಕೊಂಡಿದ್ದಳು.

## ಚಹಾಕೂಟ

ತೊಮೊಯೆದಲ್ಲಿ ಕಾವಲುಗಾರನಾಗಿದ್ದ ರಯೋ-ಚಾನ್‌ಗೂ ಯುದ್ಧಕ್ಕೆ ಕರೆಬಂದಿತ್ತು. ಅವನು ದೊಡ್ಡವನಾಗಿದ್ದರೂ ಮಕ್ಕಳೆಲ್ಲಾ ಅವನನ್ನು ಮುದ್ದು ಹೆಸರಿನಿಂದಲೇ ಕರೆಯುತ್ತಿದ್ದರು. ಯಾರಾದರೂ ಏನಾದರೂ ತೊಂದರೆಯಲ್ಲಿದ್ದರೆ ಅವನು ರಕ್ಷಕ ದೇವತೆಯಂತೆ ಬರುತ್ತಿದ್ದ. ಅವನು ಹೆಚ್ಚು ಮಾತನಾಡದೆ ಸುಮ್ಮನೆ ಮುಗುಳ್ನಗುತ್ತಿದ್ದನು. ಆದರೆ ಯಾವಾಗ ಏನು ಮಾಡಬೇಕೆಂಬುದು ಮಾತ್ರ ಅವನಿಗೆ ಚೆನ್ನಾಗಿ ತಿಳಿದಿರುತ್ತಿತ್ತು. ತೊತ್ತೊ-ಚಾನ್ ಕಕ್ಕಸ್ಸು ಗುಂಡಿಯಲ್ಲಿ ಬಿದ್ದುಬಿಟ್ಟಾಗ ರಯೋ-ಚಾನ್ ಅವಳನ್ನು ಎತ್ತಿ ಹೆಚ್ಚು ಪ್ರಚಾರವನ್ನೇನೂ ಮಾಡದೆ ಅವಳನ್ನು ತೊಳೆದಿದ್ದನು.

"ರಯೋ-ಚಾನ್‌ನಿಗೆ ನಾವು ಒಂದು ಟೀ ಪಾರ್ಟಿ ಕೊಡೋಣ" ಮುಖ್ಯೋಪಾಧ್ಯಾಯರೆಂದರು.

"ಟೀ ಪಾರ್ಟಿ ?"

ಜಪಾನಿನ ದಿನದಲ್ಲಿ ಹಲವು ಬಾರಿ ಹಸಿರು ಟೀ ಕುಡಿಯುವ ಅಭ್ಯಾಸ ಇದೆ. ಅತಿಥಿ ಅಥವಾ ಸತ್ಕಾರ ಸಮಾರಂಭಗಳ ಜೊತೆ ಇದಕ್ಕೆ ಸಂಬಂಧವೇ ಇಲ್ಲ.

ಪರಿವಾರಕ್ಕೆ ಸಂಬಂಧಿಸಿದ ಸಮಾರಂಭಗಳಲ್ಲಿ ಬೇರೊಂದು ರೀತಿಯ ಟೀ ಬಳಸಲಾಗುತ್ತದೆ. ಆದ್ದರಿಂದ ತೊಮೊಯೆ ಚಹಾಕೂಟ ಅಂದರೆ ಹೊಸ ವಿಷಯವೇ. ಅಲ್ಲದೆ ಮಕ್ಕಳಿಗೆ ಹೊಸದೇನಾದರೂ ಮಾಡುವುದೆಂದರೆ ತುಂಬಾ ಇಷ್ಟ. ಮುಖ್ಯೋಪಾಧ್ಯಾಯರು ಸಾಮಾನ್ಯವಾಗಿ ಬಳಸುವ 'ಬೀಳ್ಕೊಡುಗೆ ಸಮಾರಂಭ' ಎಂಬುದಕ್ಕೆ ಬದಲಾಗಿ 'ಚಹಾಕೂಟ' ಎಂದು ಹೊಸದಾಗಿ ಬಳಸಿದ್ದರು. 'ಬೀಳ್ಕೊಡುಗೆ ಸಮಾರಂಭ' ತುಂಬಾ ದುಃಖಸೂಚಕ ಶಬ್ದವಾಗಿತ್ತು. ರಯೋ-ಚಾನ್‌ನೇನಾದರೂ ಯುದ್ಧದಲ್ಲಿ ಕೊಲ್ಲಲ್ಪಟ್ಟರೆ ಇದು ನಿಜವಾದ ಅರ್ಥದಲ್ಲಿ ಅವನಿಗೆ ಬೀಳ್ಕೊಡುಗೆ ಎಂಬುದನ್ನು ಸ್ವಲ್ಪ ದೊಡ್ಡ ಮಕ್ಕಳು ಅರ್ಥಮಾಡಿಕೊಳ್ಳಬಲ್ಲವರಾಗಿದ್ದರು. ಆದರೆ ಅವರಾರೂ ಈ ಹಿಂದೆ ಚಹಾಕೂಟಕ್ಕೆ ಹೋಗದೆ ಇದ್ದುದರಿಂದ ತುಂಬಾ ಪುಳಕಗೊಂಡಿದ್ದರು.

ಅಂದು ಶಾಲೆ ಮುಗಿದ ನಂತರ ಮುಖ್ಯೋಪಾಧ್ಯಾಯರು ಸಭಾಂಗಣದಲ್ಲಿ ಊಟದ ಸಮಯದಲ್ಲಿ ಹಾಕುವಂತೆ ಡೆಸ್ಕುಗಳನ್ನು ಜೋಡಿಸಲು ಮಕ್ಕಳಿಗೆ ಹೇಳಿದರು. ಅವರೆಲ್ಲಾ ವರ್ತುಲದಲ್ಲಿ ಕುಳಿತ ನಂತರ, ಹಸಿರು ಟೀಯ ಜತೆ ತಿನ್ನಲು ಹುರಿದ ಮೀನಿನ ತೆಳ್ಳಗಿನ ಉದ್ದ ಚೂರನ್ನು ಪ್ರತಿಯೊಬ್ಬರಿಗೂ ಕೊಟ್ಟರು. ಯುದ್ಧದ ಆ ದಿನಗಳಲ್ಲಿ ಅದು ಕೂಡ ಹೆಚ್ಚೇ. ಆನಂತರ ಅವರು ರಯೋ-ಚಾನ್‌ನ ಪಕ್ಕ ಕುಳಿತು ಸ್ವಲ್ಪ ಅಕ್ಕಿಯ ಮದ್ಯವಿದ್ದ ಬಟ್ಟಲನ್ನು ಅವನ ಮುಂದೆ ಇರಿಸಿದರು. ಯುದ್ಧಕ್ಕೆ ಹೋಗುವಂತಿರುವವರಿಗಷ್ಟೇ ಅದನ್ನು ಕೊಡುತ್ತಿದ್ದುದು.

"ಇದು ತೊಮೊಯೆದ ಚಹಾಕೂಟ!" ಮುಖ್ಯೋಪಾಧ್ಯಾಯರೆಂದರು. "ನಾವೆಲ್ಲ ಸಂತೋಷವಾಗಿ ಕಾಲ ಕಳೆಯೋಣ. ಯಾರಾದರೂ ರಯೋ-ಚಾನ್‌ನಿಗೆ ಏನಾದರೂ ಹೇಳುವುದಿದ್ದರೆ ಹೇಳಿ. ರಯೋ-ಚಾನ್‌ನಿಗೆ ಮಾತ್ರವಲ್ಲ, ಇತರರಿಗೂ ಹೇಳಬಹುದು. ಒಬ್ಬೊಬ್ಬರಾಗಿ ಮಧ್ಯೆ ಬಂದು ನಿಂತು ಹೇಳಿ."

ಅವರು ಈ ಬಗೆಯ ಹುರಿದ ಒಣಮೀನನ್ನು ತಿನ್ನುತ್ತಿರುವುದು ಇದೇ ಮೊದಲ ಸಲ. ಮತ್ತು ರಯೊ-ಚಾನ್ ಅವರೊಂದಿಗೆ ಹೀಗೆ ಕುಳಿತಿರುವುದೂ ಇದೇ ಮೊದಲ ಸಲ. ಮತ್ತು ಮದ್ಯ ಕುಡಿಯುತ್ತಿರುವುದನ್ನು ನೋಡುತ್ತಿರುವುದೂ ಇದೇ ಮೊದಲ ಸಲ.

ಒಬ್ಬೊಬ್ಬರಾಗಿ ಎದ್ದು ನಿಂತು ರಯೊ-ಚಾನ್‌ನ ಕಡೆ ತಿರುಗಿ ಮಾತನಾಡತೊಡಗಿದರು. ಮೊದಲು ಮಾತನಾಡಿದ ಮಗು ಅವನಿಗೆ ತನ್ನನ್ನು ಚೆನ್ನಾಗಿ ನೋಡಿಕೊಳ್ಳುವಂತೆಯೂ ಕಾಯಿಲೆ ಬೀಳದಿರುವಂತೆಯೂ ಹೇಳಿತು. ತೊತ್ತೊ-ಚಾನ್‌ಳ ತರಗತಿಯಲ್ಲಿದ್ದ ಮಿಗಿತ, "ನಾನು ಮುಂದಿನ ಸಲ ನಮ್ಮ ಹಳ್ಳಿಗೆ ಹೋದಾಗ ನಿನಗೆ ಶವಸಂಸ್ಕಾರ ಭೋಜನದ ಉಂಡೆಯನ್ನು ತರುತ್ತೇನೆ" ಎಂದಾಗ ಎಲ್ಲರೂ ನಕ್ಕರು.

ಶವಸಂಸ್ಕಾರದ ಸಮಯದಲ್ಲಿ ತಾನೊಮ್ಮೆ ತಿಂದ ಹಿಟ್ಟಿನುಂಡೆ ಎಷ್ಟೊಂದು ರುಚಿಯಾಗಿತ್ತೆಂದು ಮಿಗಿತ ತುಂಬಾ ಹಿಂದೆಯೇ ಎಲ್ಲರಿಗೂ ಹೇಳಿದ್ದ. ಸಮಯ ಸಿಕ್ಕಾಗಲೆಲ್ಲಾ ಅದನ್ನು ತಂದುಕೊಡುವುದಾಗಿ ಹೇಳುತ್ತಲೇ ಇದ್ದ. ಆದರೆ ಅವನೆಂದೂ ತಂದುಕೊಟ್ಟಿರಲಿಲ್ಲ.

ಮಿಗಿತನು ಶವಸಂಸ್ಕಾರ ಭೋಜನದ ಹಿಟ್ಟಿನುಂಡೆಯ ಪ್ರಸ್ತಾಪ ಮಾಡಿದ್ದು ಮುಖ್ಯೋಪಾಧ್ಯಾಯರನ್ನು ಸ್ವಲ್ಪ ಗಾಬರಿಗೊಳಿಸಿತು. ಅಂತಹ ಸಮಯದಲ್ಲಿ ಶವಸಂಸ್ಕಾರ ಭೋಜನದ ಹಿಟ್ಟಿನುಂಡೆಯ ಪ್ರಸ್ತಾಪ ಮಾಡುವುದು ಕೆಟ್ಟ ಶಕುನವೆಂದೇ ಪರಿಗಣಿಸಲಾಗುತ್ತದೆ. ಆದರೆ ಮಿಗಿತನು ತಾನು ತಿಂದ ರುಚಿಕರವಾದದ್ದನ್ನು ತನ್ನ ಸ್ನೇಹಿತರೊಂದಿಗೆ ಹಂಚಿಕೊಳ್ಳಬೇಕೆಂದು ಎಷ್ಟೊಂದು ಮುಗ್ಧವಾಗಿ ಅದರ ಪ್ರಸ್ತಾಪ ಮಾಡಿದ್ದನೆಂದರೆ ಮುಖ್ಯೋಪಾಧ್ಯಾಯರು ಇತರರನ್ನು ಕೂಡಿಕೊಂಡು ನಗತೊಡಗಿದರು. ರಯೋ-ಚಾನ್‌ನೂ ಮನತುಂಬಿ ನಕ್ಕನು. ಮಿಗಿತ ಅದನ್ನು ತರುವುದಾಗಿ ಬಹಳ ಸಾರಿ ಹೇಳಿದ್ದ!

ನಂತರ ಓಯಿಯು ಎದ್ದು ನಿಂತು ತಾನು ಜಪಾನಿನ ಅತ್ಯುತ್ತಮ ತೋಟಗಾರನಾಗುವುದಾಗಿ ರಯೋ-ಚಾನ್‌ನಿಗೆ ಪ್ರಮಾಣ ಮಾಡಿದನು. ತೋದೋರಕಿಯಲ್ಲಿ ಓಯಿಯ ಅಪ್ಪನಿಗೆ ದೊಡ್ಡ ನರ್ಸರಿ ಫಾರಂ ಇತ್ತು. ನಂತರ ಎದ್ದು ನಿಂತ ಕೀಕೋ ಆವೋಕಿ ಏನೂ ಹೇಳಲೇ ಇಲ್ಲ. ಯಾವತ್ತಿನಂತೆ ನಾಚಿಕೆಯಿಂದ ಸುಮ್ಮನೆ ನಕ್ಕು ತನ್ನ ಜಾಗಕ್ಕೆ ಹೋಗಿ ಕುಳಿತಳು. ತಕ್ಷಣ ತೊತ್ತೊ-ಚಾನ್ ಅವಳ ಬಳಿಗೆ ಓಡಿ, "ಕೀಕೋ-ಚಾನ್‌ಳ ಕೋಳಿಮರಿಗಳು ಹಾರಿರಬೇಕಲ್ಲ. ನಾನದನ್ನ ಅವತ್ತು ನೋಡಿದ್ದೇನೆ" ಎಂದು ಅವಳಿಗೆಂದಳು.

ನಂತರ ಅಮದೇರಾ ಮಾತನಾಡಿದನು. "ನಿಮಗೆ ಗಾಯಗೊಂಡ ನಾಯಿಯೋ ಬೆಕ್ಕೋ ಸಿಕ್ಕಿದರೆ" ಅವನೆಂದನು, "ನನ್ನ ಹತ್ತಿರ ತನ್ನಿ. ನಾನು ಸರಿಮಾಡಿ ಕೊಡುತ್ತೇನೆ."

ಕುಳ್ಳ ತಾಕಾಹಾಶಿಯು ಡೆಸ್ಕಿನ ಕೆಳಗೆ ನುಸುಳಿ ಕಣ್ಣುಮುಚ್ಚಿ ಬಿಡುವುದರಲ್ಲಿ ವರ್ತುಲದ ಮಧ್ಯದಲ್ಲಿದ್ದನು. ಅವನು ಸಮಾಧಾನದಿಂದ ಹೇಳಿದನು, "ಥ್ಯಾಂಕ್ಸ್ ರಯೋ-ಚಾನ್. ಎಲ್ಲದಕ್ಕೂ ಥ್ಯಾಂಕ್ಸ್. ಏನೆಲ್ಲಾ ಮಾಡಿದ್ದೀಯಾ ಎಲ್ಲದಕ್ಕೂ ಧನ್ಯವಾದಗಳು!"

ನಂತರ ಎದ್ದು ನಿಂತವಳು ಆಯಿಕೋ ಸಾಯಿಷೋ. "ರಯೋ-ಚಾನ್, ನಾನು ಕೆಳಗೆ ಬಿದ್ದಾಗ ನನ್ನ ಗಾಯಕ್ಕೆ ನೀನು ಬ್ಯಾಂಡೇಜ್ ಕಟ್ಟಿದೆಯಲ್ಲ. ಅದಕ್ಕಾಗಿ ಥ್ಯಾಂಕ್ಸ್. ನಾನದನ್ನು ಮರೆಯೋದೇ ಇಲ್ಲ." ಆಯಿಕೋ ಸಾಯಿಷೋಳ ಮಾಮ ಅಡ್ಮಿರಲ್ ಆಗಿದ್ದರು. ಅವರು ರಷ್ಯಾ-ಜಪಾನ್ ಯುದ್ಧದಲ್ಲಿ ಪಾಲ್ಗೊಂಡಿದ್ದನು. ಅವಳ ಮತ್ತೊಬ್ಬ ಸಂಬಂಧಿ ಅತ್ಸುಕೊ ಸಾಯಿಷೋ ಮಹಾರಾಜ ಮೀಜೀಮರ ಆಸ್ಥಾನದಲ್ಲಿ ಸುಪ್ರಸಿದ್ಧ ಕವಯತ್ರಿಯಾಗಿದ್ದರು. ಆದರೆ ಆಯಿಕೋ ಅವರ ಬಗ್ಗೆ ಎಂದೂ ಮಾತನಾಡುತ್ತಿರಲಿಲ್ಲ, ಕೊಚ್ಚಿಕೊಳ್ಳುತ್ತಿರಲಿಲ್ಲ.

ಹೆಡ್‌ಮಾಸ್ತರ ಮಗಳು ಮಿಯೋ-ಚಾನ್‌ಳಿಗೆ ರಯೋ-ಚಾನ್‌ನ ಪರಿಚಯ ಎಲ್ಲರಿಗಿಂತ ಹೆಚ್ಚಾಗಿ ಇತ್ತು. ಅವಳ ಕಣ್ಣುಗಳು ತುಂಬಿ ಬಂದಿದ್ದವು. "ಚೆನ್ನಾಗಿ ನೋಡಿಕೋತಿಯಾ ತಾನೇ ರಯೋ-ಚಾನ್. ಕಾಗದ ಬರೆಯಲು ಮರೆಯಬೇಡಿ."

ತೊತ್ತೊ-ಚಾನ್‌ಳಿಗೆ ಏನೆಲ್ಲ ಹೇಳುವುದಿತ್ತು. ಎಲ್ಲಿಂದ ಪ್ರಾರಂಭಿಸಬೇಕೆಂದು ತಿಳಿಯಲಿಲ್ಲ. ಸುಮ್ಮನೆ ಹೇಳಿದಳು "ರಯೋ-ಚಾನ್, ನೀವು ಹೋದ ಮೇಲೂ

ನಾವು ದಿನಾ ಚಹಾಕೂಟ ಮಾಡುತ್ತೇವೆ.''

ಮುಖ್ಯೋಪಾಧ್ಯಾಯರು ನಕ್ಕರು. ರಯೋ-ಚಾನ್ ಕೂಡ. ಎಲ್ಲ ಮಕ್ಕಳೂ ನಕ್ಕರು. ತೊತ್ತೊ-ಚಾನ್ ಕೂಡ ನಕ್ಕುಬಿಟ್ಟಳು.

ಆದರೆ ತೊತ್ತೊ-ಚಾನ್ ಹೇಳಿದ್ದ ಮಾತು ಮಾರನೆಯ ದಿನದಿಂದಲೇ ನಿಜವಾಗಿತ್ತು. ಸಮಯವಿದ್ದಾಗಲೆಲ್ಲಾ ಮಕ್ಕಳೆಲ್ಲಾ ಗುಂಪುಗಟ್ಟಿಕೊಂಡು ಚಹಾಕೂಟ ಆಟ ಆಡುತ್ತಿದ್ದರು. ಒಣ ಮೀನಿಗೆ ಬದಲಾಗಿ ಮರದ ಚಕ್ಕೆಗಳನ್ನು ಬಳಸುವರು, ಟೀ ಬದಲಾಗಿ ನೀರು ಕುಡಿಯುವರು. ಕೆಲಸಮಯ ಅದು ಅಕ್ಕಿಯ ಮದ್ಯವೂ ಆಗುತ್ತಿತ್ತು. ಯಾರೋ ಒಬ್ಬರು ಹೇಳುವರು, ''ನಾನು ನಿಮಗೆ ಶವಸಂಸ್ಕಾರ ಭೋಜನದ ಹಿಟ್ಟಿನುಂಡೆ ತರುವೆ.'' ಮತ್ತೆ ಎಲ್ಲರೂ ನಗುವರು. ನಂತರ ಅವರು ಮಾತನಾಡಿ ತಮಗನ್ನಿಸಿದ್ದನ್ನು ಇತರರಿಗೆ ಹೇಳುವರು. ತಿನ್ನಲು ಏನೂ ಇರದಿದ್ದರೂ ಚಹಾಕೂಟಗಳು ತಮಾಷೆಯಾಗಿರುತ್ತಿದ್ದವು.

'ಚಹಾಕೂಟ' ರಯೋ-ಚಾನ್ ಮಕ್ಕಳಿಗೆ ಬಿಟ್ಟುಹೋದ ಅತ್ಯುತ್ತಮ ಕೊಡುಗೆಯಾಗಿತ್ತು. ಮಕ್ಕಳೆಲ್ಲ ಒಬ್ಬರನ್ನೊಬ್ಬರು ತೊರೆದು ಹೋಗುವ ಮುನ್ನ ಆಡಿದ ಕಡೆಯ ಆಟ ಇದಾಗಿತ್ತು. ಮಕ್ಕಳಿಗೆ ಮಾತ್ರ ಅಂತಹ ಕಲ್ಪನೆಯ ಲವಲೇಶವೂ ಇರಲಿಲ್ಲ. ?

ರಯೋ-ಚಾನ್ ಟೋಕಿಯೋ ರೈಲಿನಲ್ಲಿ ತೆರಳಿದ. ಅವನು ಹೋಗುವುದಕ್ಕೂ ಅಮೆರಿಕನ್ ವಿಮಾನಗಳು ಬರುವುದಕ್ಕೂ ಸರಿಹೋಯಿತು. ಜಪಾನಿನ ಆಕಾಶದಲ್ಲಿ ಕೊನೆಗೂ ಕಾಣಿಸಿಕೊಂಡ ಅವು ಎಲ್ಲೆಲ್ಲೂ ಬಾಂಬುಗಳನ್ನು ಹಾಕಲು ಪ್ರಾರಂಭಿಸಿದವು.

## ಸಾಯೋನಾರಾ, ಸಾಯೋನಾರಾ !

ತೊಮೊಯೆ ಸುಟ್ಟು ಹೋಯಿತು. ಅದಾದದ್ದು ರಾತ್ರಿಯಲ್ಲಿ. ಶಾಲೆಯ ಪಕ್ಕದಲ್ಲೇ ವಾಸವಿದ್ದ ಮಿಯೋ-ಚಾನ್, ಅವಳಕ್ಕ ಮಿಸಾ-ಚಾನ್ ಮತ್ತವರ ತಾಯಿ ಕುಹೊನ್‌ಬುತ್ಸು ದೇವಸ್ಥಾನದ ಕೊಳದ ಪಕ್ಕದಲ್ಲಿದ್ದ ತೊಮೊಯೆ ಫಾರಂಗೆ ಹೋಗಿ ಅಲ್ಲಿ ಸುರಕ್ಷಿತವಾಗಿದ್ದರು.

ಶಾಲಾ ತರಗತಿಗಳಾಗಿದ್ದ ರೈಲುಬಂಡಿಗಳ ಮೇಲೆ ಬಿ-29ವಿಮಾನ ಹಾಕಿದ ಅನೇಕ ಮಾರಕ ಬಾಂಬುಗಳು ಬಿದ್ದವು.

ಮುಖ್ಯೋಪಾಧ್ಯಾಯರ ಕನಸಿನ ಲೋಕವಾಗಿದ್ದ ಶಾಲೆ ಹತ್ತಿ ಉರಿಯುತ್ತಿತ್ತು. ಅವರ ಪ್ರೀತಿಯ ಮಕ್ಕಳ ನಗುವಿನ ಗದ್ದಲದಿಂದಲೇ ತುಂಬಿರುತ್ತಿದ್ದ ಶಾಲೆ ಭಯಂಕರ ಸದ್ದಿನೊಂದಿಗೆ ಕುಸಿಯುತ್ತಿತ್ತು. ತನ್ನ ಕೆನ್ನಾಲಗೆಯನ್ನು ಕ್ರೂರವಾಗಿ ಚಾಚಿಕೊಂಡು ಆರಿಸಲು ಅಸಾಧ್ಯವಾದ ಬೆಂಕಿ ತೊಮೊಯೆಯನ್ನು ಕಬಳಿಸಿತು. ಜಿಯುಗಾವೋಕಾದ ಎಲ್ಲ ಕಡೆ ಬೆಂಕಿಯೇ ಬೆಂಕಿ.

ಇದರ ಮಧ್ಯದಲ್ಲಿಯೇ ಮುಖ್ಯೋಪಾಧ್ಯಾಯರು ರಸ್ತೆಯಲ್ಲಿ ನಿಂತು

ತೊಮೊಯೆ ಉರಿಯುವುದನ್ನು ನೋಡುತ್ತಿದ್ದರು. ಅವರ ಮಾಮೂಲಿನ ಮಾಸಲು ಮೂರು ಪೀಸಿನ ಸೂಟನ್ನೇ ಆಗಲೂ ತೊಟ್ಟುಕೊಂಡಿದ್ದರು. ತನ್ನ ಚೌಕಟ್ಟಿನ ಜೇಬಿನಲ್ಲಿ ಕೈ ಇಳಿಬಿಟ್ಟು ನಿಂತಿದ್ದರು.

"ಮುಂದೆ ಎಂತಹ ಶಾಲೆಯನ್ನು ನಾವು ಕಟ್ಟೋಣ ?"

ಅವರ ಪಕ್ಕದಲ್ಲೇ ನಿಂತಿದ್ದ, ತೊಮೊಯೆದ ಕೂಸಾದ ವಿಶ್ವವಿದ್ಯಾಲಯದ ವಿದ್ಯಾರ್ಥಿಯನ್ನು ಕೇಳಿದರು. ತೊಮೊಯೆ ಈಗ ಅವರ ಪಾಲಿಗೆ ಮೂಕವಾಗಿತ್ತು.

ಕೊಬಾಯಾಶಿಯವರ ಮಕ್ಕಳ ಮೇಲಿನ ಪ್ರೇಮ ಮತ್ತು ಶಿಕ್ಷಣದ ಮೇಲಿನ ಅವರ ಭಾವಾತಿರೇಕಗಳು ಈಗ ತೊಮೊಯೆವನ್ನು ಕಬಳಿಸಿದ ಜ್ವಾಲೆಗಳಿಗಿಂತಲೂ ತುಂಬಾ ತೀವ್ರವಾದವು, ಬಲವಾದವು. ಮುಖ್ಯೋಪಾಧ್ಯಾಯರು ಸಮಾಧಾನದಿಂದಲೇ ಇದ್ದರು.

ತೊತ್ತೊ-ಚಾನ್ ನಾಗರಿಕರನ್ನು ಸ್ಥಳಾಂತರಿಸುವ ರೈಲಿನಲ್ಲಿ ದೊಡ್ಡವರ ಮಧ್ಯೆ ಬಜ್ಜಿಯಾದಂತೆ ಕುಳಿತಿದ್ದಳು. ರೈಲು ಈಶಾನ್ಯಕ್ಕೆ ಚಲಿಸುತ್ತಿತ್ತು. ಅವಳು ರೈಲಿನಿಂದ ಕಿಟಕಿಯಲ್ಲಿ ಹೊರಗಡೆ ನೋಡಿದಾಗ ಮುಖ್ಯೋಪಾಧ್ಯಾಯರು ಬೀಳ್ಕೊಡುವ ಮಾತುಗಳು ಅನುರಣಿಸಿದವು: "ನಾವು ಮತ್ತೆ ಭೇಟಿಯಾಗೋಣ"; ಅವರು ಪದೇ ಪದೇ ಅವಳಿಗೆ ಹೇಳುತ್ತಿದ್ದ ಮಾತು, "ನೀನೆಷ್ಟು ಒಳ್ಳೆಯ ಹುಡುಗಿ ಗೊತ್ತಾ!" ಈ ಮಾತುಗಳನ್ನು ಮರೆಯುವುದು ಅವಳಿಂದ ಸಾಧ್ಯವಿಲ್ಲ. ಕೊಬೊಯಾಶಿಯವರನ್ನು ಆದಷ್ಟು ಬೇಗ ಮತ್ತೆ ನೋಡುತ್ತೇನೆನ್ನುವ ಸುರಕ್ಷಿತ ಭಾವದಲ್ಲಿಯೇ ಅವಳು ನಿದ್ರಾದೇವಿಯ ಮಡಿಲಲ್ಲಿದ್ದಳು.

ಆತಂಕಮಯ ಪ್ರಯಾಣಿಕರಿಂದ ತುಂಬಿದ್ದ ರೈಲು ಕತ್ತಲೆಯನ್ನು ಸೀಳುತ್ತಾ ಮುಂದೆ ಸಾಗಿತ್ತು.

# ಉಪಸಂಹಾರ

## ನನ್ನ ಜೊತೆ 'ರೈಲುಬಂಡಿ ತರಗತಿ'ಯಲ್ಲಿ ಪ್ರಯಾಣಿಸಿದ ಆ ನನ್ನ ಸ್ನೇಹಿತರು ಈಗೇನು ಮಾಡುತ್ತಿದ್ದಾರೆ ?

***ಅಕಿರಾ ತಾಕಾಹಾಶಿ***

ಕ್ರೀಡಾ ದಿನದಂದು ಎಲ್ಲ ಬಹುಮಾನಗಳನ್ನು ಗೆದ್ದುಕೊಂಡ ತಾಕಾಹಾಶಿ ಮತ್ತೆ ಉದ್ದ ಬೆಳೆಯಲೇ ಇಲ್ಲ. ಆದರೆ ಜಪಾನಿನಲ್ಲೇ ರಗ್ಬಿ ಕಾಲ್ಚೆಂಡಾಟಕ್ಕೆ ಹೆಸರಾದ ಒಂದು ಪ್ರೌಢಶಾಲೆಯನ್ನು ಅವನು ಸೇರಿಕೊಂಡ. ನಂತರ ಮಾಯಿಜಿ ವಿಶ್ವವಿದ್ಯಾಲಯ ಸೇರಿ ಎಲೆಕ್ಟ್ರಾನಿಕ್ಸ್ ಎಂಜಿನಿಯರಿಂಗ್‌ನಲ್ಲಿ ಪದವಿ ಪಡೆದುಕೊಂಡ.

ಈಗವನು ಮಧ್ಯ ಜಪಾನ್‌ನಲ್ಲಿ ಹಾಮಾನ ಲೇಕ್ ಬಳಿಯ ದೊಡ್ಡ ಎಲೆಕ್ಟ್ರಾನಿಕ್ಸ್ ಕಂಪನಿಯಲ್ಲಿ ಪರ್ಸನಲ್ ಮ್ಯಾನೇಜರ್‌ನಾಗಿದ್ದಾನೆ. ಕೆಲಸದ ಸ್ಥಳದಲ್ಲಿ ಸಾಮರಸ್ಯದ ಪರಿಸರ ಮೂಡಿಸುವಲ್ಲಿ ಆತ ಜವಾಬ್ದಾರನಾಗಿದ್ದಾನೆ. ದೂರುಗಳನ್ನು ಮತ್ತು ತೊಂದರೆಗಳನ್ನು ಕೇಳಿಕೊಂಡು ವಿವಾದಗಳನ್ನು ಬಗೆಹರಿಸುತ್ತಾನೆ. ಸ್ವತಃ ನೋವುಂಡ ಆತನಿಗೆ ಇತರರ ಸಮಸ್ಯೆಗಳು ಬೇಗ ಅರ್ಥವಾಗುತ್ತವೆ. ಅಲ್ಲದೆ ಅವನ ಜಾಜ್ವಲ್ಯಮಾನ ಪ್ರಕೃತಿ ಮತ್ತು ಆಕರ್ಷಕ ವ್ಯಕ್ತಿತ್ವಗಳು ಕೂಡ ಸಹಾಯಕಾರಿಯಾಗಿವೆ. ತಾಂತ್ರಿಕ ತಜ್ಞನಾಗಿ, ವಿದ್ಯುತ್‌ಚಾಲಿತ ದೊಡ್ಡ ದೊಡ್ಡ ಯಂತ್ರಗಳ ಬಳಕೆಯಲ್ಲಿ ಕಿರಿಯರಿಗೆ ತರಬೇತಿ ಕೊಡುತ್ತಾನೆ.

ನಾನು ಹಾಮಾಮತ್ಸುಗೆ ತಾಕಾಹಾಶಿ ಮತ್ತು ಅವನ ಹೆಂಡತಿಯನ್ನು ನೋಡಲು ಹೋದೆ. ಅವನನ್ನು ಸಂಪೂರ್ಣವಾಗಿ ಅರ್ಥಮಾಡಿಕೊಂಡಿರುವ ಪ್ರೇಮಮಯಿ ಹೆಂಗಸಾಕೆ. ತಾನು ತೊಮೊಯೆದ ಬಗ್ಗೆ ಎಷ್ಟೊಂದು ಕೇಳಿದ್ದೆನೆಂದರೆ ತಾನೇ ಅಲ್ಲಿಗೆ ಹೋಗುತ್ತಿದ್ದಂತೆ ಭಾಸವಾಗುವುದಾಗಿ ಹೇಳಿದರು. ತಾಕಾಹಾಶಿಗೆ ತನ್ನ ಕುಬ್ಜತನದ ಬಗೆಗೆ ಕಿಂಚಿತ್ತೂ ಕೀಳರಿಮೆಯಿಲ್ಲವೆಂದು ಆಕೆ ಹೇಳಿದಳು. ಅವಳು ಹೇಳುವುದು ಸರಿ ಎಂದು ನನಗನಿಸಿತು. ಹಾಗಿಲ್ಲದಿದ್ದರೆ ಅವನು ನಂತರ ಸೇರಿಕೊಂಡ ಹೆಸರಾಂತ ಶಾಲೆ ಮತ್ತು ಕಾಲೇಜುಗಳಲ್ಲಿ ಕೀಳರಿಮೆ ಅವನ ಬದುಕನ್ನು ದುರ್ಭರಗೊಳಿಸಿಬಿಡುತ್ತಿತ್ತು. ಈಗವನು ಕೆಲಸ ಮಾಡುತ್ತಿರುವ ಪರ್ಸನಲ್ ಇಲಾಖೆಯಲ್ಲಿ ಸೇರಿಕೊಳ್ಳಲು ಅವನಿಗೆ ಸಾಧ್ಯವೇ ಆಗುತ್ತಿರಲಿಲ್ಲ.

ತೊಮೊಯೆದಲ್ಲಿ ತನ್ನ ಮೊದಲ ದಿನದ ಬಗ್ಗೆ ವಿವರಿಸುತ್ತಾ ತನ್ನಂತೆಯೇ ಇತರ

ಅಂಗವಿಕಲ ಮಕ್ಕಳಿರುವುದನ್ನು ಕಂಡಾಕ್ಷಣ ತುಂಬಾ ನಿರಾಳವೆನಿಸಿಬಿಟ್ಟಿತೆಂದು ತಾಕಾಹಾಶಿ ಹೇಳಿದ. ಆ ಕ್ಷಣದಿಂದಾಚೆ ಅವನಲ್ಲಿನ ಅಳುಕು ಮಾಯವಾಗಿಬಿಟ್ಟಿತೆಂದು ಮತ್ತು ಪ್ರತಿದಿನದ ಶಾಲೆಯ ಬದುಕನ್ನು ಎಷ್ಟೊಂದು ಆನಂದಿಸುತ್ತಿದ್ದನೆಂದರೆ ಮನೆಯಲ್ಲಿ ಇರಲೇ ಮನಸ್ಸಾಗುತ್ತಿರಲಿಲ್ಲವಂತೆ. ಮೊಟ್ಟಮೊದಲು ಬೆತ್ತಲೆಯಾಗಿ ಈಜಬೇಕೆಂದಾಗ ತನಗೆ ತುಂಬಾ ಮುಜುಗರವಾಯಿತೆಂದೂ ಆದರೆ ಒಂದೊಂದೇ ಬಟ್ಟೆಗಳನ್ನು ಕಳಚುವಾಗ ತನ್ನ ನಾಚಿಕೆ ಅವಮಾನಗಳು ಸ್ವಲ್ಪ ಸ್ವಲ್ಪವಾಗಿ ಇಲ್ಲವಾಗುತ್ತಾ ಹೋದುವೆಂದು ಆತ ನನಗೆ ಹೇಳಿದನು. ಆನಂತರದಲ್ಲಿ ಊಟದ ಸಮಯದ ಭಾಷಣಗಳನ್ನು ಮಾಡಲು ಇತರರೊಂದಿಗೆ ಎದ್ದುನಿಲ್ಲಲು ಕೂಡ ಆತನಿಗೆ ಮುಜುಗರವಾಗುತ್ತಿರಲಿಲ್ಲ.

ಕೊಬಾಯಾಶಿಯವರು ತನ್ನನ್ನು ತನಗಿಂತ ಎತ್ತರವಾದ ಮರದ ಹಾರು ಕುದುರೆಯ ಮೇಲೆ ಜಿಗಿಯಲು ಹೇಗೆ ಉತ್ತೇಜಿಸುತ್ತಿದ್ದರು ಎಂದು ಅವನು ನನಗೆ ಹೇಳಿದನು. ಅವರು ಯಾವಾಗಲೂ ತಾನದನ್ನು ಮಾಡಬಲ್ಲೆನೆಂದು ಭರವಸೆ ನೀಡುತ್ತಿದ್ದರು. ಈಗ ಹಿಂದಿರುಗಿ ನೋಡಿದರೆ ಕೊಬಾಯಾಶಿಯವರೇ ಬಹುಶಃ ತನಗೆ ಜಿಗಿಯಲು ಸಹಾಯ ಮಾಡುತ್ತಿದ್ದಿರಬೇಕು. ಆದರೆ ಕೊನೆ ಗಳಿಗೆಯವರೆಗೂ ತಾನೇ ಅದನ್ನು ಮಾಡಿರುವಂತೆ ಅನಿಸುವಂತೆ ಮಾಡಿದ್ದರು. ಕೊಬಾಯಾಶಿಯುವರು ಯಾವಾಗಲೂ ಅವನಲ್ಲಿ ಭರವಸೆ ತುಂಬುತ್ತಾ ಯಶಸ್ವೀ ಸಾಧನೆಯ ವರ್ಣಿಸಲಸದಳವಾದ ಆನಂದದ ಅನುಭವ ಪಡೆಯಲು ಆತನಿಗೆ ಸಾಧ್ಯವಾಗುವಂತೆ ಮಾಡುತ್ತಿದ್ದರು. ಅವನು ಹಿಂದೆ ಸರಿಯಲು ಹವಣಿಸುವಾಗಲೆಲ್ಲ ಅವರು ಮುಲಾಜಿಲ್ಲದೆ ಅವನನ್ನು ಮುಂದೆ ತಂದು ಅವನು ಬದುಕಿನ ಬಗ್ಗೆ ಗುಣಾತ್ಮಕ ಭಾವನೆ ಬೆಳೆಸಿಕೊಳ್ಳುವಂತೆ ಮಾಡುತ್ತಿದ್ದರು. ಎಲ್ಲ ಬಹುಮಾನಗಳನ್ನು ಗೆದ್ದುಕೊಂಡಾಗ ತನಗಾದ ಹಿಗ್ಗು-ಸಂಭ್ರಮಗಳನ್ನು ಆತ ಇನ್ನೂ ಮರೆತಿಲ್ಲ. ಹೊಳಪುಕಣ್ಣಿನ ಆತ ಎಂದಿನ ಸಂವೇದನಾಶೀಲತೆಯಿಂದ ತೊಮೊಯೆದ ನೆನಪುಗಳನ್ನು ಸಂತೋಷದಿಂದ ಸವಿಯತೊಡಗಿದ.

ಅಷ್ಟೊಂದು ಉತ್ತಮ ವ್ಯಕ್ತಿಯಾಗಿ ರೂಪುಗೊಳ್ಳಲು ಮನೆಯ ವಾತಾವರಣವೂ ತಾಕಾಹಾಶಿಗೆ ನೆರವಾಗಿರಬೇಕು. ಅದೇನೇ ಇದ್ದರೂ, ಕೊಬಾಯಾಶಿಯವರು ತುಂಬಾ ದೂರಾಲೋಚನೆಯಿಂದ ಎಲ್ಲವನ್ನೂ ನಿಭಾಯಿಸುತ್ತಿದ್ದರೆನ್ನುವುದರಲ್ಲಿ ಅನುಮಾನವಿಲ್ಲ. ನನಗೆ ಯಾವಾಗಲೂ "ನೀನು ನಿಜವಾಗಿಯೂ ಒಳ್ಳೆಯ ಹುಡುಗಿ ಗೊತ್ತಾ!" ಎಂದು ಹೇಳುತ್ತಿದ್ದ ರೀತಿಯಲ್ಲಿಯೇ ತಾಕಾಹಾಶಿಗೆ "ನೀನದನ್ನು ಮಾಡಬಲ್ಲೆ" ಎಂದು ಹೇಳುತ್ತಿದ್ದರು. ಇದೇ ಅವನ ಬದುಕಿನಲ್ಲಿ ನಿರ್ಣಾಯಕ ಹಂತವಾಗಿ ಪರಿಣಮಿಸಿತ್ತು.

ನಾನು ಹಾಮಾಮತ್ಸುವಿನಿಂದ ಹಿಂದಿರುಗುವಾಗ ಸಂಪೂರ್ಣ ಮರೆತಿದ್ದ ವಿಷಯವನ್ನು ತಾಕಾಹಾಶಿ ನನಗೆ ನೆನಪಿಸಿದ. ತೊಮೊಯೆಗೆ ಬರುವ ದಾರಿಯಲ್ಲಿ ಬೇರೆ ಶಾಲೆಯ ಮಕ್ಕಳು ಅವನನ್ನು ವಿಪರೀತ ಚುಡಾಯಿಸುತ್ತಿದ್ದರು. ಅವನು ತುಂಬಾ ಖಿನ್ನನಾಗಿ ಶಾಲೆಗೆ ಬರುತ್ತಿದ್ದ. ಆಗ ನಾನು ಹುಡುಗರು ಅವನಿಗೇನು

ಮಾಡಿದರೆಂದು ತಕ್ಷಣ ಕೇಳುತ್ತಿದ್ದೆ. ಮತ್ತು ಮಿಂಚಿನಂತೆ ಗೇಟಿನ ಹೊರಗೆ ಓಡುತ್ತಿದ್ದೆ. ಕೆಲಸಮುಯದ ನಂತರ ಗೇಟಿನೊಳಗೆ ಓಡುತ್ತಾ ಬಂದು, ಈಗೆಲ್ಲ ಸರಿಹೋಗಿದೆ, ಇನ್ನು ಮುಂದೆ ಹೀಗಾಗುವುದಿಲ್ಲ ಎಂದು ಹೇಳುತ್ತಿದ್ದೆ.

"ಆಗ ನೀನು ಬಹಳಷ್ಟು ಸಂತೋಷ ನೀಡಿರುವೆ" ಎಂದು ನಾವಿಬ್ಬರೂ ಅಗಲುವಾಗ ಹೇಳಿದ್ದ. ನನಗೆ ಇದೆಲ್ಲ ಸಂಪೂರ್ಣವಾಗಿ ಮರೆತು ಹೋಗಿತ್ತು. "ಥ್ಯಾಂಕ್ಸ್, ತಾಕಾಹಾಶಿ, ನೀನದನ್ನು ನೆನಪಿಟ್ಟುಕೊಂಡಿರುವೆಯಲ್ಲ."

## *ಮಿಯೋ-ಚಾನ್ (ಮಿಯೋ-ಕಾನೆಕೋ)*

ಕೊಬಾಯಾಶಿಯವರ ಮೂರನೇ ಮಗಳು ಮಿಯೋ-ಚಾನ್, ಕುನಿತಾಚಿ ಸಂಗೀತದ ಕಾಲೇಜಿನ ಶಿಕ್ಷಣ ವಿಭಾಗದಿಂದ ಪದವಿ ಪಡೆದಳು. ಈಗ ಅದೇ ಕಾಲೇಜಿಗೆ ಸೇರಿದ ಪ್ರಾಥಮಿಕ ಶಾಲೆಯಲ್ಲಿ ಸಂಗೀತ ಕಲಿಸುತ್ತಾಳೆ. ಅವಳ ತಂದೆಯಂತೆಯೇ ಅವಳಿಗೂ, ಸಣ್ಣ ಮಕ್ಕಳಿಗೆ ಕಲಿಸುವುದೆಂದರೆ ಬಲು ಪ್ರೀತಿ. ಅವಳು ಮೂರು ವರ್ಷದವಳಿದ್ದಾಗಿನಿಂದಲೂ ಕೊಬಾಯಾಶಿಯವರು ಅವಳ ನಡಿಗೆ ಮತ್ತು ದೇಹದ ಚಲನೆಯ ಲಯವನ್ನು ಗಮನಿಸುತ್ತಿದ್ದರು. ಅವಳು ಮಾತು ಕಲಿಯುವುದನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದರು. ಇದು ಮಕ್ಕಳಿಗೆ ಕಲಿಸುವುದರಲ್ಲಿ ಅವರಿಗೆ ಅಪಾರ ಒಳನೋಟಗಳನ್ನು ಗಳಿಸಿಕೊಟ್ಟಿತು.

## *ಸಾಕ್ಯೋ ಮತ್ಸುಯಾಮಾ (ಈಗ ಶ್ರೀಮತಿ ಸಾಯಿತೋ)*

ದೊಡ್ಡ ದೊಡ್ಡ ಕಂಗಳ ಸಾಕ್ಯೋ-ಚಾನ್, ನಾನು ತೊಮೊಯೆಕ್ಕೆ ಸೇರಿಕೊಂಡ ದಿನ ಮೊಲದ ಚಿತ್ರವಿದ್ದ ಮೇಲಂಗಿಯನ್ನು ಹಾಕಿಕೊಂಡಿದ್ದವಳು, ನಂತರ ಮಿತ ಹೈಸ್ಕೂಲ್ ಎಂದು ಈಗ ಹೆಸರಾಗಿರುವ, ಆ ದಿನಗಳಲ್ಲಿ ಹುಡುಗಿಯರಿಗೆ ಪ್ರವೇಶ ತುಂಬಾ ಕಷ್ಟವಿದ್ದ ಶಾಲೆಯನ್ನು ಸೇರಿಕೊಂಡಳು. ಅವಳು ಮುಂದೆ ಟೋಕಿಯೋ ಮಹಿಳಾ ಕ್ರಿಶ್ಚಿಯನ್ ವಿಶ್ವವಿದ್ಯಾಲಯದ ಇಂಗ್ಲಿಷ್ ವಿಭಾಗಕ್ಕೆ ಹೋದಳು. ವೈಡಬ್ಲ್ಯೂಸಿಎನಲ್ಲಿ ಇಂಗ್ಲೀಷ್ ಅಧ್ಯಾಪಕಿಯಾದಳು. ಈಗಲೂ ಅಲ್ಲೇ ಕೆಲಸ ಮಾಡುತ್ತಿದ್ದಾಳೆ. ಅಲ್ಲಿನ ತನ್ನ ಬೇಸಿಗೆಯ ಕ್ಯಾಂಪುಗಳಲ್ಲಿ ತೊಮೊಯೆದ ಅನುಭವವನ್ನು ಚೆನ್ನಾಗಿ ಬಳಸಿಕೊಳ್ಳುತ್ತಾಳೆ.

ಜಪಾನಿನ ಪರ್ವತ ಹೊತಾಕವನ್ನು ಏರುವಾಗ ಸಂಧಿಸಿದ ವ್ಯಕ್ತಿಯೊಬ್ಬರನ್ನು ಆಕೆ ಮದುವೆಯಾದಳು. ತಾವು ಸಂಧಿಸಿದ ಪರ್ವತದ ಹೆಸರಿನ ಕೊನೆಯಭಾಗ 'ಯಾಸುತಾಕ' ಎಂದು ಮಗನಿಗೆ ಹೆಸರಿಟ್ಟಿದ್ದಾರೆ.

**ತಾಯಿಜಿ ಯಾಮಾನೌಚಿ**

ನನ್ನನ್ನು ಮದುವೆಯಾಗಲಾರೆನೆಂದು ಹೇಳಿದ್ದ ತಾಯಿ-ಚಾನ್, ಜಪಾನಿನ ಹೆಸರಾಂತ ಭೌತಶಾಸ್ತ್ರಜ್ಞನಾಗಿದ್ದಾನೆ. ಅವನು ಅಮೇರಿಕದಲ್ಲಿ ವಾಸಿಸುತ್ತಾನೆ. ಈತ 'ಪ್ರತಿಭಾ ಪಲಾಯನ' ಕ್ಕೊಂದು ಉದಾಹರಣೆ. ಅವನು ಟೋಕಿಯೋ ಯುನಿವರ್ಸಿಟಿ ಆಫ್ ಎಜುಕೇಷನ್ನಿನ ವಿಜ್ಞಾನ ವಿಭಾಗದಿಂದ ಭೌತಶಾಸ್ತ್ರದಲ್ಲಿ ಪದವಿ ಪಡೆದನು. ಎಂ.ಎಸ್ಸಿ. ಮುಗಿಸಿದ ನಂತರ ಫುಲ್‌ಬ್ರೈಟ್ ವಿದ್ಯಾರ್ಥಿ ವೇತನ ಪಡೆದು ಅಮೇರಿಕಕ್ಕೆ ಹೋದನು. ಐದು ವರ್ಷದ ನಂತರ ರೋಚಸ್ಟೆರ್ ವಿಶ್ವವಿದ್ಯಾನಿಲಯದಿಂದ ಡಾಕ್ಟರೇಟ್ ಪಡೆದನು. ಎಕ್ಸ್‌ಪೆರಿಮೆಂಟಲ್ ಹೈ-ಎನರ್ಜಿ ಫಿಸಿಕ್ಸ್‌ನಲ್ಲಿ ಸಂಶೋಧನೆ ನಡೆಸುತ್ತಾ ಅಲ್ಲಿಯೇ ಉಳಿದನು. ಈಗವನು ಪ್ರಪಂಚದ ಅತಿ ದೊಡ್ಡ ಪ್ರಯೋಗಾಲಯವಾದ 'ಫರ್ಮಿ ನ್ಯಾಷನಲ್ ಅಕ್ಸಿಲರೇಟರ್ ಲ್ಯಾಬೋರೇಟರಿ'ಯಲ್ಲಿ ಅಸಿಸ್ಟೆಂಟ್ ಡೈರೆಕ್ಟರ್‌ನಾಗಿದ್ದಾನೆ. ಅಮೇರಿಕದ ಐವತ್ತುಮೂರು ವಿಶ್ವವಿದ್ಯಾಲಯಗಳ ಅತ್ಯಂತ ಬುದ್ಧಿವಂತರನ್ನು ಹೊಂದಿರುವ ಈ ಪ್ರಯೋಗಾಲಯ 145 ಭೌತಶಾಸ್ತ್ರಜ್ಞರನ್ನು ಮತ್ತು 1,400 ತಾಂತ್ರಿಕ ಸಿಬ್ಬಂದಿಯನ್ನು ಹೊಂದಿರುವ ಮಹಾನ್ ಪ್ರಯೋಗಾಲಯವಾಗಿದೆ. ತಾಯಿ-ಚಾನ್ ಎಂಥಾ ಅಸಾಧಾರಣ ಪ್ರತಿಭಾಶಾಲಿಯೆಂಬುದು ಇದರಿಂದ ತಿಳಿಯುತ್ತದೆ. ಐದು ವರ್ಷದ ಹಿಂದೆ 500 ಬಿಲಿಯನ್ ಎಲೆಕ್ಟ್ರಾನ್ ಓಲ್ಟ್‌ಗಳ ಹೈ-ಎನರ್ಜಿ ಬೀಮ್ (ಕಿರಣ) ಉತ್ಪಾದಿಸುವಲ್ಲಿ ಯಶಸ್ವಿಯಾದ ಈ ಪ್ರಯೋಗಾಲಯ ಇಡೀ ವಿಶ್ವದ ಗಮನ ಸೆಳೆಯಿತು.

ಇತ್ತೀಚೆಗೆ, ತಾಯಿ-ಚಾನ್‌ನು ಕೊಲಂಬಿಯ ವಿಶ್ವವಿದ್ಯಾಲಯದ ಪ್ರೊಫೆಸರೊಬ್ಬರ ಸಹಯೋಗದೊಂದಿಗೆ 'ಅಪ್‌ಸಿಲಾನ್' ಕಂಡುಹಿಡಿದಿದ್ದಾನೆ. ತಾಯಿ-ಚಾನ್ ಒಂದು ದಿನ ನೊಬೆಲ್ ಪ್ರಶಸ್ತಿ ಪಡೆಯುತ್ತಾನೆನ್ನುವುದರಲ್ಲಿ ಆಶ್ಚರ್ಯವೇ ಇಲ್ಲ.

ರೋಚಸ್ಟರ್ ವಿಶ್ವವಿದ್ಯಾಲಯದಲ್ಲಿ ಗಣಿತಶಾಸ್ತ್ರದಲ್ಲಿ ತುಂಬಾ ಮೇಲ್ದರ್ಜೆಯ ಪದವಿ ಪಡೆದ ಪ್ರತಿಭಾವಂತ ಹುಡುಗಿಯನ್ನು ತಾಯಿ-ಚಾನ್ ಮದುವೆಯಾದ. ತಾಯಿ-ಚಾನ್‌ನಂಥ ತಲೆಯಿರುವ ಹುಡುಗ ಯಾವ ಬಗೆಯ ಪ್ರಾಥಮಿಕ ಶಾಲೆಯಲ್ಲಿ ಕಲಿತಿದ್ದರೂ, ಮುಂದೆ ಬಂದೇ ಬರುತ್ತಿದ್ದನು. ಆದರೆ ತಮಗೆ ಪ್ರಿಯವಾದ ವಿಷಯವನ್ನು ಇಚ್ಛಾನುಸಾರ ಕಲಿಯುವ ಅವಕಾಶ ಒದಗಿಸುವ ತೊಮೊಯೆದ ಪದ್ಧತಿ ಅವನ ಪ್ರತಿಭೆ ಬೆಳೆಯಲು ಸಹಕಾರಿಯಾಯಿತು. ತರಗತಿಯಲ್ಲಿ ಯಾವಾಗಲೂ ತನ್ನ ಮದ್ಯಸಾರ ದೀಪ ಮತ್ತು ಫ್ಲಾಸ್ಕ್‌ಗಳು ಮತ್ತು ನಳಿಕೆಗಳ ಜತೆ ಭಯಂಕರ ಕಷ್ಟಕರವಾದ ವಿಜ್ಞಾನ ಮತ್ತು ಭೌತಶಾಸ್ತ್ರದ ಪುಸ್ತಕಗಳನ್ನು ಓದುತ್ತಾ ತನ್ನ ಕೆಲಸದಲ್ಲಿ ನಿರತನಾಗಿರುತ್ತಿದ್ದುದು ಇನ್ನೂ ನನ್ನ ನೆನಪಿನಲ್ಲಿದೆ.

*ಕುನಿಯೋ ಓಯಿ*

ನನ್ನ ಜಡೆಗಳನ್ನು ಎಳೆದ ಓಯಿ, ಈಗ ಹೆಸರಾಂತ ಆರ್ಕಿಡ್ ವ್ಯಾಪಾರಿ-ಬೆಳೆಗಾರನಾಗಿದ್ದಾನೆ. ಅವನ ಆರ್ಕಿಡ್‌ಗಳು ಅತ್ಯಂತ ಬೆಲೆಬಾಳುತ್ತವೆ. ಅವನದು ತುಂಬಾ ಪರಿಣತ ಕ್ಷೇತ್ರ. ಅವನಿಗೆ ಸಿಕ್ಕಾಪಟ್ಟೆ ಬೇಡಿಕೆಯಿದ್ದು ಜಪಾನಿನಾದ್ಯಂತ ಪ್ರಯಾಣಿಸುತ್ತಾನೆ. ಅವನ ಪ್ರಯಾಣಗಳ ಮಧ್ಯೆ ಸಾಕಷ್ಟು ಕಷ್ಟಪಟ್ಟು ಅವನನ್ನು ಫೋನಿನಲ್ಲಿ ಸಂಪರ್ಕಿಸಿದೆ. ಸಂಕ್ಷಿಪ್ತವಾಗಿ ಮಾತನಾಡಲು ಸಾಧ್ಯವಾಯಿತು.

"ತೊಮೊಯೆ ನಂತರ ನೀನು ಎಲ್ಲಿ ವಿದ್ಯಾಭ್ಯಾಸ ಮುಂದುವರೆಸಿದೆ ?"

"ಎಲ್ಲೂ ಇಲ್ಲ."

"ಎಲ್ಲೂ ಹೋಗಲಿಲ್ಲವಾ ? ನೀನು ತೊಮೊಯೆ ಒಂದೇ ಶಾಲೆಗೇನಾ ಹೋದದ್ದು ?"

"ಹೌದು."

"ಓ ದೇವರೇ, ನೀನು ಮಾಧ್ಯಮಿಕ ಶಾಲೆಗೆ ಕೂಡ ಹೋಗಲಿಲ್ಲವಾ ?"

"ಹೋಗಿದ್ದೆ, ನಾನು ಕ್ಯುಷ್ಯುಗೆ ಸ್ಥಳಾಂತರಿಸಲ್ಪಟ್ಟ ನಂತರ ಕೆಲತಿಂಗಳು ಓಯಿತಾ ಸೆಕೆಂಡರಿ ಶಾಲೆಗೆ ಹೋಗಿದ್ದೆ."

"ಆದರೆ, ಸೆಕೆಂಡರಿ ಶಿಕ್ಷಣವನ್ನು ಮುಗಿಸಲಿಲ್ಲವಾ ?"

"ಇಲ್ಲ, ನಾನು ಮುಗಿಸಲಿಲ್ಲ."

"ಅಬ್ಬಾ ! ಇವನೆಷ್ಟು ಹಗುರ ಸ್ವಭಾವದವ" ನಾನೆಂದುಕೊಂಡೆ. ಯುದ್ಧಕ್ಕೆ ಮುಂಚೆ ಓಯಿಯ ತಂದೆಗೆ ಒಂದು ದೊಡ್ಡ ನರ್ಸರಿ ಫಾರಂ ಇತ್ತು. ನೈರುತ್ಯ ಟೋಕಿಯೋದ ತೊದೊರೆಕಿ ಎನ್ನುವ ಬಹುಪಾಲು ಪ್ರದೇಶವನ್ನು ಅದು ಆಕ್ರಮಿಸಿಕೊಂಡಿತ್ತು. ಆದರೆ ಅದೆಲ್ಲ ಬಾಂಬ್ ದಾಳಿಯಲ್ಲಿ ನಾಶವಾಗಿಹೋಯಿತು.

ಅವನು ವಿಷಯ ಬದಲಾಯಿಸಿದಾಗ ಅವನ ಮಾಮೂಲಿ ಸೌಮ್ಯ ಸ್ವಭಾವ ನಮ್ಮ ಮುಂದಿನ ಮಾತುಕತೆಯಲ್ಲಿ ಸ್ಪಷ್ಟವಾಗಿ ಮೂಡಿಬಂದಿತ್ತು.

"ಅತ್ಯಂತ ಸುವಾಸನೆಯುಳ್ಳ ಹೂವು ಯಾವುದೆಂದು ನಿನಗೆ ಗೊತ್ತಾ? ನನ್ನ ದೃಷ್ಟಿಯಲ್ಲಿ ಅದು ಚೈನೀಸ್ ಸ್ಪ್ರಿಂಗ್ ಆರ್ಕಿಡ್. ಯಾವ ಸುಗಂಧವೂ ಅದಕ್ಕೆ ಸಾಟಿಯಾಗಲಾರದು."

"ಅದಕ್ಕೆ ತುಂಬಾ ಬೆಲೆಯಾ ?"

"ಕೆಲವು ದುಬಾರಿ, ಕೆಲವು ಅಷ್ಟಿಲ್ಲ."

"ಅವು ನೋಡಲು ಹೇಗೆ ಕಾಣುತ್ತವೆ ?"

"ನೋಡಲೇನೂ ಅಲಂಕಾರಿಕವಾಗಿಲ್ಲ. ಒಂಥರಾ ಮುದುಡಿಕೊಂಡಂತೆ ಕಾಣುತ್ತವೆ. ಆದರೆ ಅದೇ ಅವುಗಳ ಮೋಹಕತೆ."

ಅವನು ತೊಮೊಯೆದಲ್ಲಿ ಹೇಗಿದ್ದನೋ ಹಾಗೇ ಇದ್ದಾನೆ. ತಾನು ಸೆಕೆಂಡರಿ ಶಾಲೆಯನ್ನು ಕೂಡ ಮುಗಿಸದಿರುವುದು ಅವನಿಗೆ ಒಂದಿಷ್ಟೂ ಬೇಸರವಾಗಿಲ್ಲವೆಂಬುದು ಅವನ ಮಾತಿನಿಂದಲೇ ತಿಳಿಯಿತು. ಅವನು ತನ್ನದೇ

ಕೆಲಸವನ್ನು ಮಾಡಿಕೊಂಡಿದ್ದಾನೆ ಮತ್ತು ನಿಜವಾಗಿಯೂ ಆತ್ಮವಿಶ್ವಾಸವುಳ್ಳ ವ್ಯಕ್ತಿ. ಅವನಿಂದ ನಾನು ಪ್ರಭಾವಿತಳಾದೆ.

### *ಕಾಜುವೊ ಅಮದೇರಾ*

ಪ್ರಾಣಿಗಳನ್ನು ಪ್ರೀತಿಸುತ್ತಿದ್ದ ಅಮದೇದೆರಾನು ದೊಡ್ಡವನಾದ ನಂತರ ಪಶುವೈದ್ಯನಾಗಲು ಬಯಸಿದ್ದ. ಅವನಿಗೆ ಫಾರಂ ಇತ್ತು. ದುರದೃಷ್ಟವಶಾತ್ ಅವನ ತಂದೆ ಅಕಾಲಿಕವಾಗಿ ತೀರಿಕೊಂಡಾಗ ಅವನು ತನ್ನ ಬದುಕಿನಲ್ಲಿ ವಿಪರೀತ ಬದಲಾವಣೆಗಳನ್ನು ಮಾಡಿಕೊಳ್ಳಬೇಕಾಯಿತು. 'ನಿಹಾನ್ ಯೂನಿವರ್ಸಿಟೀಸ್ ಸ್ಕೂಲ್ ಆಫ್ ಅನಿಮಲ್ ಹಸ್‌ಬೆಂಡರಿ'ಯನ್ನು ಬಿಟ್ಟು ಕಿಯೋ ಆಸ್ಪತ್ರೆಯಲ್ಲಿ ಕೆಲಸಕ್ಕೆ ಸೇರಿಕೊಳ್ಳಬೇಕಾಯಿತು. ಈಗವನು 'ಸೆಲ್ಫ್-ಡಿಫೆನ್ಸ್ ಫೋರ್ಸ್'ನ ಸೆಂಟ್ರಲ್ ಆಸ್ಪತ್ರೆಯಲ್ಲಿ ಕ್ಲಿನಿಕಲ್ ಪರೀಕ್ಷೆಗೆ ಸಂಬಂಧಿಸಿದ ಜವಾಬ್ದಾರಿಯುತ ಕೆಲಸದಲ್ಲಿದ್ದಾನೆ.

### *ಆಯಿಕೋ ಸಾಯಿಷೋ (ಈಗ ಶ್ರೀಮತಿ ತಾನಾಕಾ)*

ಅಡ್ಮಿರಲ್ ಟೋಗೋರ ಸೋದರ ಮೊಮ್ಮಗಳಾದ ಇವಳು ಆವೋಯಾಮ ಗಾಕುಯಿನ್‌ಗೆ ಸೇರಿದ್ದ ಪ್ರಾಥಮಿಕ ಶಾಲೆಯಿಂದ ತೊಮೊಯೆಗೆ ಬಂದಿದ್ದಳು. ಆ ದಿನಗಳಲ್ಲಿ ನಾನು ಅವಳನ್ನು ತುಂಬಾ ಗಂಭೀರವಾದ ಅತ್ಯುತ್ತಮ ಹುಡುಗಿ ಎಂದು ಭಾವಿಸುತ್ತಿದ್ದೆ. ಅವಳು ತಂದೆಯನ್ನು ಕಳೆದುಕೊಂಡದ್ದರಿಂದ ಹಾಗೆ ಕಾಣುತ್ತಿದ್ದಿರಬಹುದು. ಥರ್ಡ್ ಗಾರ್ಡ್ಸ್ ರೆಜಿಮೆಂಟ್‌ನಲ್ಲಿ ಮೇಜರಾಗಿದ್ದ ಅವಳ ತಂದೆ ಮಂಚೂರಿಯನ್ ಪ್ರಕರಣದಲ್ಲಿ ತೀರಿಕೊಂಡರು.

ಕಾಮಾಕುರಾ ಗರ್ಲ್ಸ್ ಹೈಸ್ಕೂಲಿನಿಂದ ಪದವಿ ಪಡೆದ ನಂತರ ಆಯಿಕೋ ವಾಸ್ತುಶಿಲ್ಪಿಯೊಬ್ಬರನ್ನು ಮದುವೆಯಾದಳು. ಈಗ ಅವಳ ಇಬ್ಬರೂ ಗಂಡು ಮಕ್ಕಳು ಬೆಳೆದು ದೊಡ್ಡವರಾಗಿ ವ್ಯಾಪಾರ ಮಾಡಿಕೊಂಡಿದ್ದಾರೆ. ಅವಳು ತನ್ನ ವಿರಾಮದ ಬಹುಕಾಲವನ್ನು ಕಾವ್ಯರಚನೆಯಲ್ಲಿ ಕಳೆಯುತ್ತಾಳೆ.

"ಚಕ್ರವರ್ತಿ ಮೀಜೀಯ ಆಸ್ಥಾನದಲ್ಲಿ ಕವಿಯತ್ರಿಯಾಗಿದ್ದ ನಿನ್ನ ಪ್ರಸಿದ್ಧ ದೊಡ್ಡಮ್ಮನ ಪರಂಪರೆಯನ್ನು ನೀನು ಮುಂದುವರೆಸುತ್ತಿದ್ದೀಯಾ ಎಂದಾಯಿತು" ನಾನೆಂದೆ.

"ಅಯ್ಯೋ ಇಲ್ಲಪ್ಪ!" ಅವಳು ಮುಜುಗರದಿಂದ ನಗುತ್ತಾ ಹೇಳಿದಳು.

"ನೀನು ತೊಮೊಯೆದಲ್ಲಿ ಇದ್ದಾಗ ಇದ್ದಷ್ಟೇ ನಿರಭಿಮಾನಿಯಾಗಿರುವೆ."

"ಮತ್ತು ಹೆಂಗಸಿನ ಹಾಗೆ" ಅದಕ್ಕವಳು ಉತ್ತರಿಸಿದ್ದು ಹೀಗೆ, "ನಿನಗೆ ಗೊತ್ತಾ, ನಾನು ಬೆಂಕ್ಕೆ ಪಾತ್ರ ಮಾಡುತ್ತಿದ್ದಾಗ ಇದ್ದ ಹಾಗೆಯೇ ಈಗಲೂ ನನ್ನ ಮೈಕಟ್ಟು ಇರುವುದು."

ಎಂತಹ ಬೆಚ್ಚಗಿನ ಸುಖಮಯ ಕುಟುಂಬ ಅವಳದ್ದಾಗಿರಬಹುದು ಎಂದು ಅವಳ

ದನಿಯನ್ನು ಕೇಳಿಯೋ ಊಹಿಸಿಕೊಳ್ಳಬಲ್ಲವಳಾಗಿದ್ದೆ.

*ಕಾಯಿಕೋ ಆಯೋಕಿ (ಈಗ ಶ್ರೀಮತಿ ಕುವಾಬಾರಾ)*

ಹಾರುವ ಕೋಳಿಗಳನ್ನು ಹೊಂದಿದ್ದ ಕಾಯಿಕೋ-ಚಾನ್ ಈಗ ಕಾಯಿವೊ ಯೂನಿವರ್ಸಿಟಿಯ ಎಲಿಮೆಂಟರಿ ಶಾಲೆಯ ಉಪಾಧ್ಯಾಯರೊಬ್ಬರನ್ನು ಮದುವೆಯಾಗಿದ್ದಾಳೆ. ಅವಳಿಗೆ ಮದುವೆಯಾಗಿರುವ ಒಬ್ಬ ಮಗಳಿದ್ದಾಳೆ.

*ಯೋಇಚಿ ಮಿಗಿತಾ*

ಶವಸಂಸ್ಕಾರ ಭೋಜನದ ಹಿಟ್ಟಿನುಂಡೆ ತರುವುದಾಗಿ ಆಶ್ವಾಸನೆ ಕೊಡುತ್ತಲೇ ಇದ್ದ ಮಿಗಿತಾನು ತೋಟಗಾರಿಕೆಯಲ್ಲಿ ಪದವಿ ಪಡೆದನು. ಆದರೆ ಚಿತ್ರಕಲೆಯಲ್ಲಿ ಸದಾ ಆಸಕ್ತಿ ಹೊಂದಿದ್ದ ಅವನು ಪುನಃ ಮುಸಷಿನೋ ಕಾಲೇಜ್ ಆಫ್ ಫೈನ್ ಆರ್ಟ್ಸ್‌ಗೆ ಸೇರಿ ಪದವಿ ಪಡೆದನು. ಈಗವನು ತನ್ನದೇ ಸ್ವಂತ ಗ್ರಾಫಿಕ್ ಡಿಸೈನ್ ಕಂಪನಿಯನ್ನು ನಡೆಸುತ್ತಾರೆ.

*ರಯೋ-ಚಾನ್*

ಯುದ್ಧಕ್ಕೆ ಹೋಗಿದ್ದ ಕಾವಲುಗಾರ ರಯೋ-ಚಾನ್‌ನು ಸುರಕ್ಷಿತವಾಗಿ ವಾಪಸ್ಸು ಬಂದನು. ಪ್ರತಿ ನವೆಂಬರ್ ಮೂರರಂದು ತೊಮೊಯೆದ ಕೂಟದಲ್ಲಿ ಭಾಗವಹಿಸುವುದನ್ನು ಅವನು ಮರೆಯುವುದಿಲ್ಲ.

---

Lasertypeset at Laser Line Graphics, Bangalore and
printed at J.J. Offset, Delhi